ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ-೨

ಪ್ರಧಾನ ಸಂಪಾದಕ:
ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

# ಕರ್ಣಾಟಕ ಕಾದಂಬರೀ ಸಂಗ್ರಹ




ಸಂಪಾದಕರು:
ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

ಬೆಂಗಳೂರು:
ಮೈಸೂರು ಸರ್ಕಾರದ ಮುದ್ರಣಾಲಯದ ಸೂಪರಿಂಟೆಂಡೆಂಟ್‌ರವರಿಂದ
ಮುದ್ರಿಸಲ್ಪಟ್ಟಿತು.
೧೯೪೪

ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ – ೨

ಪ್ರಧಾನ ಸಂಪಾದಕ :

ಬಿ. ಎಂ. ಶ್ರೀಕಂಠಯ್ಯ, ಎಂ. ಎ., ಬಿ. ಎಲ್.

# ಕರ್ಣಾಟಕ ಕಾದಂಬರೀ ಸಂಗ್ರಹ




ಸಂಪಾದಕ :

ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

ಬೆಂಗಳೂರು :

ಮೈಸೂರು ಸರ್ಕಾರದ ಮುದ್ರಣಾಲಯದ ಸೂಪರಿಂಟೆಂಡೆಂಟರವರಿಂದ
ಮುದ್ರಿಸಲ್ಪಟ್ಟಿತು

೧೯೪೪

# ಮುನ್ನುಡಿ

(ಮೊದಲನೆಯ ಮುದ್ರಣಕ್ಕೆ ಬರೆದದ್ದು)

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿ ಪಡಿಸಬೇಕೆಂಬ ಘನೋದ್ದೇಶದಿಂದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಒಂದು "ಕನ್ನಡ ಪ್ರಕಟನ ಸಮಿತಿ"ಯನ್ನು ನಿಯಮಿಸಿ, ಪ್ರತಿವರ್ಷವೂ ಪ್ರಸಿದ್ಧರಾದ ಗ್ರಂಥಕರ್ತರನ್ನು ನಿಷ್ಕರ್ಷಿಸಿ ಅವರಿಂದ ಗ್ರಂಥಗಳನ್ನು ಪ್ರಕಟನೆಗೆ ಸಿದ್ಧಪಡಿಸುವುದಕ್ಕೆ ತಕ್ಕ ಏರ್ಪಾಡನ್ನು ಮಾಡಿರುತ್ತಾರೆ.

ಈ ಗ್ರಂಥಗಳು ಎರಡು ಬಗೆಯವು:—

೧. ಈ ನವೀನ ಕಾಲಕ್ಕೆ ಬೇಕಾದ ಮತ್ತು ಜನಸಾಮಾನ್ಯಕ್ಕೆ ಜ್ಞಾನವನ್ನು ಹರಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ತ್ವ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ ಮುಂತಾದ ವಿಷಯಗಳನ್ನು ಲಲಿತವಾದ ಹೊಸಗನ್ನಡ ಶೈಲಿಯಲ್ಲಿ, ವಿವಾದಾಸ್ಪದವಲ್ಲದ ನಿಷ್ಕೃಷ್ಟವಾದ ರೀತಿಯಲ್ಲಿ ತಿಳಿಸತಕ್ಕುವು. ಇವು ಸ್ವತಂತ್ರ ಗ್ರಂಥಗಳಾಗಿರಬಹುದು; ಅಥವಾ ಭಾಷಾಂತರಗಳಾಗಿರಬಹುದು; ಅಥವಾ ಸಂಕಲನಗಳಾಗಿರಬಹುದು.

೨. ಕನ್ನಡದ ಪೂರ್ವದ ಸಾಹಿತ್ಯವನ್ನು ಜನರಲ್ಲಿಯೂ ವಿದ್ಯಾರ್ಥಿ ವರ್ಗದಲ್ಲಿಯೂ ಹೆಚ್ಚು ಪ್ರಚಾರಕ್ಕೆ ತರುವುದಕ್ಕಾಗಿ, ಉತ್ತಮ ಕಾವ್ಯಗಳ ಸಂಗ್ರಹಗಳು. ಇವು ವಿದ್ಯಾರ್ಥಿಗಳ ಪಾಠಕ್ಕೆ ಅನುಕೂಲವಾಗಿರಬೇಕು; ಮೂಲಪ್ರತಿಗಳನ್ನು ಪರಿಶೋಧಿಸಿದ ಶುದ್ಧ ಪಾಠವನ್ನು ಒಳಕೊಂಡು, ಪೀಠಿಕೆ, ಶಬ್ದಕೋಶ, ಆವಶ್ಯಕವಾದ ಟಿಪ್ಪಣಿಗಳೊಡನೆ ಕೂಡಿರಬೇಕು.

ಹೀಗೆ ಏರ್ಪಟ್ಟು ಗ್ರಂಥಕರ್ತರಿಗೆ ಒಪ್ಪಿಸಿದ ಕೆಲಸಗಳಲ್ಲಿ ಈ "ಕರ್ಣಾಟಕ ಕಾದಂಬರೀ ಸಂಗ್ರಹ" ಎರಡನೆಯದು. ಈ ಸಂಗ್ರಹ ಕಾರ್ಯವನ್ನು ಕುರಿತು ಗುಣಜ್ಞರ ಪರಾಮರ್ಶೆಗಾಗಿ ಒಂದೆರಡು ಮಾತನ್ನು ಅರಿಕೆ ಮಾಡಿಕೊಳ್ಳಬೇಕಾಗಿದೆ.

ನಮ್ಮ ಪ್ರೌಢಕಾವ್ಯಗಳು ಸಾಧಾರಣವಾಗಿ ಬಹಳ ವಿಸ್ತಾರವಾಗಿರುವುದರಿಂದ ಅವುಗಳಲ್ಲಿ ಬಹು ಸ್ವಲ್ಪಭಾಗವನ್ನು ಮಾತ್ರ ಪರೀಕ್ಷೆ

ಗಳಿಗೆ ಪಠ್ಯ ಭಾಗವಾಗಿ ಇಡುವ ಪದ್ಧತಿ ರೂಢಿಗೆ ಬಂದಿದೆ. ಸಾಮಾನ್ಯ ಜನರಂತೂ ಈ ಕಾವ್ಯಗಳನ್ನು ಓದುವುದೇ ಅಪೂರ್ವ. ಇದು ವ್ಯಸನ ಕರವಾದ ಸಂಗತಿ. ಒಂದು ಕಾವ್ಯದ ಸೊಬಗನ್ನು, ಒಬ್ಬ ಕವಿಯ ಕವಿತಾಶಕ್ತಿಯನ್ನು, ತಿಳಿಯಬೇಕಾದರೆ ಕಾವ್ಯವನ್ನು ಸಂಪೂರ್ಣವಾಗಿ ಓದಬೇಕು; ಇಲ್ಲ, ಉತ್ತಮ ಭಾಗಗಳೆಲ್ಲವನ್ನಾದರೂ ನೋಡಬೇಕು. ಈ ಸಮಷ್ಟಿದೃಷ್ಟಿ ಸಾಧ್ಯವಾಗುವಂತೆ, ಪಾಠಕ್ಕೆ ಪ್ರಮಾಣ ಅತಿಮೀರ ದಂತೆ, ಕಾವ್ಯಗಳನ್ನು ಅದರದರ ಸ್ವಭಾವಕ್ಕೆ ಉಚಿತವಾಗಿ ಸಂಗ್ರಹಿಸಿ ದರೆ ವಿದ್ಯಾರ್ಥಿಗಳಿಗೂ ಜನಸಾಮಾನ್ಯಕ್ಕೂ ಹಿತಕರವೂ ಪ್ರಯೋಜನ ಕರವೂ ಆಗಬಹುದೆಂಬ ನಂಬಿಕೆಯಿಂದ ಈ ಸಂಗ್ರಹಗಳನ್ನು ಮಾಡುತ್ತದೆ. ಇದರಲ್ಲಿ ಮುಖ್ಯ ಗಮನ ಕಥಾಸರಣಿ ಕೆಡಬಾರದು; ಒಟ್ಟು ಕಥೆಯ ಸ್ವಾರಸ್ಯಕ್ಕೆ, ಪಾತ್ರನಿರೂಪಣಕ್ಕೆ, ಭಂಗಬರಬಾರದು; ಅವಶ್ಯವಾದ ವರ್ಣನೆಯ ಮತ್ತು ವಿವರಣೆಯ ಸಾರ ಬಿಟ್ಟುಹೋಗಬಾರದು; ಎಲ್ಲ ಕ್ಕಿಂತ ಪ್ರಧಾನವಾದದ್ದು, ಕವಿಯ ವ್ಯಕ್ತಿತ್ವಕ್ಕೆ, ಆತನ ವಿಶೇಷ ಪ್ರತಿ ಭೆಗೆ ಲೋಪ ಬರಕೂಡದು. ಇಷ್ಟನ್ನೂ ಸಾಧಿಸುವುದು ಸಂಗ್ರಹಕಾರನ ಕರ್ತವ್ಯ; ಆದರೆ ಕಷ್ಟ. ನಿಸ್ಸಾರವಾದ, ಚರ್ವಿತಚರ್ವಣವಾದ ಭಾಗ ಗಳನ್ನು ಮನಃಕ್ಲೇಶವಿಲ್ಲದೆ ಬಿಟ್ಟರೂ ಆತನು ಆಗಾಗ್ಗೆ ಧರ್ಮಸಂಕಟಕ್ಕೆ ಸಿಕ್ಕಗೆ ಇರಲಾರನು. ಯಾವ ಸುಂದರವಾದ ಪ್ರಕರಣವನ್ನು ಉಳಿಸಿ ಕೊಳ್ಳಲಿ, ಈ ಭಾವವನ್ನೂ ಚಮತ್ಕಾರವನ್ನೂ ಹೇಗೆ ಬಿಡಲಿ ಎಂದು ಆತನು ತನ್ನೊಡನೆಯೇ ಹೋರಾಡದೆ ಇರನು. ತನ್ನ ಸಂಸ್ಕಾರವನ್ನೂ ಅಭಿರುಚಿಯನ್ನೂ ಪ್ರಮಾಣವಾಗಿಟ್ಟುಕೊಂಡರೂ, ತನ್ನ ಸಂಗ್ರಹ ಬಹು ಜನಸಮ್ಮತವಾಗಬೇಕೆನ್ನುವುದನ್ನು ಮರೆಯನು. ಕೊನೆಗೆ ಸಹೃದಯರ ಕರುಣೆಗೆ ಸಂಗ್ರಹಕಾರನು ಶರಣನು.

ಭಗವತ್ಕೃಪೆಯಿಂದಲೂ ಕನ್ನಡಿಗರ ಸೌಹಾರ್ದಸಹಕಾರಗಳಿಂದಲೂ ಈ ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆ ಬೆಳೆಯುತ್ತಾ ಬರಲಿ ಎಂದು ಪ್ರಾರ್ಥನೆ.

ಬೆಂಗಳೂರು,
೨೦ - ೬ - ೩೩.

ಬಿ. ಎಂ. ಶ್ರೀಕಂಠಯ್ಯ,
ಸಮಿತಿಯ ಅಧ್ಯಕ್ಷ ಮತ್ತು ಪ್ರಧಾನ ಸಂಪಾದಕ.

# ವಿಷಯ ಸೂಚಿಕೆ.

# ಪೀಠಿಕೆ

---

## ಕವಿಯ ಚರಿತ್ರೆ

ಕಾವ್ಯಪಾಠಕ್ಕೆ ಕವಿಪರಿಚಯವು ಒಂದು ಅವಶ್ಯಕವಾದ ಅಂಗವೆಂಬುದು ಈಗಿನವರ ಮತ. ಹಿಂದಿನವರು ಹಾಗೆ ಭಾವಿಸಿರಲಿಲ್ಲ; ಆದಕಾರಣ ಅವರು ನಮ್ಮ ಕವಿಗಳ ಜೀವನ ಚರಿತ್ರೆಗಳನ್ನು ಬರೆದಿಡಲು ಪ್ರಯತ್ನಿಸಲಿಲ್ಲ. ಹೀಗೆ ನಮ್ಮಲ್ಲಿ ಕವಿಚರಿತ್ರೆಗಳ ಅಭಾವವಿದ್ದರೂ ಕವಿಗಳ ಕಾಲ, ದೇಶ, ಮತ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳುವುದಕ್ಕೆ ಸಾಧನಗಳು ಇಲ್ಲದೆ ಹೋಗಿಲ್ಲ. ಅನೇಕ ವೇಳೆ ಕವಿಗಳೇ ಸ್ವವಿಷಯವನ್ನು ತಮ್ಮ ಗ್ರಂಥಗಳಲ್ಲಿ ತಕ್ಕಮಟ್ಟಿಗೆ ತಿಳಿಸಿರುತ್ತಾರೆ. ಅಲ್ಲದೆ, ಒಂದು ಕಾವ್ಯದಲ್ಲಿ ಪ್ರತಿಪಾದಿತವಾದ ವಿಷಯಗಳು, ಅದರ ಶೈಲಿ ಮೊದಲಾದುವುಗಳಿಂದ ಪಾಠಕರು ಅದನ್ನು ಬರೆದ ಕವಿಯ ವಿಚಾರವಾಗಿ ಕೆಲವು ಸಂಗತಿಗಳನ್ನು ಊಹಿಸಬಹುದು. ಇದೂ ಅಲ್ಲದೆ ಬೇರೆ ಗ್ರಂಥಗಳಿಂದಲೂ ಶಾಸನಗಳಿಂದಲೂ ಐತಿಹ್ಯಗಳಿಂದಲೂ ಕವಿಗಳ ವಿಷಯವಾಗಿ ಕೆಲವು ಅಂಶಗಳು ತಿಳಿದುಬರುವುದೂ ಉಂಟು. ಈ ಆಂತರ ಮತ್ತು ಬಾಹ್ಯ ಪ್ರಮಾಣಗಳಿಂದ ನಮ್ಮ ಕವಿಗಳ ಚರಿತ್ರೆಯನ್ನು ತಕ್ಕಮಟ್ಟಿಗೆ ತಿಳಿಯುವುದು ಸಾಧ್ಯವೆಂಬುದಕ್ಕೂ ಆ ವಿಧವಾದ ಚರಿತ್ರೆಯನ್ನು ತಿಳಿಯಲು ಈಗಿನ ಸಾಹಿತ್ಯ ಪಾಠಕರಿಗೆ ವಿಶೇಷ ಕುತೂಹಲವಿದೆ ಯೆಂಬುದಕ್ಕೂ ಶ್ರೀಮಾನ್ ರಾ. ನರಸಿಂಹಾಚಾರ್ಯರು ಬಹುಕಾಲದ ಪರಿಶ್ರಮದಿಂದ ರಚಿಸಿರುವ ಕರ್ಣಾಟಕ ಕವಿಚರಿತೆಯ ಮೂರು ದೊಡ್ಡ ದೊಡ್ಡ ಸಂಪುಟಗಳು ಸಾಕ್ಷಿಯಾಗಿವೆ.

ಕನ್ನಡದಲ್ಲಿ ಕಾದಂಬರಿಯನ್ನು ಬರೆದ ಕವಿ ನಾಗವರ್ಮ. ಈತನು ಸ್ವವಿಷಯವನ್ನು ಹೆಚ್ಚಾಗಿ ಹೇಳಿಕೊಂಡಿಲ್ಲ. ಹೇಳಿಕೊಂಡಿರುವ ಅಲ್ಪ ಸ್ವಲ್ಪವೂ ಸ್ಪಷ್ಟವಾಗಿರದೆ ಸಂದಿಗ್ಧವಾಗಿದೆ. ಬೇರೆ ಗ್ರಂಥಗಳಲ್ಲಾಗಲಿ ಶಾಸನಗಳಲ್ಲಾಗಲಿ ಈತನ ಕಾಲದೇಶಾದಿಗಳನ್ನು ತಿಳಿದುಕೊಳ್ಳಲು ಸಾಧಕವಾಗುವ ಸ್ಪಷ್ಟವಾದ, ನಿಷ್ಕೃಷ್ಟವಾದ ಯಾವ ಸಂಗತಿಯೂ ಇದು

ವರೆಗೂ ದೊರೆತಿಲ್ಲ. ಸಾಲದ್ದಕ್ಕೆ ಈತನು ಇದೊಂದೇ ಗ್ರಂಥವನ್ನು ರಚಿಸಿದನೆ, ಬೇರೆ ಗ್ರಂಥಗಳನ್ನೂ ರಚಿಸಿರುವನೆ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿದ್ದು, ಇದುವರೆಗೂ ಸರ್ವ ಸಮ್ಮತವಾದ ಯಾವುದೊಂದು ಸಿದ್ಧಾಂತವೂ ಆಗಿಲ್ಲ. ಹೀಗಾಗಿ ಈ ಕವಿಯ ಚರಿತ್ರೆಯೇನೆಂಬುವನ್ನು ನಿರ್ಧರಿಸುವುದು ಕಷ್ಟಸಾಧ್ಯವಾಗಿ ಪರಿಣಮಿಸಿದೆ. ಇಲ್ಲಿ ಮೊದಲು, ಕಾದಂಬರಿಯಿಂದ ಕವಿಯ ವಿಷಯವಾಗಿ ಅರಿಯಬಹುದಾದ ಸಂಗತಿಗಳನ್ನು ತಿಳಿಸಿ ಆ ಮೇಲೆ ಈ ಕವಿ ಬೇರೆ ಗ್ರಂಥಗಳನ್ನು ಬರೆದನೆ ಎಂಬ ವಿಷಯದಲ್ಲಿರುವ ಭಿನ್ನಮತಗಳನ್ನು ಸಂಗ್ರಹವಾಗಿ ಸಮಾಲೋಚಿಸಬೇಕಾಗಿದೆ.

ಕನ್ನಡ ಕವಿಗಳಲ್ಲಿ ಕೆಲವರು, ಮುಖ್ಯವಾಗಿ ಚಂಪೂಕಾವ್ಯಲೇಖಕರು ತಮ್ಮ ಗ್ರಂಥಗಳ ಉಪಕ್ರಮ ಉಪಸಂಹಾರ ಭಾಗಗಳನ್ನು ವಿಸ್ತಾರವಾಗಿ ಬರೆಯುವ ಸಂಪ್ರದಾಯವನ್ನು ಅನುಸರಿಸಿರುತ್ತಾರೆ. ಪಂಪ, ರನ್ನ, ಜನ್ನ ಮೊದಲಾದವರ ಕಾವ್ಯಗಳಲ್ಲಿ ಈ ಸಂಪ್ರದಾಯದ ಪರಿಚಯವನ್ನು ಪಡೆಯಬಹುದು. ಅವರು ಸ್ವವಿಷಯವನ್ನೂ ತಕ್ಕಮಟ್ಟಿಗೆ ತಿಳಿಸುತ್ತಾರೆ. ಸಂಸ್ಕೃತದಲ್ಲಿ ಕಾದಂಬರಿಯನ್ನು ಬರೆದ ಬಾಣಭಟ್ಟನು ಹರ್ಷಚರಿತದಲ್ಲಿ ವಿಸ್ತಾರವಾಗಿಯೂ, ಕಾದಂಬರಿಯಲ್ಲಿ ಸಂಗ್ರಹವಾಗಿಯೂ ತನ್ನ ಚರಿತ್ರೆಯನ್ನು ಹೇಳಿಕೊಂಡಿರುವುದರಿಂದಂತೂ ಕನ್ನಡದಲ್ಲಿ ಕಾದಂಬರಿಯನ್ನು ಬರೆದ ಕವಿ ಮೇಲೆ ಹೇಳಿರುವ ಕವಿ ಸಂಪ್ರದಾಯವನ್ನು ಅನುಸರಿಸುವನೆಂದು ನಿರೀಕ್ಷಿಸುವುದು ಸಹಜವಾಗಿದೆ. ಆದರೆ ಕರ್ಣಾಟಕ ಕಾದಂಬರಿಯಷ್ಟು ಸಂಗ್ರಹವಾದ ಉಪಕ್ರಮ ಉಪಸಂಹಾರ ಭಾಗಗಳುಳ್ಳ ಚಂಪೂ ಗ್ರಂಥವು ಮತ್ತೊಂದಿಲ್ಲವೆಂದೂ ಹೇಳಬಹುದು. ಕವಿ ಸ್ವವಿಷಯವನ್ನು ಹೇಳಿಕೊಳ್ಳುವ ವಿಚಾರವಂತಿರಲಿ; ದೇವತಾಸ್ತೋತ್ರ, ಕಾವ್ಯವಿಚಾರ ಮುಂತಾದುವನ್ನು ಕೂಡ ಬಹು ಸಂಗ್ರಹವಾಗಿ ಮಾಡಿದ್ದಾನೆ. ಕಾವ್ಯದ ಮೊದಲನೆಯ ಪದ್ಯದಲ್ಲಿ ಶಿವನ ಜಡೆಯನ್ನಲಂಕರಿಸಿರುವ ಚಂದ್ರನನ್ನೂ ಎರಡನೆಯದರಲ್ಲಿ ಸರಸ್ವತಿಯನ್ನೂ ಸ್ತುತಿಸಿ, ಮೂರನೆಯ ಪದ್ಯದಲ್ಲಿ ಬಾಣನನ್ನೂ ನಾಲ್ಕು, ಐದು, ಆರನೆಯ ಪದ್ಯಗಳಲ್ಲಿ ಸಂಸ್ಕೃತ ಕನ್ನಡ ಕಾದಂಬರಿಗಳನ್ನೂ ಹೊಗಳಿದ್ದಾನೆ. ಬಳಿಕ ಏಳನೆಯ ಪದ್ಯದಲ್ಲಿ " ಕೃತಿಪತಿ ನರೇಂದ್ರಚಂದ್ರಂ, ಕೃತಿಯಂ ಪೇಳ್ವಂ

ಬುಧಾಬ್ಜವನ ಕಳಹಂಸಂ, ಕೃತಿ ಕಾದಂಬರಿ......." ಎಂದು ಸೂಚಿಸಿ ಕಥೆ ಯನ್ನು ಆರಂಭಿಸಿದ್ದಾನೆ. ಉಪಕ್ರಮಣಿಕಾ ಭಾಗದಲ್ಲಿ ಏಳು ಪದ್ಯ ಗಳಿದ್ದರೆ ಉಪಸಂಹಾರ ಭಾಗದಲ್ಲಿ ನಾಲ್ಕೇ ಪದ್ಯಗಳಿವೆ. ಆ ಭಾಗದ ಮೊದಲನೆಯ ಪದ್ಯದಲ್ಲಿ ಬಾಣನಿಂದ ಸಂಸ್ಕೃತದಲ್ಲಿ ರಚಿತವಾಗಿದ್ದ ಕಾದಂಬರಿ "ಕರ್ಣಾಟಕತ್ವಂಬೊರ್ದಿ....ರಾಜೇಂದ್ರ ಚಂದ್ರಾಂಕ ನೊಳ್ ಸಂಗತಿವೆತ್ತಾದಂ ತ್ರಿಲೋಕೀಸಹಚರಿಯೆನಿಸಿದುದು" ಎಂದು ಹೇಳಿ, ಮುಂದಿನ ಪದ್ಯದಲ್ಲಿ ಭೋಜರಾಜನು "ಇವು ಕಾಳಿಂಗಾಭಿ ಧೇಯ ಪ್ರವಿದಿತಮಿವು ಬಾಹ್ಲೀಕದೇಶೋದ್ಭವಮಶ್ವಂ....ಸತ್ಕೃತಿವನಿತೆ ಗಿವೌಚಿತ್ಯಮೆಂದಿತ್ತಾಂ" ಎಂದು ತಿಳಿಸಿದ್ದಾನೆ. ಮುಂದೆ ಒಂದು ಮಂಗಳ ಪದ್ಯವನ್ನು ಹೇಳಿ, ಆಮೇಲೆ ತನ್ನ ಕಾವ್ಯದ ಶ್ರೇಷ್ಠತೆಯನ್ನು ಒಂದು ಪದ್ಯದಲ್ಲಿ ಹೊಗಳಿ ಗ್ರಂಥವನ್ನು ಪರಿಸಮಾಪ್ತಿ ಮಾಡಿ ದ್ದಾನೆ. ಕಾವ್ಯದ ಪೂರ್ವಭಾಗದ ಕೊನೆಯಲ್ಲಾಗಲಿ ಉತ್ತರಭಾಗದ ಕೊನೆಯಲ್ಲಾಗಲಿ ಚಂಪೂಕಾವ್ಯಗಳ ಆಶ್ವಾಸಾಂತ ಗದ್ಯದಂಥ ಗದ್ಯವು ಕೂಡ ಇಲ್ಲ. ಕವಿಯ ಹೆಸರು ಗ್ರಂಥಾಂತ್ಯದ ಎರಡು ಪದ್ಯಗಳಲ್ಲಿ ಉಕ್ತವಾಗಿದೆ.

ಮೇಲೆ ಹೇಳಿರುವುದರಿಂದ ಕವಿಯ ವಿಷಯವಾಗಿ ತಿಳಿದುಬರುವ ಸಂಗತಿಗಳಾವುವೆಂದರೆ—

೧. "ಕೃತಿಯಂ ಪೇಳ್ದಂ ಬುಧಾಬ್ಜವನ ಕಳಹಂಸಂ" ಎಂದು ಹೇಳಿರುವುದರಿಂದ ಈ ಕವಿಗೆ "ಬುಧಾಬ್ಜವನ ಕಳಹಂಸ"ನೆಂಬ ಅಥವಾ ಅದಕ್ಕೆ ಸಮಾನಾರ್ಥಕವಾದ ಒಂದು ಬಿರುದಿದ್ದಿರಬೇಕು.

೨. "ಕೃತಿಪತಿ ನರೇಂದ್ರ ಚಂದ್ರಂ" ಎಂಬುದರಿಂದ ಕವಿಗೆ ನರೇಂದ್ರಚಂದ್ರ ಅಥವಾ ಚಂದ್ರನೆಂಬ ರಾಜನು ಆಶ್ರಯದಾತನಾಗಿದ್ದ ನೆಂದು ಅನುಮಾನಿಸಲು ಅವಕಾಶವಾಗುತ್ತದೆ. ಕಾದಂಬರಿ "ಕರ್ಣಾ ಟಕತ್ವಂಬೊರ್ದಿ **ರಾಜೇಂದ್ರ ಚಂದ್ರಾಂಕನೊಳ್ ಸಂಗತಿವೆತ್ತು** ತ್ರಿಲೋ ಕೀಸಹಚರಿಯೆನಿಸಿದುದು" ಎಂಬೀ ಹೇಳಿಕೆಯು ಈ ಅನುಮಾನ ವನ್ನು ಬಲಪಡಿಸುತ್ತದೆ. ಇದೂ ಅಲ್ಲದೆ ಕಾವ್ಯಾರಂಭದ ಮಂಗಳ ಪದ್ಯವೂ ಈ ಅನುಮಾನಕ್ಕೆ ಉಪಷ್ಟಂಭಕವಾಗುತ್ತದೆ. ಕಾವ್ಯಾರಂಭ ದಲ್ಲಿ ಕವಿ ಸಂಪ್ರದಾಯದಂತೆ ತ್ರಿಮೂರ್ತಿಗಳಲ್ಲೊಬ್ಬನನ್ನು ಸ್ತುತಿಸದೆ

ಚಂದ್ರನನ್ನು ಸ್ತುತಿಸಿದ್ದಾನೆ. ದೇವತಾಸ್ತೋತ್ರ ಭಾಗದಲ್ಲಿ ಪ್ರಕಾರಾಂತರವಾಗಿ, ಶ್ಲೇಷೆಯಿಂದಲೋ ಬೇರೆ ವಿಧವಾಗಿಯೋ, ತಮ್ಮ ರಾಜರನ್ನು ಸ್ತುತಿಸುವ ಸಂಪ್ರದಾಯವು ಕೆಲವು ಕನ್ನಡ ಕವಿಗಳಲ್ಲಿ ಕಂಡು ಬರುತ್ತದೆ. ಈಕಾವ್ಯದಲ್ಲಿಯೂ ನಾಗವರ್ಮನು ತನಗೆ ಆಶ್ರಯದಾತನಾದ ಚಂದ್ರನೆಂಬ ರಾಜನನ್ನು ಗ್ರಂಥಾದಿಯ ಮಂಗಳ ಪದ್ಯದಲ್ಲಿ ದೇವತಾಸ್ತೋತ್ರದ ವ್ಯಾಜದಿಂದ ಸ್ತುತಿಸಿರುವನೆಂದು ಊಹಿಸುವುದು ತಪ್ಪಾಗಲಾರದು. ಆದಕಾರಣ ಈ ಕವಿಗೆ ಚಂದ್ರನೆಂಬ ರಾಜನು[1] ಪೋಷಕನಾಗಿದ್ದನೆಂದು ಇಟ್ಟುಕೊಳ್ಳಬಹುದು.

೩. ಭೋಜರಾಜನು ಕವಿಗೆ ಕೆಲವು ಜಾತ್ಯಶ್ವಗಳನ್ನು ಕೊಟ್ಟಂತೆ ಹೇಳಿರುವುದರಿಂದ ಈ ಕವಿ ಭೋಜನ ಕಾಲದಲ್ಲಿದ್ದನೆಂದು ಗೊತ್ತಾಗುತ್ತದೆ. ಇಲ್ಲಿ ಉಕ್ತನಾದ ಭೋಜನು ಪ್ರಸಿದ್ಧನಾದ ಧಾರಾಪುರದ ಭೋಜನೆಂದು ಕವಿಚರಿತಕಾರರೂ ಇತರ ವಿದ್ವಾಂಸರೂ ಅಭಿಪ್ರಾಯಪಟ್ಟಿರುತ್ತಾರೆ. ಇದು ನಿಜವಾದ ಪಕ್ಷದಲ್ಲಿ ಈ ಕವಿ ೧೧ನೆಯ ಶತಮಾನದಲ್ಲಿದ್ದನೆಂದು ನಿಶ್ಚಿತವಾಗುತ್ತದೆ.

೪. ಕವಿಗಳಿಗೆ ರಾಜರು ಗ್ರಾಮಗಳನ್ನೋ ಧನಕನಕ ವಸ್ತ್ರಾದಿಗಳನ್ನೋ ಬಹುಮಾನವಾಗಿ ಕೊಡುವುದು ಸಾಮಾನ್ಯವಾಗಿ ಸಂಪ್ರದಾಯವಾಗಿದೆ. ಹಾಗಲ್ಲದೆ ಭೋಜನು ತನಗೆ ಜಾತ್ಯಶ್ವಗಳನ್ನು ಬಹುಮಾನವಾಗಿ ಕೊಟ್ಟಂತೆ ಕವಿ ಹೇಳಿಕೊಂಡಿರುವುದರಿಂದ ಈ ನಾಗವರ್ಮನು ಯುದ್ಧವೀರನಾಗಿದ್ದಿರಬೇಕು ಎಂಬ ಅನುಮಾನಕ್ಕೆ ಆಸ್ಪದವಿದೆ.

೫. ಕವಿ ತನ್ನ ಮತವಾವುದೆಂಬುದನ್ನು ಹೇಳಿಕೊಂಡಿಲ್ಲ. ಕಾದಂಬರಿಯ ಮತಧರ್ಮದ ಆವರಣವನ್ನು ನೋಡಿದರೆ ಈತನು ಬ್ರಾಹ್ಮಣನೆಂದೂ ಶಿವೋಪಾಸಕನೆಂದೂ ತೋರುತ್ತದೆ. ಇವನು ಅನ್ಯಮತೀಯನೆಂಬುದಕ್ಕಂತೂ ಈ ಗ್ರಂಥದಲ್ಲಿ ಲೇಶವೂ ಪ್ರಮಾಣ ದೊರೆಯುವುದಿಲ್ಲ.

---

[1] ಇವನು ಬನವಾಸಿಯ ನಾಗರಖಂಡವನ್ನು ಆಳುತ್ತಿದ್ದ ಸಾಮಂತ ಚಂದ್ರನೆಂದೂ ಕಾದಂಬರಿ ೧೧೧೪ರಲ್ಲಿ ಅಥವಾ ಅದಕ್ಕೆ ೨-೩ ವರುಷ ಹಿಂದೆ ಹುಟ್ಟಿದ್ದಿರಬೇಕೆಂದೂ ಶ್ರೀಮಾನ್ ಎಚ್. ಚೆನ್ನಕೇಶವಯ್ಯಂಗಾರ್ಯರು ಅಭಿಪ್ರಾಯಪಡುತ್ತಾರೆ (ಕ. ಸಾ. ಪರಿಷತ್ಪತ್ರಿಕೆ, xiv ೩). ಇದು ವಿಮರ್ಶಾರ್ಹವಾದ ಸಂಗತಿ.

ಈ ಕವಿ ಬೇರೆ ಗ್ರಂಥಗಳನ್ನೂ ಬರೆದಿರುವ ಪಕ್ಷದಲ್ಲಿ ಅವುಗಳಿಂದಲೂ ಈತನ ವಿಷಯವಾಗಿ ಕೆಲವು ಸಂಗತಿಗಳು ಗೊತ್ತಾಗಬಹುದು. ಆದಕಾರಣ ಈತನು ಬೇರೆ ಗ್ರಂಥಗಳನ್ನು ಬರೆದನೆ ಎಂಬುದನ್ನು ನೋಡೋಣ. ಕಾದಂಬರಿಯಂತೆಯೇ ಛಂದೋಂಬುಧಿ, ಕಾವ್ಯಾವಲೋಕನ, ಭಾಷಾಭೂಷಣ, ವಸ್ತುಕೋಶ — ಈ ಗ್ರಂಥಗಳಲ್ಲಿಯೂ ಗ್ರಂಥಕರ್ತನ ಹೆಸರು ನಾಗವರ್ಮನೆಂದು ಉಕ್ತವಾಗಿದೆ. ಬಹುಶಃ ಈ ನಾಮಸಾದೃಶ್ಯದ ಆಧಾರದಿಂದ ಡಾ॥ ಕಿಟ್ಟೆಲ್, ಬಿ. ಮಲ್ಲಪ್ಪನವರು ಮೊದಲಾದ ವಿದ್ವಾಂಸರು ಈ ಗ್ರಂಥಗಳೆಲ್ಲವೂ ಒಬ್ಬ ಕವಿಯಿಂದ ರಚಿತವಾದುವೆಂದು ನಿರ್ಣಯಿಸಿದ್ದರು. ಈ ಅಭಿಪ್ರಾಯವು ತಪ್ಪೆಂದೂ ಕಾದಂಬರಿ ಛಂದೋಂಬುಧಿಗಳನ್ನು ರಚಿಸಿದವನು ಒಬ್ಬ ನಾಗವರ್ಮನೆಂದೂ ಮಿಕ್ಕ ಮೂರನ್ನು ಬರೆದವನು ಬೇರೊಬ್ಬ ನಾಗವರ್ಮನೆಂದೂ ಶ್ರೀಮಾನ್ ರಾ. ನರಸಿಂಹಾಚಾರ್ಯರವರು ಕರ್ಣಾಟಕ ಕವಿಚರಿತೆಯ ಪ್ರಥಮ ಸಂಪುಟದಲ್ಲಿ (ಪುಟಗಳು ೫೨–೫೪) ಕೆಲವು ಕಾರಣಗಳನ್ನು ಕೊಟ್ಟು ಸಿದ್ಧಾಂತಮಾಡಿದರು. ಈ ಸಿದ್ಧಾಂತವನ್ನು ಖಂಡಿಸಿ ಡಾ॥ ಎ. ವೆಂಕಟಸುಬ್ಬಯ್ಯನವರು ಮೇಲೆ ಹೇಳಿದ ಐದು ಗ್ರಂಥಗಳನ್ನೂ ಒಬ್ಬ ನಾಗವರ್ಮನೇ ರಚಿಸಿದನೆಂದು "ಕೆಲವು ಕನ್ನಡ ಕವಿಗಳ ಜೀವನ ಕಾಲ ವಿಚಾರ" ಎಂಬ ಗ್ರಂಥದಲ್ಲಿ (ಪುಟಗಳು ೧೫೨–೧೮೧) ಸಿದ್ಧಾಂತಮಾಡಿದರು. ಡಾ॥ ವೆಂಕಟಸುಬ್ಬಯ್ಯನವರ ಈ ವಾದವನ್ನು ಕವಿಚರಿತೆಯ ಮೂರನೆಯ ಸಂಪುಟದ ಅವತರಣಿಕೆಯಲ್ಲಿ (ಪುಟಗಳು ೫೪–೫೮) ಸಮಾಲೋಚಿಸಿ, "ಅಯ್ಯನವರು ತಮ್ಮ ಕಲ್ಪನೆಯನ್ನು ಸ್ಥಾಪಿಸುವುದಕ್ಕಾಗಿ ಮಾಡಿರುವ ಪ್ರಯತ್ನವು ನಿಷ್ಫಲ" ಎಂದು ಶ್ರೀಮಾನ್ ರಾ. ನರಸಿಂಹಾಚಾರ್ಯರು ಅಭಿಪ್ರಾಯಪಟ್ಟು ನಾಗವರ್ಮರಿಬ್ಬರೆಂಬ ತಮ್ಮ ಹಿಂದಿನ ಸಿದ್ಧಾಂತವನ್ನೇ ಎತ್ತಿ ಹಿಡಿದಿದ್ದಾರೆ. ಅಷ್ಟೇ ಅಲ್ಲದೆ, ಆ ಸಂಪುಟದ "ಗ್ರಂಥ ಶುದ್ಧಿ" ಎಂಬ ಭಾಗದಲ್ಲಿ "ಕಾದಂಬರಿಯನ್ನು ಬರೆದ ನಾಗವರ್ಮನು ಛಂದೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ" ಎಂದು ಹೇಳಿ, ನಾಗವರ್ಮನೆಂಬ ಹೆಸರಿನ ಕವಿಗಳಿರುವುದು ಇಬ್ಬರು ಮಾತ್ರವೇ ಅಲ್ಲ, ಮೂವರಿದ್ದರೂ

ಇರಬಹುದು ಎಂದು ಸೂಚಿಸಿದ್ದಾರೆ. ಶ್ರೀಮಾನ್ ಎಚ್. ಚನ್ನಕೇಶವಯ್ಯಂಗಾರ್ಯರು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯ ೧೪ನೆಯ ಸಂಪುಟದ ೩ನೆಯ ಸಂಚಿಕೆಯಲ್ಲಿ (ಪುಟಗಳು ೧೭೭–೧೮೧) ಛಂದೋಂಬುಧಿ ಕಾದಂಬರಿಗಳನ್ನು ಬರೆದ ಕವಿಗಳು ಬೇರೆ ಬೇರೆ ಎಂದು ನಿರ್ಣಯಿಸಲು ಪ್ರಯತ್ನಿಸಿರುತ್ತಾರೆ. ಹೀಗೆ ನಾಗವರ್ಮನೆಂಬ ಹೆಸರಿನ ಕವಿ ಇರುವುದು ಒಬ್ಬನು, ಇಬ್ಬರು, ಮೂವರು ಎಂದು ಮೂರು ಮತಗಳಿವೆ.

ಇಲ್ಲಿ ಮೊದಲು, ಕಾದಂಬರಿಯನ್ನು ಬರೆದ ಕವಿಯೇ ಛಂದೋಂಬುಧಿಯನ್ನೂ ಬರೆದನೆ ಎಂಬುದನ್ನು ವಿಮರ್ಶಿಸೋಣ. ಈ ಎರಡು ಗ್ರಂಥಗಳೂ ಏಕಕರ್ತೃಕಗಳೆಂದು ಶ್ರೀಮಾನ್ ರಾ. ನರಸಿಂಹಾಚಾರ್ಯರು ಕವಿಚರಿತೆಯ ಪ್ರಥಮ ಸಂಪುಟದಲ್ಲಿ ತಿಳಿಸಿರುವರು. ಆದರೆ ಅವರು ಅಲ್ಲಿ ಈ ವಿಷಯವನ್ನು ಚರ್ಚಿಸಿಲ್ಲ. ಅವರ ಮುಖ್ಯ ಗಮನವಿದ್ದದ್ದು ಕಾವ್ಯಾವಲೋಕನ ಭಾಷಾಭೂಷಣ ವಸ್ತುಕೋಶಗಳನ್ನು ಬರೆದವನು ಛಂದೋಂಬುಧಿಯನ್ನು ಬರೆದವನಿಂದ ಭಿನ್ನನು ಎಂದು ತೋರಿಸುವುದರಲ್ಲಿ ; ಆದ್ದರಿಂದ ಅದನ್ನು ವಿಮರ್ಶಿಸಿದ್ದಾರೆ. ಛಂದೋಂಬುಧಿ ಕಾದಂಬರಿಗಳೆರಡೂ ಸುಮಾರು ಒಂದೇ ಕಾಲದಲ್ಲಿ ಹುಟ್ಟಿದುವೆಂದು ತೋರಿಬಂದದ್ದರಿಂದ ಅವು ಏಕಕರ್ತೃಕಗಳಾಗಿರಬೇಕೆಂದು ಅಭಿಪ್ರಾಯಪಟ್ಟರು. ಆದ ಕಾರಣವೇ, ಆ ಗ್ರಂಥಗಳು ಬೇರೆ ಬೇರೆ ಕಾಲಗಳಲ್ಲಿ ಹುಟ್ಟಿದುವು ಎಂದು ತೋರಿದ ಕೂಡಲೆ ಅವು ಭಿನ್ನ ಕರ್ತೃಕಗಳೆಂಬ ಸಂಶಯಕ್ಕೆ ಅವಕಾಶವಿದೆ ಎಂದು ಒಪ್ಪಿಕೊಂಡರು. ಸಂಶಯಕ್ಕೆಡೆಯಿದೆ ಎಂದು ಒಪ್ಪಿಕೊಂಡರೇ ಹೊರತು ತಮ್ಮ ಅಭಿಪ್ರಾಯವನ್ನು ಪೂರ್ತಿಯಾಗಿ ಬದಲಾಯಿಸಲಿಲ್ಲ. ಇದು ನ್ಯಾಯವಾದದ್ದೇ. ಏಕೆಂದರೆ, ಒಂದು ಗ್ರಂಥವು ಹುಟ್ಟಿದ ಕಾಲಕ್ಕೂ ಇನ್ನೊಂದು ಹುಟ್ಟಿದ ಕಾಲಕ್ಕೂ ನಡುವೆ ೨೦, ೩೦ ವರುಷಗಳ ಅಂತರವಿದ್ದರೆ ಅವು ಒಬ್ಬ ಕವಿಯಿಂದಲೇ ರಚಿತವಾಗಿರತಕ್ಕದ್ದು ಅಸಾಧ್ಯವೇನೂ ಅಲ್ಲ. (ಉದಾಹರಣೆಗೆ—ಜನ್ನನ ಯಶೋಧರಚರಿತೆಯ ಕಾಲಕ್ಕೂ ಅನಂತನಾಥಪುರಾಣದ ರಚನೆಯ ಕಾಲಕ್ಕೂ ನಡುವೆ ೨೧ ವರುಷಗಳ ಅಂತರವಿದೆ.) ಆದಕಾರಣ ಕವಿಚರಿತಕಾರರ ಅಭಿಪ್ರಾಯದಂತೆ ಇದು ಇನ್ನೂ ವಿಚಾರಾರ್ಹವಾದ ಸಂಗತಿಯಾಗಿ ಉಳಿದಿದೆ.

ಶ್ರೀಮಾನ್ ಎಚ್. ಚನ್ನಕೇಶವಯ್ಯಂಗಾರ್ಯರು ಇವು ಭಿನ್ನಕರ್ತೃಕಗಳೆಂಬುದಕ್ಕೆ ಕೊಟ್ಟಿರುವ ಕೆಲವು ಕಾರಣಗಳು ಅಷ್ಟೇನೂ ಪ್ರಬಲವಾದುವೆಂದು ತೋರುವುದಿಲ್ಲ. ಉದಾಹರಣೆಗೆ— (೧) ಛಂದೋಂಬುಧಿಯಲ್ಲಿ ತನ್ನ ಜಾತಿ, ವಂಶಪರಂಪರೆ, ಪೋಷಕ ಮುಂತಾದ ಪ್ರವರಗಳನ್ನು ಸ್ಪಷ್ಟವಾಗಿ ಹೇಳಿಕೊಂಡವನು ಕಾದಂಬರಿಯಲ್ಲಿ ಏಕೆ ಹೇಳಿಕೊಳ್ಳಲಿಲ್ಲ ಎಂದು ಆಕ್ಷೇಪಿಸುತ್ತಾರೆ. ಇದಕ್ಕೆ ಉತ್ತರವನ್ನು ಯಾರು ಹೇಳಬಹುದು? ಭಾರತದಲ್ಲಿ ತನ್ನ ವಂಶ ಪರಂಪರೆಯನ್ನು ಹೇಳಿಕೊಂಡ ಪಂಪನು ಆದಿ ಪುರಾಣದಲ್ಲಿ ಏಕೆ ಹೇಳಿಕೊಳ್ಳಲಿಲ್ಲ? ಇದರಿಂದ ಆ ಪಂಪನೇ ಬೇರೆ, ಇವನೇ ಬೇರೆ ಎಂದು ಹೇಳಲಾಗುತ್ತದೆಯೆ? (೨) ಇವೆರಡು ಗ್ರಂಥಗಳ ಭಾಷಾಶೈಲಿಗಳು ಬೇರೆ ಬೇರೆ ಎಂದು ಹೇಳುತ್ತಾರೆ. ಇದು ಹಿಡಿತಕ್ಕೆ ಸಿಕ್ಕತಕ್ಕ ಮಾತಲ್ಲ. ಅವರು ಕೊಡುವ ಇನ್ನೂ ಕೆಲವು ಕಾರಣಗಳು ಪ್ರಬಲವಾದ ಸಂಶಯವನ್ನು ಉಂಟುಮಾಡುವುವೇ ಹೊರತು ಯಾವುದೊಂದು ಸಿದ್ಧಾಂತವನ್ನು ಮಾಡುವುದಕ್ಕೂ ಸಾಕಾದ, ಪ್ರಬಲವಾದ, ನಿಷ್ಕೃಷ್ಟವಾದ, ಪ್ರಮಾಣವಾಗಲಾರವು. ಆದಕಾರಣ ಇಲ್ಲಿ ಅವೆರಡು ಗ್ರಂಥಗಳೂ ಏಕಕರ್ತೃಕಗಳೇ ಭಿನ್ನಕರ್ತೃಕಗಳೇ ಎಂಬ ಪ್ರಶ್ನೆಗೆ ಸಾಧಕಬಾಧಕಗಳಾಗಿರುವ ಮುಖ್ಯ ಸಂಗತಿಗಳನ್ನು ಪರ್ಯಾಲೋಚಿಸುವುದು ಆವಶ್ಯಕವಾಗಿದೆ. ಹಾಗೆ ಮಾಡುವುದಕ್ಕೆ ಮೊದಲು ಛಂದೋಂಬುಧಿಯಿಂದ ಅದನ್ನು ಬರೆದ ಕವಿಯ ವಿಷಯವಾಗಿ ತಿಳಿದುಬರುವ ಮುಖ್ಯ ಸಂಗತಿಗಳನ್ನು ಸಂಗ್ರಹಿಸಬೇಕಾಗಿದೆ.

ಛಂದೋಂಬುಧಿಯನ್ನು ಬರೆದ ಕವಿ ಸ್ವವಿಷಯವನ್ನು ತಕ್ಕಮಟ್ಟಿಗೆ ಹೇಳಿಕೊಂಡಿದ್ದಾನೆ. ಅಲ್ಲದೆ, ಅಲ್ಲಲ್ಲಿ ಪ್ರಾಸಂಗಿಕವಾಗಿ ಬರುವ ಆತನ ಮಾತುಗಳಿಂದ ಆತನ ವಿಷಯವನ್ನು ಕುರಿತು ಕೆಲಮಟ್ಟಿಗೆ ಊಹಿಸುವುದಕ್ಕೂ ಅವಕಾಶವಿದೆ. ಛಂದೋಂಬುಧಿಯಿಂದ ಅದನ್ನು ಬರೆದ ಕವಿಯ ವಿಷಯವಾಗಿ ತಿಳಿದುಬರುವ ಸಂಗತಿಗಳೇನೆಂದರೆ—

---

ಇದುವರೆಗೆ ದೊರೆತಿರುವ ಹಸ್ತಲಿಖಿತ ಪ್ರತಿಗಳು ಒಂದೊಂದು ಒಂದೊಂದು ರೀತಿಯಾಗಿವೆ. ಎಷ್ಟೋ ಪ್ರಕ್ಷಿಪ್ತ ಪದ್ಯಗಳು ಈ ಪ್ರತಿಗಳಲ್ಲಿ ಸೇರಿಹೋಗಿರುವಂತೆ ಗೊತ್ತಾಗಿರುವುದರಿಂದ ಛಂದೋಂಬುಧಿಯ ಶುದ್ಧ ಪಾಠವು ಯಾವುದೆಂಬುದನ್ನು ಕಂಡುಹಿಡಿಯುವುದು ಪ್ರಕೃತ ಸ್ಥಿತಿಯಲ್ಲಿ ಕಷ್ಟಸಾಧ್ಯವಾಗಿದೆ. ಕರ್ಣಾಟಕ ಕಾವ್ಯ ಕಲಾನಿಧಿ ಗ್ರಂಥಮಾಲೆಯಲ್ಲಿ ಮುದ್ರಿತವಾದ ಪುಸ್ತಕವನ್ನು ಆಧಾರವಾಗಿಟ್ಟುಕೊಂಡು ಇಲ್ಲಿ ವಿಚಾರ ಮಾಡಲಾಗಿದೆ.

೧. ಈ ಕವಿ ಕೊಟ್ಟಿರುವ ವಂಶಪರಂಪರೆಯಿಂದ ಈತನ ಪೂರ್ವಿಕರು ವೈದಿಕ ಬ್ರಾಹ್ಮಣರೆಂದು ಗೊತ್ತಾಗುತ್ತದೆ. ಅದರ ಸಾರಾಂಶವಿದು---ವೆಂಗಿವಿಷಯದ ಸಪ್ತಗ್ರಾಮಗಳಲ್ಲಿ ವೆಂಗಿಪಟು ಪ್ರಖ್ಯಾತವಾದದ್ದು. ಆ ವೆಂಗಿಪಟುವಿನಲ್ಲಿ **ಅಂಬುಜ ಸಂಭವನಂತೆ** ವಿದಗ್ಧನಾದ ವೆಣ್ಣಮಯ್ಯನು "**ವೇದದೊಳ**ನುಗತಮೆನಿಸುವ ವೇದಗಳೊಳ್ ನಿಪುಣನಾಗಿ ನೆಗಟ್ದಂ." ಆತನು **ಅಂಬುಜ ಸಂಭವಮೂರ್ತಿ,** ಕೌಂಡಿನ್ಯ **ಗೋತ್ರಂ.** ಆತನ ಸತಿ ಕೌಂಡಿಕಬ್ಬೆ. ಆ ದಂಪತಿಗಳ ಮಗನಾದ ದಾಮಮಯ್ಯನು ಕವಿಯ ತಾತ. ಕವಿಯ ತಂದೆಯಾದ ವೆಣ್ಣಮಯ್ಯನು "ಲೌಕಿಕ **ವೈದಿಕ** ಶಾಸ್ತ್ರ ವಿವೇಕ ಕಲಾಭಿಜ್ಞನೆನಿಸಿ ನೆಗಟ್ದಂ."

೨. ಛಂದೋಂಬುಧಿಯ ಪ್ರಥಮಾಧಿಕಾರದ ೩೫ನೆಯ ಪದ್ಯದಲ್ಲಿ ಕವಿ ತನ್ನನ್ನು "ಸಯ್ಯಡಿಯ ನಾಗವರ್ಮ"ನೆಂದು ವಿಶೇಷಿಸಿಕೊಂಡಿರುವುದರಿಂದಲೂ ಗ್ರಂಥಾದಿಯ ದೇವತಾಸ್ತೋತ್ರ ಭಾಗದ ಒಂದು ಪದ್ಯದಲ್ಲಿ "ಸಯ್ಯಡಿಯ ಪಿನಾಕಿ ಕೂರ್ತು ನಮಗೀಗೆ ವರಂಗಳನುತ್ಸವಂಗಳಂ" ಎಂದು ಹೇಳಿರುವುದರಿಂದಲೂ ಈತನು ಸಯ್ಯಡಿಯಲ್ಲಿ ವಾಸಿಸುತ್ತಿದ್ದಂತೆ ತೋರುತ್ತದೆ.

೩. ತನ್ನ ಗುಣಗಳನ್ನು ಹೇಳಿಕೊಳ್ಳುವಾಗ "ಕುಂತೀಪುತ್ರಂ ಪೊಣರ್ದ ರಣದೊಳ್" ಎಂದು ಹೇಳಿಕೊಂಡಿರುವುದರಿಂದಲೂ ದುರ್ಗಾಸ್ತೋತ್ರಾವಸರದಲ್ಲಿ "ಭಗವತಿ ಕೂರ್ತು ಬೀರಸಿರಿಯೀಗೆ ಭುಜಾಸಿಗೆ ನಾಗವರ್ಮನಾ" ಎಂದು ಪ್ರಾರ್ಥಿಸಿರುವುದರಿಂದಲೂ ಈ ಕವಿ ಪಂಪನಂತೆ ಸೈನ್ಯದಲ್ಲಿ ಅಧಿಕಾರಿಯಾಗಿದ್ದು ಯುದ್ಧವೀರನಾಗಿದ್ದನೆಂದು ತೋರುತ್ತದೆ.

೪. ಅಧಿಕಾರಾಂತ್ಯ ಗದ್ಯದಲ್ಲಿ "ವಿಬುಧಜನ ಮನಃ ಪದ್ಮಿನೀ ರಾಜಹಂಸ ಶ್ರೀಮತ್ಕವಿರಾಜಹಂಸ ವಿರಚಿತಮಪ್ಪ ಛಂದೋಂಬುಧಿಯೊಳ್" ಎಂದಿರುವುದರಿಂದಲೂ ಮತ್ತು ಕವಿ ಅಲ್ಲಲ್ಲಿ (ಸಂಜ್ಞಾಧಿಕಾರ : ಪದ್ಯಗಳು ೯, ೧೧ ಇತ್ಯಾದಿ) ತನ್ನನ್ನು ಕವಿರಾಜಹಂಸನೆಂದುಕೊಂಡಿರುವುದರಿಂದಲೂ ಈತನಿಗೆ "ಕವಿರಾಜಹಂಸ" ನೆಂದು ಬಿರುದಿದ್ದಂತೆ ಗೊತ್ತಾಗುತ್ತದೆ.

೫. ಛಂದೋಂಬುಧಿಯ ಉಪಕ್ರಮಣಿಕಾ ಭಾಗದ ೨೭, ೨೮ನೆಯ ಪದ್ಯಗಳಿಂದ ಕವಿ ಜೈನನೆಂದು ಹೇಳಬೇಕಾಗುತ್ತದೆ. ಆ ಪದ್ಯಗಳು ಯಾವುವೆಂದರೆ—

ಅರಸಂ ರಕ್ಕಸಗಂಗಂ
ಗುರುಗಳ್ ನೆಗಟ್ದಜಿತವೀರಸೇನರ್ ದಯೆಯಿಂ
ಪೊರೆವ ನೃಪನಣ್ಣನೆನೆ ಮ
ಚ್ಚರಿಸುವರಾರ್ ನಾಕಿಯಿರುಳೊಳೇಂ ಪುಟ್ಟಿದನೇ

ಗಂಡರ ಮೂಕುತಿಯೆನಿಸಿದ
ಮಂಡಳಿಕರ ಮಂತ್ರಿ ಸಂಧಿವಿಗ್ರಹಿ ರಾಯಂ
ಕೊಂಡಾಡಿ ಪೊರೆದನೆನೆ ಧರೆ
ಕೊಂಡಾಡದೆ ಕೊಂಡುಕೊನೆಯದೇ ನಾಕಿಗನಂ

ಈ ಪದ್ಯಗಳಿಂದ ಕವಿಯ ಗುರು ಅಜಿತವೀರಸೇನನೆಂದೂ (ಕವಿ ಚರಿತೆಯಲ್ಲಿ "ಅಜಿತಸೇನದೇವರ್" ಎಂಬ ಪಾಠವಿದೆ) ಈ ಕವಿ ರಕ್ಕಸ ಗಂಗನ ಕಾಲದಲ್ಲಿ (ಸು. ೯೮೦ರಲ್ಲಿ) ಚಾವುಂಡರಾಯನಿಂದ ಪೋಷಿತ ನಾಗಿದ್ದನೆಂದೂ ತಿಳಿದು ಬರುತ್ತದೆ. ಆದರೆ ಈ ಪದ್ಯಗಳು ಕವಿರಚಿತ ವಾದುವೋ ಪ್ರಕ್ಷಿಪ್ತವಾದುವೋ ಎಂಬ ಸಂದೇಹಕ್ಕೆ ಅವಕಾಶವಿದೆ. ಹೇಗೆಂದರೆ—೧. ಕಿಟ್ಟೆಲ್ ಅವರು ಅಚ್ಚುಹಾಕಿದ ಛಂದೋಂಬುಧಿಯಲ್ಲಿ ಈ ಪದ್ಯಗಳು ದೊರೆಯುವುದಿಲ್ಲ; ಅವರಿಗೆ ದೊರೆತ ಹಸ್ತಲಿಖಿತ ಪ್ರತಿಗಳಲ್ಲಿ ಈ ಪದ್ಯಗಳು ಇರಲಿಲ್ಲವೆಂದು ತೋರುತ್ತದೆ; ಇದ್ದಿದ್ದರೆ ಕವಿಯ ಕಾಲವನ್ನು ಗೊತ್ತುಮಾಡಲು ಸಾಧಕಗಳಾದ ಈ ಪದ್ಯಗಳನ್ನು ಅವರು ಅಚ್ಚುಹಾಕದೆ ಬಿಡಲು ಕಾರಣವಿರಲಿಲ್ಲ. ಆದಕಾರಣ ಈ ಪದ್ಯ ಗಳು ಕೆಲವು ಪ್ರತಿಗಳಲ್ಲಿದ್ದು ಇನ್ನುಕೆಲವು ಪ್ರತಿಗಳಲ್ಲಿ ಇಲ್ಲವೆಂದು ತೋರು ತ್ತದೆ. ಈ ಗ್ರಂಥದ ಹಸ್ತಲಿಖಿತ ಪ್ರತಿಗಳಲ್ಲಿ ಅನೇಕ ಪ್ರಕ್ಷಿಪ್ತ ಪದ್ಯ ಗಳು ಸೇರಿಹೋಗಿರುವುದರಿಂದ ಇವೂ ಪ್ರಕ್ಷಿಪ್ತವಾಗಿರುವುದು ಅಸಂಭವ ವೇನೂ ಅಲ್ಲ. ೨. ಕವಿ ಜೈನನೆಂಬುದಕ್ಕೆ ಈ ಪದ್ಯಗಳೆರಡನ್ನು ಬಿಟ್ಟರೆ ಈ ಗ್ರಂಥದಲ್ಲಿ ಅವ ಆಂತರ ಪ್ರಮಾಣವೂ ಇಲ್ಲ. (ಅಧಿಕಾರಾಂತ ಗದ್ಯ ಗಳಲ್ಲಿ ಬಿನ್ನ ಪಾಠಗಳಿರುವುದರಿಂದ ಅವನ್ನು ಪ್ರಮಾಣವಾಗಿ ಅಂಗೀಕರಿಸ ಲಾಗುವುದಿಲ್ಲ.) ಉದಾಹರಣೆಗೆ—(ಅ) ಗ್ರಂಥಾದಿಯಲ್ಲಿ ಜಿನಸ್ತುತಿ

ಯಿರದ ವಿಷ್ಣು, ಶಿವ ಮೊದಲಾದ ದೇವತೆಗಳ ಸ್ತೋತ್ರವಿದೆ. ಜೈನರಾದ ಪಂಪರನ್ನರ ಭಾರತ ಗದಾಯುದ್ಧಗಳಲ್ಲಿಯೂ ಹಾಗೆಯೇ ಇರುವುದೆಂದರೆ ಅವರು ಜೈನ ಮತಾನುಯಾಯಿಗಳಲ್ಲದ, ವೇದ ಮತಾವಲಂಬಿಗಳಾದ ರಾಜರಿಗಾಗಿ ಆ ಗ್ರಂಥಗಳನ್ನು ಬರೆದರು. ನಾಗವರ್ಮನು ಛಂದೋಂಬುಧಿಯನ್ನು ಯಾವ ರಾಜರಿಗಾಗಿಯೂ ಬರೆಯಲಿಲ್ಲ; ತನ್ನ ಹೆಂಡತಿಯನ್ನು ಉದ್ದೇಶಿಸಿ ಬರೆದಿರುತ್ತಾನೆ. ಆದಕಾರಣ ಪಂಪರನ್ನಾದಿಗಳಿಗಿದ್ದ ಕಾರಣವು ನಾಗವರ್ಮನಿಗಿಲ್ಲ. ಅಲ್ಲದೆ (ಆ) ಪಂಪರನ್ನರು ಜೈನರೆಂಬುದಕ್ಕೆ ಆಂತರಬಾಹ್ಯ ಪ್ರಮಾಣಗಳಿವೆ. ಉದಾಹರಣೆಗೆ---ಪಂಪನು ಭಾರತದಲ್ಲಿ ತನ್ನ ಪೂರ್ವಜರ ಚರಿತ್ರೆಯನ್ನು ಬರೆಯುವಾಗ ತನ್ನ ತಂದೆ ಜೈನಮತವನ್ನು ಅವಲಂಬಿಸಿದಂತೆ ಹೇಳಿಕೊಂಡಿದ್ದಾನೆ; ತಾನು ಜಿನಾಗಮವನ್ನು ಆದಿಪುರಾಣದಲ್ಲಿಯೂ ಲೌಕಿಕವನ್ನು ಭಾರತದಲ್ಲಿಯೂ ಬೆಳಗುವಂತೆ ತಿಳಿಸಿದ್ದಾನೆ. ನಾಗವರ್ಮನು ಜೈನನೆಂಬುದಕ್ಕೆ ಅಂಥ ಆಂತರ ಪ್ರಮಾಣವಾಗಲಿ, ಬಾಹ್ಯಪ್ರಮಾಣವಾಗಲಿ ಯಾವುದೂ ಇಲ್ಲ (ಇ) ಛಂದೋಂಬುಧಿಯ ಉದ್ದಕ್ಕೂ ಕವಿ ಬ್ರಾಹ್ಮಣನೆಂಬುದಕ್ಕೆ ಪ್ರಬಲವಾದ ಪ್ರಮಾಣಗಳು ದೊರೆಯುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಾಹರಿಸಬಹುದು---ಕವಿ ತಾನು[1] "**ಪದ್ಮಜಂ ಶಾಸ್ತ್ರದೊಳ್**" ಎಂದೂ ತನ್ನ ಕಾವ್ಯವು "**ಸನಾತನ ವೇದದಂತೆ** ನಿಲ್ಕೆಂದುಂ" ಎಂದೂ ಬ್ರಾಹ್ಮಣನಂತೆ ಹೇಳಿಕೊಂಡಿದ್ದಾನೆ. ಛಂದಶ್ಶಾಸ್ತ್ರವು "ಇಂದುಧರನುಮೆಗೆ ಪೇಳ್ದುದು" ಎಂದು ಶಿವಪ್ರೋದಿತವಾದದ್ದೆಂದು ಹೇಳಿರುತ್ತಾನೆ. ಅಲ್ಲದೆ ತನಗೆ ಶಿವಾಧಿಕ್ಯದಲ್ಲಿರುವ ವಿಶ್ವಾಸವನ್ನು ವಿಧವಿಧವಾಗಿ ಸೂಚಿಸಿರುತ್ತಾನೆ; ಹೇಗೆಂದರೆ--- ಗುರು ಲಘುಗಳಿಗೆ ಕ್ರಮವಾಗಿ ತ್ರಿಯಂಬಕ, ಪುರಾಂತಕ ಎಂದೂ, ಕನ್ನಡ ಛಂದಸ್ಸಿನಲ್ಲಿ ೨, ೩, ೪ "ಅಂಶ"ಗಳಿಂದ ಹುಟ್ಟುವ ಗಣಗಳಿಗೆ ಕ್ರಮವಾಗಿ ಬ್ರಹ್ಮ, ವಿಷ್ಣು, ರುದ್ರ ಎಂದೂ ನಾಮಕರಣ ಮಾಡಿರುತ್ತಾನೆ. ಬ್ರಹ್ಮನಿಗಿಂತ ವಿಷ್ಣುವೂ ವಿಷ್ಣುವಿಗಿಂತ ಶಿವನೂ ಅಧಿಕರೆಂಬ ಭಾವವನ್ನು ಕವಿ ಸೂಚಿಸುವಂತೆ ತೋರುತ್ತದೆ. ಅಲ್ಲದೆ, ಕಂದಪದ್ಯದಲ್ಲಿ ಬರುವ ಐದು ತೆರದ ಮಾತ್ರಾಗಣಗಳಿಗೆ "ಗಿರಿಶಂ. ಧೂರ್ಜಟಿ, ಶರ್ವಂ, ಪುರಾರಿ,

---

[1] ಈ ಕವಿಯ ಪೂರ್ವಜರು ವೈದಿಕ ಬ್ರಾಹ್ಮಣರೆಂದು ಹಿಂದೆಯೇ ತಿಳಿಸಿದೆ. ಬ್ರಾಹ್ಮಣ ವಂಶದಲ್ಲಿ ಹುಟ್ಟಿದವನು ಬ್ರಾಹ್ಮಣನೇ ಆಗಿರಬೇಕು. ತಾನಾಗಲಿ, ತನ್ನ ಹಿಂದಿನವರಾಗಲಿ ಜೈನಮತವನ್ನವಲಂಬಿಸಿದಂತೆ ಅವನು ಹೇಳಿಲ್ಲ.

ಮುಖರಿಪು'' ಎಂಬ ಶಿವನಾಮಾಕ್ಷರಗಳ ಹೆಸರನ್ನು ಕೊಟ್ಟಿದ್ದಾನೆ. ಇವೆಲ್ಲ ವನ್ನೂ ನೋಡಿದರೆ ಈ ಗ್ರಂಥವನ್ನು ಬರೆದ ಕವಿ ಶೈವಬ್ರಾಹ್ಮಣನೆಂದು ಬೋಧೆಯಾಗುತ್ತದೆ. ಈ ಕಾರಣಗಳಿಂದ '' ಅರಸಂ ರಕ್ಕಸಗಂಗಂ'', ''ಗಂಡರ ಮೂಕುತಿ'' ಎಂಬ ಪದ್ಯಗಳು ಪ್ರಕ್ಷಿಪ್ತವಿರಬಹುದೇ ಎಂಬ ಪ್ರಬಲವಾದ ಸಂಶಯವು ಅನಿವಾರ್ಯವಾಗುತ್ತದೆ. ಆದರೆ ಇವು ಪ್ರಕ್ಷಿಪ್ತ ಪದ್ಯಗಳೇ ಹೊರತು ಕವಿರಚಿತವಾದುವಲ್ಲ ಎಂದು ನಿರ್ಧರವಾಗಿ ಹೇಳು ವುದೂ ಕಷ್ಟ. ಏಕೆಂದರೆ, ಇವುಗಳಲ್ಲಿ ಉಕ್ತರಾಧವರು ಸಮಕಾಲಿಕರು, ಒಬ್ಬರಿಗೊಬ್ಬರು ಸಂಬಂಧಪಟ್ಟವರು ಎಂದು ಶಾಸನಗಳಿಂದ ಗೊತ್ತಾ ಗುತ್ತದೆ. ಇವುಗಳನ್ನು ಯಾರೇ ಆಗಲಿ ಇಲ್ಲಿ ತಂದು ಸೇರಿಸುವುದಕ್ಕೆ ಉದ್ದೇಶವೇನು ? ನಿಷ್ಕಾರಣವಾಗಿ ಸೇರಿಸಿದರೆಂದು ಹೇಗೆ ಹೇಳುವುದು ?

ಕಾದಂಬರಿಯಿಂದಲೂ ಛಂದೋಂಬುಧಿಯಿಂದಲೂ ಕವಿಯ ವಿಷಯ ವಾಗಿ ತಿಳಿದುಬರುವ ಕೆಲವು ಸಂಗತಿಗಳು ಆ ಎರಡು ಗ್ರಂಥಗಳೂ ಏಕ ಕರ್ತೃಕಗಳಾಗಿರಬಹುದೆಂಬ ಊಹೆಗೆ ಅವಕಾಶಕೊಡುತ್ತವೆ. ಆ ಎರಡು ಗ್ರಂಥಗಳಿಂದಲೂ ಕವಿಯ ಹೆಸರು ನಾಗವರ್ಮನೆಂದೂ ಆತನಿಗೆ ಕವಿ ರಾಜಹಂಸನೆಂಬ ಅಥವಾ ಅದಕ್ಕೆ ಸಮಾನಾರ್ಥಕವಾದ ಒಂದು ಬಿರುದು ಇದ್ದಿತೆಂದೂ ಆತನು ಬಹುಶಃ ಸೈನ್ಯದಲ್ಲಿ ಒಂದು ಅಧಿಕಾರವನ್ನು ಪಡೆದ ಯುದ್ಧವೀರನಾಗಿದ್ದನೆಂದೂ ಗೊತ್ತಾಗುತ್ತದೆ. ಈ ಎರಡು ಗ್ರಂಥ ಗಳೂ ಸುಮಾರು ಒಂದೇ ಕಾಲದಲ್ಲಿ ಹುಟ್ಟಿದುವೆಂದು ಇಟ್ಟುಕೊಂಡರೆ ಇವು ಏಕ ಕವಿ ಕರ್ತೃಕಗಳೆಂದು ಊಹಿಸುವುದು ಅನುಚಿತವಾಗಲಾರದು. ಆದರೆ ಈ ವಿಧವಾದ ಊಹೆಗೆ ಪ್ರತಿಬಂಧಕಗಳು ಇಲ್ಲದೆ ಹೋಗಿಲ್ಲ. ಉದಾಹರಣೆಗೆ—೧. ಇವುಗಳಲ್ಲಿ ಒಂದನ್ನು ಬರೆದ ಕವಿ ಮತ್ತೊಂದನ್ನೂ ಬರೆದನೆಂಬುದಕ್ಕೆ ಆ ಗ್ರಂಥಗಳಲ್ಲಾಗಲಿ ಬೇರೆ ಗ್ರಂಥಗಳಲ್ಲಾಗಲಿ ಸ್ಪಷ್ಟ ವಾದ ಪ್ರಮಾಣವಿಲ್ಲ. ೨. ಛಂದೋಂಬುಧಿ ರಕ್ಕಸಗಂಗನ ಕಾಲದಲ್ಲಿ ಹುಟ್ಟಿತು ಎಂದು ಹೇಳುವ ಪದ್ಯಗಳು ಪ್ರಕ್ಷಿಪ್ತವಾಗಿರಬಹುದೆ ಎಂಬ ಸಂಶಯಕ್ಕೆ ಎಡೆಯಿರುವುದರಿಂದಲೂ ಕಾದಂಬರಿಯಲ್ಲಿಉಕ್ತರಾದ ಚಂದ್ರ ಅಥವಾ ನರೇಂದ್ರಚಂದ್ರ, ಭೋಜರಾಜ ಎಂಬವರು ಇಂಥವರೇ ಎಂದು ನಿರ್ಧರಿಸಲು ತಕ್ಕ ಪ್ರಮಾಣವು ಇಲ್ಲದಿರುವುದರಿಂದಲೂ ಈ ಎರಡು ಗ್ರಂಥಗಳೂ ಒಂದೇ ಕಾಲದಲ್ಲಿ ಹುಟ್ಟಿದುವೆಂದು ದೃಢವಾಗಿ ಹೇಳು

ವೆಂತಿಲ್ಲ. ೩. ಛಂದೋಂಬುಧಿಯನ್ನು ಬರೆದವನು ತಾನು ಸಯ್ಯಡಿಯವನೆಂದೂ ತನ್ನ ಪೂರ್ವಿಕರು ವೆಂಗಿ ದೇಶದವರೆಂದೂ ಹೇಳಿಕೊಂಡಿರುವನು ; ಕಾದಂಬರೀಕಾರನು ಇದಾವುದನ್ನೂ ಹೇಳಿಲ್ಲ. ೪. ಕಾದಂಬರೀಕಾರನು ಚಂದ್ರ ಅಥವಾ ನರೇಂದ್ರಚಂದ್ರ, ಭೋಜರಾಜ ಇವರ ಆಶ್ರಯವನ್ನು ಪಡೆದಿದ್ದಂತೆ ಆ ಗ್ರಂಥದಿಂದ ಗೊತ್ತಾಗುತ್ತದೆ. ಛಂದೋಂಬುಧಿಕಾರನು ಆ ರಾಜರ ಹೆಸರನ್ನು ಎತ್ತುವುದಿಲ್ಲ—ಇತ್ಯಾದಿ.

ಒಟ್ಟಿನಲ್ಲಿ, ಕಾದಂಬರಿ ಛಂದೋಂಬುಧಿಗಳು ಏಕಕರ್ತೃಕಗಳೇ ಭಿನ್ನಕರ್ತೃಕಗಳೇ ಎಂಬ ವಿಚಾರದಲ್ಲಿ ''ಇದಮಿತ್ಥಂ'' ಎಂದು ನಿರ್ಧರಿಸಲು ಈಗ ದೊರೆತಿರುವ ಸಾಧನಗಳು ಸಾಲವು. ಈ ಎರಡು ಗ್ರಂಥಗಳನ್ನೂ ಒಬ್ಬನೇ ಬರೆದಿರಬಹುದಾದದ್ದು ಅಸಂಭವವಲ್ಲವೆಂದು ತೋರುತ್ತದೆ.

ಇನ್ನು, ಈ ಎರಡು ಗ್ರಂಥಗಳನ್ನು ಬರೆದ ಕವಿಯಿಂದ ಅಥವಾ ಕವಿಗಳಿಂದ ಕಾವ್ಯಾವಲೋಕನಾದಿಗಳೂ ರಚಿತವಾದುವೆ ಅಥವಾ ಅವನ್ನು ಬರೆದ ನಾಗವರ್ಮನೇ ಬೇರೆಯೆ ಎಂಬ ವಿಷಯದಲ್ಲಿರುವ ಭಿನ್ನಮತಗಳನ್ನು ಇಲ್ಲಿ ಸಂಗ್ರಹವಾಗಿ ಸೂಚಿಸಬಹುದು. ಕಾವ್ಯಾವಲೋಕನಾದಿಗಳನ್ನು ಬರೆದವನು ಬೇರೊಬ್ಬ ನಾಗವರ್ಮನೆಂಬುದು ಕವಿಚರಿತಕಾರರ ಮತ. ಅವರು ಕೊಡುವ ಕಾರಣಗಳು ಇವು—

೧. ಛಂದೋಂಬುಧಿಯಲ್ಲಿಯ '' ಅರಸಂ ರಕ್ಕಸಗಂಗಂ '', ''ಗಂಡರ ಮೂಕುತಿಯೆನಿಸಿದ '' ಎಂಬ ಪದ್ಯಗಳಲ್ಲಿ ಅಣ್ಣ, ರಾಯ ಎಂಬ ಹೆಸರೂ ಅಜಿತಸೇನ ರಕ್ಕಸಗಂಗರ ಹೆಸರೂ ಉಕ್ತವಾಗಿವೆ. ಚಾವುಂಡರಾಯನಿಗೆ ಅಣ್ಣ, ರಾಯ ಎಂಬ ಹೆಸರುಗಳಿವೆ. ಅಜಿತಸೇನದೇವನು ರಾಚಮಲ್ಲನಿಗೂ ಚಾವುಂಡರಾಯನಿಗೂ ಗುರುವಾಗಿದ್ದನು. ಮೇಲೆ ಹೇಳಿದ ಪದ್ಯಗಳಿಂದ ಈ ಕವಿ ರಕ್ಕಸಗಂಗನ ಕಾಲದಲ್ಲಿ ಚಾವುಂಡರಾಯನಿಂದ ಪೋಷಿತನಾಗಿಯೂ ಅಜಿತಸೇನದೇವನ ಶಿಷ್ಯನಾಗಿಯೂ ಇದ್ದನೆಂಬುದು ವ್ಯಕ್ತವಾಗುತ್ತದೆ. ರಕ್ಕಸಗಂಗನು ರಾಚಮಲ್ಲನ ತಮ್ಮ. ಸುಮಾರು ೯೮೪ ರಿಂದ ರಾಜ್ಯಭಾರ ಮಾಡಿದನು. ಕಾದಂಬರಿಯ ಕೊನೆಯಲ್ಲಿ ಕೆಲವು ಜಾತ್ಯಶ್ವಗಳನ್ನು ''ಸತ್ಕೃತಿವನಿತೆಗಿವೌಚಿತ್ಯಮೆಂದಿತ್ತಂ ನತ್ಯುತ್ಸವದಿಂ . .... ಭೋಜರಾಜ ಕ್ಷಿತೀಶಂ'' ಎಂದು ಹೇಳಿದೆ. ಈ ಭೋಜನು ಧಾರಾಪುರದ ಭೋಜನಾಗಿರಬೇಕು. ಆತನು ಹತ್ತನೆಯ ಶತಮಾನದ ಅಂತ್ಯದಲ್ಲಿ ಆಳುವ

ದಕ್ಕೆ ಆರಂಭಿಸಿದಂತೆ ತಿಳಿಯುತ್ತದೆ. ಆದ್ದರಿಂದ ಛಂದೋಂಬುಧಿ ಕಾದಂಬರಿಗಳೆರಡೂ ಹತ್ತನೆಯ ಶತಮಾನದ ಅಂತ್ಯದಲ್ಲಿ ಹುಟ್ಟಿದುವು. ಇವನ್ನು ರಚಿಸಿದ ನಾಗವರ್ಮನ ಕಾಲ ಸು. ೯೯೦.

ಜನ್ನನ ಅನಂತನಾಥ ಪುರಾಣದಲ್ಲಿಯ ಈ ಪದ್ಯವು ಎರಡನೆಯ ನಾಗವರ್ಮನ ಕಾಲವನ್ನು ಗೊತ್ತುಮಾಡಲು ಸಾಧಕವಾಗಿದೆ—

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾ ನಾಗವ
ರ್ಮನಿದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ
ದು ನೃಸಿಂಹ ಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ
ಕ್ತಿ ನವೀನೋಜ್ಜ್ವಳಬಾಣನಪ್ಪ ಸುಮನೋಬಾಣಂ ಕವಿಶ್ರೇಷ್ಠರೊಳ್

ಇಲ್ಲಿ, ಜಕದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾದ ಇದಾನೀಂತನ ಶರ್ವವರ್ಮನೆಂಬ ಬಿರುದುಳ್ಳ ನಾಗವರ್ಮನು ಜನ್ನನಿಗೆ ಉಪಾಧ್ಯಾಯನೆಂದು ಹೇಳಿದೆ. ಕಾವ್ಯಾವಲೋಕನದ ಒಂದು ಪದ್ಯದಿಂದ ಅದನ್ನು ರಚಿಸಿದ ನಾಗವರ್ಮನಿಗೆ ಅಭಿನವಶರ್ವವರ್ಮನೆಂಬ ಬಿರುದಿದ್ದಂತೆ ತಿಳಿದುಬರುತ್ತದೆ. ಆದ್ದರಿಂದ ಈ ನಾಗವರ್ಮನೇ ಜನ್ನನ ಉಪಾಧ್ಯಾಯನಾಗಿರಬೇಕು. ಮೇಲೆ ಹೇಳಿದ ಜಗದೇಕಮಲ್ಲನು ೧೧೩೮ ರಿಂದ ೧೧೫೦ರ ವರೆಗೆ ಆಳಿದ ಚಾಳುಕ್ಯ ರಾಜನಾಗಿರಬೇಕು. ಆದ್ದರಿಂದ ಎರಡನೆಯ ನಾಗವರ್ಮನ ಕಾಲ ಸು. ೧೧೪೫.

೨. ಈ ಇಬ್ಬರು ನಾಗವರ್ಮರ ತಂದೆ, ಬಿರುದು, ಮತ ಮೊದಲಾದುವುಗಳಲ್ಲಿಯೂ ವ್ಯತ್ಯಾಸವಿದೆ. ಛಂದೋಂಬುಧಿಯನ್ನು ಬರೆದ ನಾಗವರ್ಮನು "ವೆಣ್ಣಮಯ್ಯನಗ್ರತನೂಜಂ"; ಎರಡನೆಯ ನಾಗವರ್ಮನಾದರೋ ತಾನು "ದಾಮೋದರ" ತನಯನೆಂದು ಹೇಳಿಕೊಂಡಿದ್ದಾನೆ. ಮೊದಲನೆಯವನ ಬಿರುದು "ಕವಿರಾಜಹಂಸ"; ಎರಡನೆಯವನದು "ಕವಿತಾಗುಣೋದಯ". ಮೊದಲನೆಯವನು ಜೈನನೋ ಅಲ್ಲವೋ ಎಂಬ ಸಂದೇಹಕ್ಕೆ ಅವಕಾಶವಿದೆ; ಎರಡನೆಯವನು ಜೈನನೆಂಬುದಕ್ಕೆ ಸಂದೇಹವೇ ಇಲ್ಲ. ಮೊದಲನೆಯವನಿಗೆ ನಾಕಿ. ಸಯ್ಯಡಿಯಾತಂ ಎಂಬ ಹೆಸರುಗಳಿದ್ದಂತೆ ತಿಳಿಯುತ್ತದೆ; ಎರಡನೆಯವನಿಗೆ ಈ ಹೆಸರುಗಳಿಲ್ಲ. ಆದ್ದರಿಂದ ಇಬ್ಬರೂ ಬೇರೆ ಬೇರೆ ಕವಿಗಳು.

ಕವಿಚರಿತಕಾರರ ಈ ಸಿದ್ಧಾಂತವನ್ನು ಡಾ॥ ವೆಂಕಟಸುಬ್ಬಯ್ಯ ನವರು ಖಂಡಿಸಿ ಈ ಐದು ಗ್ರಂಥಗಳನ್ನೂ ಬರೆದವನು ಒಬ್ಬ ನಾಗವರ್ಮನೇ ಎಂದು "ಕೆಲವು ಕನ್ನಡ ಕವಿಗಳ ಜೀವನಕಾಲ ವಿಚಾರ" ಎಂಬ ಗ್ರಂಥದಲ್ಲಿ (ಪುಟಗಳು ೧೫೨–೧೮೧) ನಿರ್ಣಯಿಸಿರುತ್ತಾರೆ. ಅವರು ಕೊಡುವ ಮುಖ್ಯ ಕಾರಣಗಳ ಸಾರಾಂಶವಿದು—

೧. ಕಾಲದ ವಿಚಾರ: ರಕ್ಕಸಗಂಗನೆಂಬ ಹೆಸರಿನ ರಾಜರು ಮೂರು ಜನರಿದ್ದಾರೆ. ಛಂದೋಂಬುಧಿಯ ಪದ್ಯಗಳಲ್ಲಿ ಉಕ್ತನಾದ ರಕ್ಕಸಗಂಗನಿಗೆ " ಗಂಡರ ಮೂಕುತಿ " ಎಂಬ ಬಿರುದಿದ್ದಂತೆ ಆ ಪದ್ಯಗಳಿಂದ ಗೊತ್ತಾಗುತ್ತದೆ. (ಗಂಡರ ಮೂಕುತಿ ಎಂಬುದು ರಾಯಂ ಎಂಬುದನ್ನು ವಿಶೇಷಿಸುವುದಿಲ್ಲ. ಏಕೆಂದರೆ, ಚಾವುಂಡರಾಯನಿಗೆ ಆ ಬಿರುದಿತ್ತೆಂಬುದಕ್ಕೆ ಯಾವ ಆಧಾರವೂ ಇಲ್ಲ. ಆದ್ದರಿಂದ ಅದು ಮಾಂಡಳಿಕರ ಎಂಬುದರ ವಿಶೇಷಣವಾಗಿರಬೇಕು. ಈ ಮಾಂಡಳಿಕನು ರಕ್ಕಸಗಂಗನಾಗಿರಬೇಕು.) ಈ ಬಿರುದಿನ ರಕ್ಕಸಗಂಗನು ಇದ್ದದ್ದು ಸು. ೧೦೫೦ ರಲ್ಲಿ. ಅವನ ಹಿಂದಿನ ಇಬ್ಬರಿಗೆ ಆ ಬಿರುದು ಇರಲಿಲ್ಲ. ಆದಕಾರಣ ಛಂದೋಂಬುಧಿಯ ರಚನೆಯ ಕಾಲ ಹನ್ನೊಂದನೆಯ ಶತಮಾನದ ಪೂರ್ವಾರ್ಧ. ಧಾರಾಪುರದ ಭೋಜರಾಜನು ಹತ್ತನೆಯ ಶತಮಾನದ ಅಂತ್ಯದಲ್ಲಿರಲಿಲ್ಲ. ಅವನು ೧೦೧೮ರಿಂದ ೧೦೬೦ರ ವರೆಗೆ ಆಳುತ್ತಿದ್ದನೆಂದು ತಿಳಿದುಬರುತ್ತದೆ. ಆದ್ದರಿಂದ ಕಾದಂಬರಿಯು ರಚಿತವಾದದ್ದು ಹನ್ನೊಂದನೆಯ ಶತಮಾನದ ಪೂರ್ವಾರ್ಧದಲ್ಲಿ. ಕವಿಚರಿತಕಾರರು ಹೇಳುವಂತೆ ೧೧೪೫ರಲ್ಲಿದ್ದ ನಾಗವರ್ಮನು ೧೨೩೦ರಲ್ಲಿ ಅನಂತನಾಥಪುರಾಣವನ್ನು ಬರೆದ ಜನ್ನನಿಗೆ ಉಪಾಧ್ಯಾಯನಾಗಿರುವುದು ಅಸಂಭವ. " ಜನನಾಥಂ ಜಗದೇಕನಲ್ಲಿ " ಎಂಬ ಪದ್ಯಕ್ಕೆ ಅವರು ಮಾಡಿರುವ ಅರ್ಥವು ಸರಿಯಲ್ಲ; ಆ ಪದ್ಯದ ಅಭಿಪ್ರಾಯವು ನಾಗವರ್ಮನು ಜನ್ನನ ಉಪಾಧ್ಯಾಯನೆಂಬುದೂ ಅಲ್ಲ. ಅಲ್ಲಿ ಉಕ್ತನಾದ ಜಗದೇಕಮಲ್ಲನು ೧೧೩೮ರಿಂದ ೧೧೫೦ರವರೆಗೆ ಆಳಿದ ಚಾಳುಕ್ಯರಾಜನಲ್ಲ; ೧೦೧೫ರಿಂದ ೧೦೪೦ರವರೆಗೆ ಆಳುತ್ತಿದ್ದವನಾಗಿರಬೇಕು. ಆದ್ದರಿಂದ ಕಾವ್ಯಾವಲೋಕನಾದಿ ಗ್ರಂಥಗಳು ಹುಟ್ಟಿದ ಕಾಲವೂ ಹನ್ನೊಂದನೆಯ ಶತಮಾನದ ಪೂರ್ವಾರ್ಧ. ಆದಕಾರಣ ಈ ಗ್ರಂಥಗಳನ್ನೆಲ್ಲ ಒಬ್ಬ ಕವಿಯೇ ರಚಿಸಿರಬೇಕು.



೨. ಇತರ ವಿಷಯಗಳು: ಈ ಇಬ್ಬರು ಕವಿಗಳು ಬೇರೆಬೇರೆ ಎಂಬುದಕ್ಕೆ ಕವಿಚರಿತಕಾರರು ಕೊಡುವ ಇತರ ನಿದರ್ಶನಗಳನ್ನು ನಕಾರಣವಾಗಿ ತ್ಯಾಗವಮಾಡಬಹುದು. ಉದಾಹರಣೆಗೆ—ಕವಿ ಒಂದು ಗ್ರಂಥದಲ್ಲಿ (ಛಂದೋಂಬುಧಿಯಲ್ಲಿ) ತನ್ನ ತಂದೆ ವೆಣ್ಣಮಯ್ಯನ ಹೆಸರನ್ನೂ ಇನ್ನೊಂದರಲ್ಲಿ (ಕಾವ್ಯಾವಲೋಕನದಲ್ಲಿ) ತಾತ ದಾಮೋದರನ (ದಾಮಮಯ್ಯ ಎಂಬುದು ದಾಮೋದರ ಎಂಬುದರ ಇನ್ನೊಂದು ರೂಪ) ಹೆಸರನ್ನೂ ಹೇಳಿರಬೇಕು. ತನಯ, ಸುತ ಎಂಬ ಪದಗಳಿಗೆ ಮೊಮ್ಮಗ ಎಂದೂ ಅರ್ಥವಾಗಬಹುದು. ಇದಕ್ಕೆ ಶಾಸ್ತ್ರಾಧಾರವಿದೆ. ಕಾವ್ಯಾವಲೋಕನದಲ್ಲಿ ಕವಿ ಬಹುಶಃ ಮಕಾರ ಪ್ರಾಸಕ್ಕಾಗಿ ದಾಮೋದರ ಎಂಬ ಪದವನ್ನು ಪ್ರಯೋಗಿಸಿರಬಹುದು. ಹೀಗೆಯೇ ಬಿರುದುಗಳ ವಿಷಯದಲ್ಲಿಯೂ. ಕವಿ ತನ್ನ ಎಲ್ಲ ಬಿರುದುಗಳನ್ನೂ ಎಲ್ಲ ಗ್ರಂಥಗಳಲ್ಲಿಯೂ ಹೇಳಿಕೊಳ್ಳಬೇಕೆಂಬ ನಿಯಮವೇನೂ ಇಲ್ಲ. ಒಂದೊಂದು ಗ್ರಂಥದಲ್ಲಿ ಒಂದೊಂದು ಬಿರುದನ್ನು ಹೇಳಿಕೊಂಡಿರಬಹುದು. ಸಯ್ಯಡಿಯಾತಂ ಎಂದು ಒಂದು ಗ್ರಂಥದಲ್ಲಿ ಹೇಳಿಕೊಂಡವನು ಇನ್ನೊಂದರಲ್ಲಿಯೂ ಹೇಳಬೇಕೆಂಬ ನಿಯಮವೇನೂ ಇಲ್ಲ. ಇತ್ಯಾದಿ.

ಒಟ್ಟಿನಲ್ಲಿ, ಕವಿಚರಿತಕಾರರು ಕೊಡುವ ಕಾರಣಗಳು ಹೆಚ್ಚು ತೂಕವಾದುವು. ಕಾವ್ಯಾವಲೋಕನಾದಿಗಳನ್ನು ಬರೆದವನು ಜೈನನೆಂಬುದು ನಿರ್ವಾದವಾಗಿರುವುದೂ ಕಾದಂಬರಿ ಛಂದೋಂಬುಧಿಗಳನ್ನು ಬರೆದವನು ಜೈನನೆಂಬುದು ಸಂದೇಹಾಸ್ಪದವಾಗಿರುವುದೂ ಕಾವ್ಯಾವಲೋಕನಾದಿಗಳನ್ನು ಬರೆದ ನಾಗವರ್ಮನೇ ಬೇರೆ ಎಂಬ ಮತಕ್ಕೆ ಸಹಕಾರಿಯಾಗಿದೆ.

ಶ್ರೀಮಾನ್ ಎಂ. ಗೋವಿಂದಪೈಗಳವರು "ನಾಗವರ್ಮರು ಎಷ್ಟು ಮಂದಿ?" ಎಂಬ ತಮ್ಮ ಲೇಖನದಲ್ಲಿ [ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂ. XX (೧೯೩೫)] ಈ ವಿಷಯವನ್ನು ಕೂಲಂಕಷವಾಗಿ ಚರ್ಚಿಸಿ ಹೀಗೆ ನಿರ್ಣಯಿಸಿದ್ದಾರೆ: "ಛಂದೋಂಬುಧಿ ಕ್ರಿ. ಶ. ೯೭೪–೮೪ರ ನಡುವೆಯೂ ಕಾದಂಬರಿ ಕ್ರಿ. ಶ. ೧೦೦೦–೧೦೦೫ರ ನಡುವೆಯೂ ರಚಿತವಾಗಿರಬೇಕೆಂಬುವದರಿಂದ ಅವೆರಡೂ ಏಕಕರ್ತೃಕವಾಗಿರಬಹುದು.... ಅವುಗಳ ರಚಕನಾದ ಬ್ರಾಹ್ಮಣ ನಾಗವರ್ಮನು ಕ್ರಿ. ಶ. ಸು ೯೫೦ರಲ್ಲಿ

ಹುಟ್ಟಿ ಕ್ರಿ. ಶ. ಸು ೧೧೧೦–೧೫ರ ವರೆಗೆ ಬಾಳಿರಬಹುದು. ವಸ್ತು ಕೋಶ–ಕಾವ್ಯಾವಲೋಕನ–ಭಾಷಾಭೂಷಣಗಳ ಜೈನ ನಾಗವರ್ಮನಾದರೋ ಕ್ರಿ. ಶ. ಸು ೧೧೨೦–೧೨೦೦ ರೊಳಗೆ ಇದ್ದಿರಬೇಕೆಂಬುದರಿಂದ ಆ ಬ್ರಾಹ್ಮಣ ನಾಗವರ್ಮನಿಗೂ ಈ ಜೈನ ನಾಗವರ್ಮನಿಗೂ ಹೆಚ್ಚು ಕಡಮೆ ೧೮೦ ವರ್ಷಗಳಷ್ಟಾದರೂ ಕಾಲ ವ್ಯತ್ಯಾಸವಿರಬೇಕೆಂದು ಪ್ರತ್ಯಕ್ಷವಿರುವುದರಿಂದ, ಅವರು ಅನ್ಯಾನ್ಯ ಶತಕಗಳಲ್ಲಿದ್ದ ಅನ್ಯಾನ್ಯರಾದ ಇಬ್ಬರೇ ಹೊರತು ಎಂದಿಗೂ ಏಕವ್ಯಕ್ತಿಯಲ್ಲ (ಪು. ೧೫೨)....ಹೀಗೆ ಛಂದೋಂಬುಧಿ–ಕಾದಂಬರಿಗಳ ರಚಕನಾದ ಬ್ರಾಹ್ಮಣ ನಾಗವರ್ಮನೊಬ್ಬನು, ವಸ್ತುಕೋಶ–ಕಾವ್ಯಾವಲೋಕನ–ಭಾಷಾಭಾಷಣಗಳನ್ನು ರಚಿಸಿದ ಜೈನ ನಾಗವರ್ಮನೊಬ್ಬನು, ಚಂದ್ರಚೂಡಾಮಣಿ ಶತಕವನ್ನು ಬರೆದ ಬ್ರಾಹ್ಮಣ ನಾಗವರ್ಮನೊಬ್ಬನು ಎಂದು ಅನ್ಯಾನ್ಯರಾದ ನಾಗವರ್ಮರು ಮೂವರಾದರೂ ಇದ್ದರು ಎಂಬಲ್ಲಿ ಸಂಶಯವಿಲ್ಲ" (ಪು. ೧೬೦).

## ಕನ್ನಡ ಸಾಹಿತ್ಯದ ಮೇಲೆ ಸಂಸ್ಕೃತ ಸಾಹಿತ್ಯದ ಪ್ರಭಾವ

ಕನ್ನಡದಲ್ಲಿ ಗ್ರಂಥರಚನೆಯಾಗುವ ಹೊತ್ತಿಗೆ ಸಂಸ್ಕೃತವು ಸಮಗ್ರ ಭರತಖಂಡದ ಸಂಸ್ಕೃತಿಯ ಭಾಷೆಯಾಗಿ ಏರ್ಪಟ್ಟು ವಿಶೇಷವಾದ ಪ್ರಾಬಲ್ಯವನ್ನು ಪಡೆದಿತ್ತು. ಸಂಸ್ಕೃತ ಸಾಹಿತ್ಯವೇ ಕನ್ನಡ ಸಾಹಿತ್ಯ ರಚನೆಗೆ ಪ್ರೇರಕವೂ ಪೋಷಕವೂ ಆಗಿತ್ತೆಂದು ಹೇಳಬಹುದು. ಕಾವ್ಯಕ್ಕೆ ತಕ್ಕ ವಿಷಯವಾವುದು, ಅದನ್ನು ಕಾವ್ಯದಲ್ಲಿ ಯಾವ ರೀತಿಯಲ್ಲಿ ನಿರೂಪಿಸಬೇಕು ಎಂಬುದನ್ನು ಕನ್ನಡ ಕವಿಗಳು ಸಂಸ್ಕೃತ ಕವಿಗಳಿಂದ ಕಲಿತರು. ಕೆಲವರು ಸಂಸ್ಕೃತ ಪ್ರಾಕೃತ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದರು; ಮತ್ತೆ ಕೆಲವರು ಕಾವ್ಯವಸ್ತುವನ್ನು ಸಂಸ್ಕೃತದಿಂದ ಸಂಗ್ರಹಿಸಿ ಹೊಸ ಕಾವ್ಯಗಳನ್ನು ರಚಿಸಿದರು. ಸಂಸ್ಕೃತ ಸಾಹಿತ್ಯವು ಕನ್ನಡ ಸಾಹಿತ್ಯಕ್ಕೆ ಸಾಹಿತ್ಯ ಸಾಮಗ್ರಿಯ ಭಂಡಾರವಾದದ್ದು ಮಾತ್ರವಲ್ಲದೆ ಕನ್ನಡ ಕವಿಗಳಿಗೆ ಕನ್ನಡಿಯೂ ಕೈದೀವಿಗೆಯೂ ಆಯಿತು.

ಸಂಸ್ಕೃತ ಸಾಹಿತ್ಯಕ್ಷೇತ್ರವು ವಿಸ್ತಾರವಾದದ್ದು. ಅದರಲ್ಲಿ ಯಾವ ಭಾಗವನ್ನು ಕನ್ನಡ ಕವಿಗಳು ಮಾದರಿಯಾಗಿಟ್ಟುಕೊಂಡರೆಂಬುದು ನಾವು ತಿಳಿದುಕೊಳ್ಳಬೇಕಾದ ಸಂಗತಿ. ಸಾಹಿತ್ಯಾಭಿರುಚಿಯು ಕಾಲ

ಕಾಲಕ್ಕೂ ಮಾರ್ಪಡುತ್ತದೆ. ಕನ್ನಡದಲ್ಲಿ ಸಾಹಿತ್ಯ ರಚನೆಯಾಗುವ ಕಾಲಕ್ಕೆ ಸಂಸ್ಕೃತದಲ್ಲಿ ಯಾವ ಅಭಿರುಚಿಯು ಬಳಕೆಯಲ್ಲಿತ್ತೋ ಆ ಅಭಿರುಚಿಯೇ ಕನ್ನಡ ಸಾಹಿತ್ಯದ ಸ್ವರೂಪವನ್ನೂ ನಿರ್ಧರಿಸುವುದು ಸ್ವಾಭಾವಿಕ. ಕನ್ನಡ ಸಾಹಿತ್ಯರಚನೆಯ ಆರಂಭಕಾಲವನ್ನು ಸುಮಾರು ಆರನೆಯ ಅಥವಾ ಏಳನೆಯ ಶತಮಾನವೆಂದು ಇಟ್ಟುಕೊಳ್ಳಬಹುದು. ಅಷ್ಟು ಹೊತ್ತಿಗೆ ಸಂಸ್ಕೃತ ಸಾಹಿತ್ಯದಲ್ಲಿ ವ್ಯಾಸವಾಲ್ಮೀಕಿಗಳ, ಭಾಸ ಕಾಳಿದಾಸರ ಕಾಲವಾಗಿ ಹೋಗಿ ಬಾಣ ಮಾಘರ ಕಾಲ ಸನ್ನಿಹಿತವಾಗಿತ್ತು.[1] ಎಂದರೆ, ಕಾವ್ಯದಲ್ಲಿ ಧರ್ಮನೀತಿಗಳಿಗೂ ಭಾವರಸಗಳಿಗೂ ಪ್ರಾಶಸ್ತ್ಯವನ್ನು ಕೊಡುವ ಸಂಪ್ರದಾಯವೂ, ಅಭಿರುಚಿಯೂ ಹಿಂದೆ ಬಿದ್ದು ಅರ್ಥಚಮತ್ಕಾರ ಉಕ್ತಿವೈಚಿತ್ರ್ಯಗಳಿಗೆ, ಪ್ರೌಢಿಮೆಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವ ಸಂಪ್ರದಾಯವು ರೂಢಿಗೆ ಬಂದಿತ್ತು. ಒಟ್ಟಿನಲ್ಲಿ ಕನ್ನಡ ಕವಿಗಳು ಈ ಸಂಪ್ರದಾಯವನ್ನು ಅನುಸರಿಸಿದರು. ಆದಕಾರಣವೇ ಕನ್ನಡ ಕಾವ್ಯಗಳಲ್ಲಿ, ಮುಖ್ಯವಾಗಿ ಚಂಪೂಕಾವ್ಯಗಳಲ್ಲಿ, ಕಥೆಗಿಂತಲೂ ವರ್ಣನೆಗೂ–ಅನೇಕ ವೇಳೆ ಅಪ್ರಸಕ್ತವಾದ ವರ್ಣನೆಗೂ–ರಸಭಾವಗಳಿಗಿಂತಲೂ ಶಬ್ದಾರ್ಥಾಲಂಕಾರಗಳಿಗೂ ಸ್ವಾನುಭವಕ್ಕಿಂತಲೂ ಕವಿಸಮಯಕ್ಕೂ ಹೆಚ್ಚು ಪುರಸ್ಕಾರವು ದೊರೆತಿದೆ. ಕನ್ನಡದಲ್ಲಿ ಈ ರೀತಿಯ ಕಾವ್ಯರಚನೆಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟ ಸಂಸ್ಕೃತ ಕವಿಗಳಲ್ಲಿ ಬಾಣನು ಮುಖ್ಯನಾದವನೆಂದು ಹೇಳಬಹುದು. ಆದಕಾರಣ ಕನ್ನಡ ಸಾಹಿತ್ಯವು ಪ್ರೌಢಾವಸ್ಥೆಗೆ ಬರುತ್ತಿದ್ದ ಕಾಲದಲ್ಲಿ ಬಾಣನ ಕಾದಂಬರಿಯು ಕನ್ನಡಕ್ಕೆ ಪರಿವರ್ತಿತವಾದದ್ದು ಸ್ವಾಭಾವಿಕವೇ ಆಗಿದೆ.

## ಬಾಣಕವಿಯ ಚರಿತ್ರೆ

ಬಾಣಕವಿಯ ಕಾವ್ಯರಚನಾ ರೀತಿಯನ್ನು ವಿವರಿಸುವುದಕ್ಕೆ ಮೊದಲು ಆತನ ಜೀವನ ಚರಿತ್ರೆಯನ್ನು ಇಲ್ಲಿ ಸಂಗ್ರಹವಾಗಿ ತಿಳಿಸು

[1] ಹೀಗೆ ಹೇಳುವುದರಿಂದ ಆ ಕಾಲದವರಿಗೆ ವ್ಯಾಸವಾಲ್ಮೀಕಿಗಳಲ್ಲಿ, ಕಾಳಿದಾಸ ಭಾಸರಲ್ಲಿ ಗೌರವವಿರಲಿಲ್ಲವೆಂದಾಗಲಿ, ಅವರ ಕಾವ್ಯಗಳನ್ನು ಜನರು ಓದಿ ಮೆಚ್ಚುತ್ತಿರಲಿಲ್ಲವೆಂದಾಗಲಿ ಅರ್ಥವಲ್ಲ. ಆದರೆ ಅವರ ಗೀಳು ಬೇರೆ ಕಡೆಗೆ ತಿರುಗಿತ್ತು. ಆ ಕಾಲದಲ್ಲಿಯೂ ಅಲ್ಲಿಂದೀಚೆಗೂ ಹುಟ್ಟಿದ ಸಂಸ್ಕೃತ ಕಾವ್ಯಗಳು ಇದಕ್ಕೆ ಸಾಕ್ಷಿಯಾಗಿವೆ. ಕವಿರಾಜಮಾರ್ಗದಲ್ಲಿ, ಸಂಸ್ಕೃತ ಕವಿಗಳಲ್ಲಿ ಮುಖ್ಯರಾದವರನ್ನು ತಿಳಿಸುವಾಗ ಪದ್ಯದಲ್ಲಿ ಕಾಳಿದಾಸ ಮಾಘರನ್ನು, [illegible] ಗದ್ಯದಲ್ಲಿ ಬಾಣನನ್ನು ಹೇಳಿರುವುದನ್ನೂ ನೋಡಬಹುದು. ಮೊನ್ನೆ ಮೊನ್ನೆಯವರೆಗೂ ಕಾಳಿದಾಸನ ಕಾವ್ಯಗಳು ಕನ್ನಡಕ್ಕೆ ಪರಿವರ್ತಿತವಾಗದಿದ್ದುದೂ ಗಮನಿಸಬೇಕಾದ ಸಂಗತಿ.

ವುದು ಅಪ್ರಸಕ್ತವಾಗಲಾರದು. ಬಾಣನು ಕ್ರಿ. ಶ. ೬೦೬ರಿಂದ ೬೪೬ರ
ವರೆಗೆ ರಾಜ್ಯಭಾರಮಾಡಿದ ಶ್ರೀಹರ್ಷಚಕ್ರವರ್ತಿಯ ಆಸ್ಥಾನಕವಿ
ಯಾಗಿದ್ದನು. ಈತನಿಂದ ರಚಿತವಾದ ಗ್ರಂಥಗಳಲ್ಲಿ ಹರ್ಷಚರಿತ
ಕಾದಂಬರಿಗಳು ಪ್ರಖ್ಯಾತವಾದುವು. ಈತನು ಸ್ವಚರಿತ್ರೆಯನ್ನು ಹರ್ಷ
ಚರಿತೆಯಲ್ಲಿ ವಿಸ್ತಾರವಾಗಿಯೂ ಕಾದಂಬರಿಯಲ್ಲಿ ಸಂಗ್ರಹವಾಗಿಯೂ
ಹೇಳಿಕೊಂಡಿರುತ್ತಾನೆ. ಈ ಆತ್ಮಕಥೆಯೇ ಒಂದು ಕಾದಂಬರಿಯಂತೆ
ಮನೋರಂಜಕವಾಗಿದ್ದು ಈತನು ಹುಟ್ಟುಕಥೆಗಾರನೆಂಬುದಕ್ಕೆ ನಿದರ್ಶನ
ವಾಗಿದೆ. ಬಾಣನು ಒಂದು ಪ್ರಖ್ಯಾತವಾದ ಬ್ರಾಹ್ಮಣ ವಂಶದಲ್ಲಿ
ಹುಟ್ಟಿದನು. (ತನ್ನ ಪೂರ್ವಜರ ವೃತ್ತಾಂತವನ್ನು ಈ ಕವಿ, ಕನ್ನಡದಲ್ಲಿ
ಪಂಪನಂತೆ, ಬಹು ಹೆಮ್ಮೆಯಿಂದ ಹೇಳಿಕೊಂಡಿರುವನು.) ಈತನ
ತಂದೆಯ ಹೆಸರು ಚಿತ್ರಭಾನು; ತಾಯಿಯ ಹೆಸರು ರಾಜದೇವಿ.
ಬಾಣನು ಹುಟ್ಟಿದ ಸ್ವಲ್ಪ ಕಾಲದಲ್ಲಿಯೇ ತಾಯಿ ತೀರಿಹೋದಳು. ಹೀಗೆ
ಹುಟ್ಟುತ್ತಲೇ ಮಾತೃವಾತ್ಸಲ್ಯದಿಂದ ವಂಚಿತನಾದ ಈ ಮಗುವನ್ನು
ಈತನ ತಂದೆ ಬಹು ಮಮತೆಯಿಂದ ಬೆಳಸಿ ವಿದ್ಯಾಬುದ್ಧಿಗಳನ್ನು ಕಲಿಸಿ
ದನು. ತಂದೆಯ ಲಾಲನೆಪಾಲನೆಯೂ ಚಿಕ್ಕತನದಲ್ಲಿಯೇ ಎಂದರೆ
ಹದಿನಾಲ್ಕನೆಯ ವಯಸ್ಸಿನಲ್ಲಿಯೇ ಈ ಕವಿಗೆ ಇಲ್ಲದಂತಾಯಿತು. (ಕವಿ
ತಾನು ಹೀಗೆ ಬಾಲ್ಯದಲ್ಲಿ ಅನುಭವಿಸಿದ ಮಾತಾಪಿತೃವಿಯೋಗ ದುಃಖ
ವನ್ನು ಕಾದಂಬರಿಯಲ್ಲಿ ಬರುವ ವೈಶಂಪಾಯನ ಗಿಳಿಯ ಪೂರ್ವ
ವೃತ್ತಾಂತದಲ್ಲಿ ಹೃದಯಂಗಮವಾಗಿ, ಹೃದಯವಿದ್ರಾವಕವಾಗಿ ಚಿತ್ರಿಸಿರು
ವಂತೆ ತೋರುತ್ತದೆ.) ಹೀಗೆ ಜೀವನದ ಹೊಸ್ತಿಲಲ್ಲಿಯೇ ಅನಾಥನಾದ
ತಾನು ಕೆಲವು ಕಾಲ ದಿಕ್ಕುತೋರದವನಾಗಿ ಮನೆಯಲ್ಲಿದ್ದು ಆಮೇಲೆ
"ಅವಿನಯ ನಿದಾನವಾದ ಸ್ವಾತಂತ್ರ್ಯ, ಕುತೂಹಲ ಬಹುಲವಾದ ಬಾಲ
ಭಾವ, ಧೈರ್ಯಪ್ರತಿಪಕ್ಷವಾದ ಯೌವನಾರಂಭ—ಇವುಗಳ ಪರಿಣಾಮ
ವಾಗಿ ಶೈಶವೋಚಿತವಾದ ಅನೇಕ ಚಾಪಲ್ಯಗಳಿಗೆ" ಈಡಾದಂತೆ ಹೇಳಿಕೊಂ
ಡಿದ್ದಾನೆ. ಈತನಿಗೆ ಪಿತ್ರಾರ್ಜಿತವಾದ ಆಸ್ತಿ ಬೇಕಾದಷ್ಟಾಗಿತ್ತು. ಬೇಕಾ
ದಷ್ಟು ಜನ ಗೆಳೆಯರೂ ಇದ್ದರು. ಈ ಗೆಳೆಯರ ಗುಂಪಿನಲ್ಲಿ ವಿವಿಧಜಾತಿಯ
ಜನರಿದ್ದರು—ಕವಿಗಳು, ವೈದ್ಯರು, ಪಂಡಿತರು, ಚಿತ್ರಕರು, ಭಿಕ್ಷುಗಳು,
ಸಂನ್ಯಾಸಿಗಳು, ನರ್ತಕಿಯರು, ಇತ್ಯಾದಿ. ಈ ದೊಡ್ಡ ಗುಂಪಿನೊಡನೆ

ಈತನು ದೇಶಪರ್ಯಟನಕ್ಕೆ ಹೊರಟನು. ಇಷ್ಟುಹೊತ್ತಿಗೆ ಮೇಧಾವಿಯಾದ ಈತನು ಬ್ರಾಹ್ಮಣರು ಕಲಿಯಬೇಕಾದ ವಿದ್ಯೆಯನ್ನೆಲ್ಲಾ ಕಲಿತು ವಿದ್ವಾಂಸನಾಗಿದ್ದನು. ದೇಶಪರ್ಯಟನ ಕಾಲದಲ್ಲಿ ಅನೇಕ ರಾಜಾಸ್ಥಾನಗಳನ್ನೂ ಗುರುಕುಲಗಳನ್ನೂ ಸಂದರ್ಶಿಸಿ ಅಲ್ಲಲ್ಲಿ ನಡೆಯುತ್ತಿದ್ದ ವಿದ್ವಾಂಸರ ಚರ್ಚೆಗಳಲ್ಲಿ ಭಾಗವಹಿಸಿದನು. ಹೀಗೆ ಬಹುಕಾಲ ಕಳೆದ ಮೇಲೆ ಸ್ವಗ್ರಾಮಕ್ಕೆ ಹಿಂದಿರುಗಿದನು. ಇಷ್ಟುಹೊತ್ತಿಗೆ ಈತನ ಕೀರ್ತಿ ಶ್ರೀಹರ್ಷಚಕ್ರವರ್ತಿಯ ಕಿವಿಯನ್ನು ಮುಟ್ಟಿತ್ತು. ಚಕ್ರವರ್ತಿಯ ಹತ್ತಿರಿದ್ದ ಕೆಲವರು ಅಸೂಯೆಯಿಂದ ಈತನ "ಶೈಶವೋಚಿತವಾದ ಚಾಪಲ್ಯ"ಗಳಿಗೆ ಬಣ್ಣಗಟ್ಟಿ ಈತನ ವಿಷಯದಲ್ಲಿ ರಾಜನಿಗೆ ಅಸಂತುಷ್ಟಿಯುಂಟಾಗುವಂತೆ ಮಾಡಿದ್ದರು. ಆದರೆ ಬಾಣನಿಗೆ ನಿಷ್ಕಾರಣದ್ವೇಷಿಗಳಿದ್ದಂತೆಯೇ ಅವ್ಯಾಜಮಿತ್ರರೂ ಇದ್ದರು. ಇವರಲ್ಲಿ ಶ್ರೀಹರ್ಷನ ತಮ್ಮನಾದ ಕೃಷ್ಣನು ಒಬ್ಬನು. ಈತನು ಬಾಣನ ವಿಷಯವಾಗಿ ತನ್ನ ಅಣ್ಣನೊಡನೆ ಮಾತನಾಡಿ ಬಾಣನನ್ನು ಆತನ ಆಸ್ಥಾನಕ್ಕೆ ಬರುವಂತೆ ಹೇಳಿ ಕಳುಹಿಸಿದನು. ತನ್ನ ಮನೆಗೆ ಕೃಷ್ಣನ ದೂತನು ಬಂದದ್ದು, ಅವನೊಡನೆ ತಾನು ಮಾಡಿದ ಸಂಭಾಷಣೆ, ಶ್ರೀಹರ್ಷನ ಬಳಿಗೆ ಹೋಗುವಾಗ ತಾನು ಮಾಡಿದ ಪ್ರಯಾಣ, ವೈಭವಪೂರ್ವವಾದ ಆಸ್ಥಾನದಲ್ಲಿ ತಾನು ಚಕ್ರವರ್ತಿಯನ್ನು ನೋಡಿದ್ದು, ಆತನಿಗೂ ತನಗೂ ನಡೆದ ಸಂಭಾಷಣೆ ಮೊದಲಾದುವನ್ನು ಬಾಣಕವಿ ಹೃದಯಂಗಮವಾಗಿ ವರ್ಣಿಸಿರುವನು. ಶ್ರೀಹರ್ಷನು ಕವಿಯನ್ನು ಕೆಲವುಕಾಲ ತನ್ನ ಸಮೀಪದಲ್ಲಿಯೇ ಇಟ್ಟುಕೊಂಡಿದ್ದು. ಆತನ ನಡತೆಯನ್ನೂ ಯೋಗ್ಯತೆಯನ್ನೂ ಪರೀಕ್ಷಿಸಿ. ಮೆಚ್ಚಿ. ಆತನಿಗೆ ಬೇಕಾದ ಹಾಗೆ ಸನ್ಮಾನಮಾಡಿ, ಆತನನ್ನು ತನ್ನ ಆಸ್ಥಾನಕವಿಯಾಗಿಟ್ಟುಕೊಂಡನು.

## ಬಾಣನ ಕವಿತಾಮಾರ್ಗ

ಸಂಸ್ಕೃತ ಸಾಹಿತ್ಯಕ್ಷೇತ್ರದ ಪದ್ಯಕಾವ್ಯಲೇಖಕರಲ್ಲಿ ಕಾಳಿದಾಸನಿಗೆ ದೊರೆತಿರುವ ಸ್ಥಾನವು ಗದ್ಯಕಾವ್ಯಲೇಖಕರಲ್ಲಿ ಬಾಣನಿಗೆ ದೊರೆತಿದೆ. ಬಾಣ ಕವಿಯ ಪ್ರತಿಭೆ ಅದ್ಭುತವಾದದ್ದು. ಆತನಿಗಿದ್ದ ಲೋಕಾನುಭವವು ಅಸಾಮಾನ್ಯವಾದದ್ದು. ಪದವಿನ್ಯಾಸಚತುರತೆಯಲ್ಲಂತೂ ಆತನಿಗೆ ಸಮಾನನಾದ ಕವಿ "ನ ಭೂತೋ ನ ಭವಿಷ್ಯತಿ". ಮಾನವ ಹೃದ

ಯದ ಬಹು ಸೂಕ್ಷ್ಮವಾದ ಭಾವಗಳನ್ನೂ ಪ್ರಕೃತಿಯ ವಿಧವಿಧವಾದ ಸೌಂದರ್ಯವನ್ನೂ ವರ್ಣಿಸುವುದರಲ್ಲಿ ಆತನು ಯಾರಿಗೂ ಕಡಮೆಯಲ್ಲ. ಆತನು ಉದ್ರೇಕಿಸಲಾರದ ಮಾನವ ಹೃದಯದ ಭಾವವಿಲ್ಲ; ಆತನು ಚಿತ್ರಿಸಲಾಗದ ಪ್ರಕೃತಿಯ ಭಾಗವಿಲ್ಲ. “ಬಾಣೋಚ್ಛಿಷ್ಟಂ ಜಗತ್ ಸರ್ವಂ” ಎಂಬ ಹೇಳಿಕೆಯು ಸ್ತುತಿಪಾಠಕನ ಅತ್ಯುಕ್ತಿಯಲ್ಲ; ವಿಮರ್ಶಕನ ವಿಚಾರಪೂರ್ವಕವಾದ ಅಭಿಪ್ರಾಯ.

ಬಾಣಭಟ್ಟನಲ್ಲಿ ಒಂದಕ್ಕೊಂದು ಹೊಂದದ ಎರಡು ಗುಣಗಳು ಮಿಳಿತವಾಗಿರುವುವು. ಒಂದು ಕಡೆ ಆತನು ಪ್ರತಿಭಾಸಂಪನ್ನನಾದ, ರಸಋಷಿಯಾದ ಕವಿ. ಮತ್ತೊಂದುಕಡೆ ಬುದ್ಧಿಚಮತ್ಕಾರದಿಂದ, ಶಬ್ದಜಾಲದಿಂದ ಮುಗ್ಧನಾದ ಪಂಡಿತ. ರಸಿಕತೆಯೂ ಪಾಂಡಿತ್ಯಪ್ರಿಯತೆಯೂ ಇಷ್ಟು ಸಮಾನವಾಗಿ ಒಂದೆಡೆ ಸೇರಿರುವುದು ಮತ್ತಾವ ಕವಿಯಲ್ಲಿಯೂ ಕಂಡುಬರುವುದಿಲ್ಲ. ಬಾಣಕವಿ ಹುಟ್ಟುಕಥೆಗಾರನೆಂದು ಹಿಂದೆಯೇ ಹೇಳಿದೆ. ಆತನು ಕಥೆಯನ್ನು ಅಚ್ಚುಕಟ್ಟಾಗಿ, ಬಹು ಸ್ವಾರಸ್ಯವಾಗಿ, ಕೇಳುವವರು ಕಿವಿಯನ್ನು ತೆರೆದುಕೊಂಡು ಕೇಳುವಂತೆ ಹೇಳುತ್ತಾನೆ. ಕಥೆಯ ಮಧ್ಯೆ ವರ್ಣನೆ ಬಂದರೆ ಆ ವರ್ಣನೆಯಲ್ಲಿಯೇ ಮಗ್ನನಾಗಿ ಅದನ್ನು ಬೆಳೆಸುತ್ತಾ ಕಥೆಯನ್ನು ಮರೆಸಿಬಿಡುತ್ತಾನೆ. ವರ್ಣಿಸಬೇಕಾದುದನ್ನು ಪಾಠಕರ ಕಣ್ಣೆದುರಿಗೆ ಬಂದು ನಿಲ್ಲುವಂತೆ ಚಿತ್ರಿಸುವ ಸಾಮರ್ಥ್ಯವು ಕವಿಗೆ ಇದೆ; ಆದರೆ ವರ್ಣಿಸುತ್ತಾ ವರ್ಣಿಸುತ್ತಾ ಶಬ್ದಾರ್ಥಾಲಂಕಾರಗಳ, ಶ್ಲೇಷವಿರೋಧಾಭಾಸಗಳ ಮರುಭೂಮಿಯಲ್ಲಿ ನಡೆದು ಪಾಠಕರನ್ನೂ ಎಳೆದುಕೊಂಡು ಹೋಗುತ್ತಾನೆ. ಈ ವರ್ಣನೆಯಿಂದ ಪಾರಾಗಿ ಬರುವ ಹೊತ್ತಿಗೆ ಕಥಾಸೂತ್ರವು ಅನೇಕವೇಳೆ ಹರಿದು ಹೋಗಿರುತ್ತದೆ. ಕಥೆಯ ದೃಷ್ಟಿಯಿಂದ ಬಾಣಕವಿಯ ಕಾವ್ಯರಚನೆಯಲ್ಲಿ ಇದೊಂದು ದೋಷವಾಗುತ್ತದೆ. ಇನ್ನು ಭಾವರಸಗಳ ದೃಷ್ಟಿಯಿಂದಲೂ ಒಂದು ದೋಷವಿದೆ. ಕವಿಗೆ ಪಾಠಕರ ಹೃದಯದಲ್ಲಿ ಅಡಗಿರುವ ಭಾವತರಂಗಗಳನ್ನು ಎಬ್ಬಿಸಿ ರಸಪ್ರವಾಹವನ್ನು ಹರಿಸುವ ಶಕ್ತಿ ಇದೆ; ಈ ರಸಪ್ರವಾಹಕ್ಕೆ ಈತನ ಪಾಂಡಿತ್ಯ ಪ್ರಿಯತೆಯು, ಶಬ್ದಾರ್ಥಾಲಂಕಾರ ಪ್ರೌಢಿಮೆಯು, ಅನೇಕವೇಳೆ ಅಡ್ಡವಾಗಿ ಬರುತ್ತವೆ. ಹೀಗಾಗಿ ಕಾವ್ಯರಸಾಸ್ವಾದನಲೋಲುಪರಿಗೆ ಮೇಲಿಂದಮೇಲೆ ಬೇಸರ

ಷ್ಟಂಟಾಗುತ್ತವೆ. ಉತ್ತಮವಾದ ಕಾವ್ಯಕ್ಕೆ ರಸಭಾವಗಳೂ ಬೇಕು; ವರ್ಣನೆಯೂ ಬೇಕು; ಶಬ್ದಾರ್ಥಾಲಂಕಾರಗಳೂ ಬೇಕು. ಆದರೆ ಇವೆಲ್ಲವೂ ತಕ್ಕ ಪ್ರಮಾಣದಲ್ಲಿ ಹೊಂದಿಕೆಯಾಗಿ ಸೇರಿರಬೇಕು. ಬಾಣ ಕವಿಯ ಕಾವ್ಯದಲ್ಲಿ ಈ ಪ್ರಮಾಣವು ಮೇಲಿಂದಮೇಲೆ ಏರುಪೇರಾಗಿ ಕಾವ್ಯದ ಹದವು ಕೆಟ್ಟುಹೋಗಿರುವುದೆಂದು ಹೇಳಬಹುದು. ಬಾಣನ ಕಾವ್ಯದಲ್ಲಿ ಆತನ ಪಾಂಡಿತ್ಯ ಪ್ರಿಯತೆಯು ಉಂಟುಮಾಡಿರುವ ದೋಷ ವನ್ನು ಒಬ್ಬ ಪಾಶ್ಚಾತ್ಯ ವಿಮರ್ಶಕರು ಹೀಗೆ ವರ್ಣಿಸಿರುತ್ತಾರೆ.—

„Bana's prose is an Indian wood where progress is impossible through the undergrowth until the traveller cuts out a path for himself, and where even then he is confronted by malicious wild beasts in the shape of unknown words to terrify him."

ಈ ಅಭಿಪ್ರಾಯವನ್ನು ಎಲ್ಲ ಪಾಶ್ಚಾತ್ಯವಿಮರ್ಶಕರೂ ಒಟ್ಟಿನಲ್ಲಿ ಒಪ್ಪಿ ಕೊಂಡಿರುತ್ತಾರೆ. ಈ ಕಷ್ಟವನ್ನು ಪಾಶ್ಚಾತ್ಯರು ಅನುಭವಿಸುವಷ್ಟು ಭಾರತೀಯರು ಅನುಭವಿಸದಿರಬಹುದು; ಆದರೂ ಈ ಅಭಿಪ್ರಾಯದಲ್ಲಿ ಸತ್ಯಾಂಶವಿದೆ ಎಂದು ಒಪ್ಪಿಕೊಳ್ಳಬೇಕು. ಆದರೆ ಈ ನ್ಯೂನತೆಯ ತಪ್ಪನ್ನೆಲ್ಲ ಬಾಣಕವಿಯ ತಲೆಗೇ ಕಟ್ಟುವುದು ಅನ್ಯಾಯ; ಏಕೆಂದರೆ, ಆ ಕಾಲದ ಸಾಹಿತ್ಯಾಭಿರುಚಿಯೇ ಹಾಗಿತ್ತು. ಆ ಕಾಲದ ಕವಿಗಳೆಲ್ಲರ ಲ್ಲಿಯೂ ಈ ನ್ಯೂನತೆ ಸ್ವಲ್ಪ ಹೆಚ್ಚುಕಡಮೆ ಕಂಡುಬರುತ್ತದೆ.

## ಕಾದಂಬರೀ ಕಥೆಯ ಸ್ವರೂಪ

ಕಾದಂಬರಿಯ ಕಥೆ ಬಾಣಕವಿಯ ಸ್ವಂತ ಸೃಷ್ಟಿಯಲ್ಲ. ಅದರ ಮೂಲವು ಗುಣಾಢ್ಯನ ಬೃಹತ್ಕಥೆಯಲ್ಲಿರುವುದೆಂದು ತಿಳಿದುಬರುತ್ತದೆ. ಭಾರತ ರಾಮಾಯಣಗಳಂತೆ ಬೃಹತ್ಕಥೆಯೂ ಸಂಸ್ಕೃತ ಕವಿಗಳಿಗೆ ಕಾವ್ಯ ವಸ್ತುವಿನ ಒಂದು ದೊಡ್ಡ ಭಂಡಾರವಾಗಿತ್ತು. ಭಾರತ ರಾಮಾಯಣ ಗಳು ಸಂಸ್ಕೃತದಲ್ಲಿವೆ; ಬೃಹತ್ಕಥೆ ಪೈಶಾಚೀ ಭಾಷೆಯಲ್ಲಿತ್ತು. ಈಗ ಆ ಗ್ರಂಥವು ಅನುಪಲಬ್ಧವಾಗಿದೆ. ಆದರೆ ಅದನ್ನು ಸಂಗ್ರಹಿಸಿ ಕೆಲವರು ಸಂಸ್ಕೃತದಲ್ಲಿ ಬರೆದಿರುತ್ತಾರೆ. ಇಂಥ ಗ್ರಂಥಗಳಲ್ಲಿ ಕಥಾ ಸರಿತ್ಸಾಗರವೂ ಒಂದು. ಆದರಿಂದ ಬೃಹತ್ಕಥೆಯಲ್ಲಿ ಸ್ವಲ್ಪ ಹೆಚ್ಚು ಕಡಮೆ ಕಥೆ ಹೇಗಿದ್ದಿತೆಂಬುದನ್ನು ಊಹಿಸಬಹುದು. ಕಥಾಸರಿತ್ಸಾಗರದ

ಮಕರಂದಿಕೋಪಾಖ್ಯಾನದಲ್ಲಿ (ಲಂಬಕ ೧೦—ತರಂಗ ೩) ಕಾದಂಬರೀ ಕಥೆಯ ಮೂಲ ರೇಖೆಗಳಿವೆ. ಬಾಣಕವಿ ಅದಕ್ಕೆ ಬಣ್ಣಕಟ್ಟಿ ಒಂದು ಮನೋಹರವಾದ ವರ್ಣಚಿತ್ರವನ್ನು ರಚಿಸಿ ಅದರಲ್ಲಿ ಜೀವಕಳೆಯನ್ನು ತುಂಬಿದ್ದಾನೆ.

ಕಾದಂಬರಿ ಒಂದು ಕಥಾಕಾವ್ಯ. ಅದರ ಕಥಾಸೂತ್ರವು ಸರಳವಾಗಿಲ್ಲ ; ಅದರಲ್ಲಿ ಕೆಲವು ತೊಡಕುಗಳಿವೆ. ಕಥೆಯನ್ನು ಸುಲಭವಾಗಿ ಗ್ರಹಿಸಬೇಕಾದರೆ ಈ ತೊಡಕುಗಳೇನೆಂಬುದನ್ನು ತಿಳಿದಿರುವುದು ಒಳ್ಳೆಯದು. (೧) ಈ ಕಾವ್ಯದಲ್ಲಿ ಚಂದ್ರಾಪೀಡ ಕಾದಂಬರಿಯರ ಪ್ರಣಯದ ಕಥೆ ವರ್ಣಿತವಾಗಿದೆ. ಅದರ ಜತೆಗೆ ಇನ್ನೊಂದು ಪ್ರಣಯದ ಕಥೆಯೂ ಸೇರಿದೆ ; ಅದು ಪುಂಡರೀಕ ಮಹಾಶ್ವೇತೆಯರ ಪ್ರಣಯದ ಕಥೆ. ಈ ಎರಡು ಕಥೆಗಳೂ ಹಾಸುಹೊಕ್ಕುಗಳಂತೆ ಒಂದರೊಡನೆ ಒಂದು ಬೆರೆದು ಹೋಗಿವೆ. (೨) ಕಥಾನಾಯಿಕೆಯರಾದ ಕಾದಂಬರೀ ಮಹಾಶ್ವೇತೆಯರು ದೇವವರ್ಗಕ್ಕೆ ಸೇರಿದವರು- ಕಾದಂಬರಿ ಗಂಧರ್ವ ಕನ್ಯೆ, ಮಹಾಶ್ವೇತೆ ಅಪ್ಸರೆ. ಇವರು ವರಿಸಿದ ಪತಿಗಳು, ಚಂದ್ರಾಪೀಡ ಪುಂಡರೀಕರು, ದೇವಾಂಶ ಸಂಭೂತರಾದರೂ ಮಾನವ ವರ್ಗಕ್ಕೆ ಸೇರಿದವರು. ಇವರಿಬ್ಬರೂ ಶಾಪಗ್ರಸ್ತರಾಗಿ ಜನ್ಮಾಂತರಗಳನ್ನು ಪಡೆಯುತ್ತಾರೆ. ಪುಂಡರೀಕನಿಂದ ಶಾಪ ಹೊಂದಿದ ಚಂದ್ರನು ಚಂದ್ರಾಪೀಡನಾಗಿ ಅವತರಿಸಿ ಕಾದಂಬರಿಯ ಪ್ರಣಯಕ್ಕೆ ಪಾತ್ರನಾಗಿ ಆಕೆಯನ್ನು ವಿವಾಹವಾಗುವುದಕ್ಕೆ ಮುಂಚೆಯೇ ದೇಹತ್ಯಾಗ ಮಾಡುವನು. ಬಳಿಕ ಶೂದ್ರಕರಾಜನಾಗಿ ಹುಟ್ಟಿ ಶಾಪವಿಮೋಚನಾನಂತರದಲ್ಲಿ ಚಂದ್ರಾಪೀಡದೇಹವನ್ನು ಹೊಂದಿ ಕಾದಂಬರಿಯನ್ನು ವಿವಾಹವಾಗುವನು. ಪುಂಡರೀಕನು ಚಂದ್ರನ ಅಗ್ರಹಕ್ಕೆ ಈಡಾಗಿ ದೇಹತ್ಯಾಗಮಾಡಿ ಚಂದ್ರನು ಚಂದ್ರಾಪೀಡನಾಗಿ ಅವತರಿಸಿದಾಗ ಅವನ ಪ್ರಿಯಮಿತ್ರನಾದ ವೈಶಂಪಾಯನನಾಗಿ ಜನಿಸುವನು. ಆಗ ದುರ್ನಿಗ್ರಹವಾದ ಪೂರ್ವಜನ್ಮವಾಸನೆಯಿಂದ ಪ್ರೇರಿತನಾಗಿ ಮಹಾಶ್ವೇತೆಯಲ್ಲಿ ಮೋಹಗೊಂಡು ಇವನು ಪರಪುರುಷನೆಂದು ಭಾವಿಸಿದ ಆಕೆಯಿಂದ ಶಾಪಹೊಂದಿ ಗಿಳಿಯ ಜನ್ಮವನ್ನು ಪಡೆದು ಶಾಪವಿಮೋಚನೆಯಾದಮೇಲೆ ಪುಂಡರೀಕನ ಶರೀರವನ್ನು ಮರಳಿ ಹೊಂದಿ ಮಹಾಶ್ವೇತೆಯನ್ನು ಮದುವೆಯಾಗುವನು. ಕಾದಂಬರಿಯ ಕಥೆ ಆರಂಭವಾಗುವುದು

ಚಂದ್ರಾಪೀಡನು ಶೂದ್ರಕನಾಗಿಯೂ ಪುಂಡರೀಕನು ಗಿಳಿಯಾಗಿಯೂ ಜನ್ಮಗ್ರಹಣಮಾಡಿದ ಕಾಲದಲ್ಲಿ. (೩) ಈ ಕಥೆಯನ್ನೆಲ್ಲಾ ಕವಿ ತಾನೇ ಹೇಳುವುದಿಲ್ಲ ; ಅದರ ಬಹುಭಾಗವನ್ನು ಬೇರೆಬೇರೆ ಪಾತ್ರಗಳ ಬಾಯಿಂದ ಹೇಳಿಸುತ್ತಾನೆ. ಕಥೆಯ ಆರಂಭ ಭಾಗವನ್ನು ಎಂದರೆ ಶೂದ್ರಕರಾಜನ ಬಳಿಗೆ ಚಂಡಾಲಕನ್ಯೆ ಗಿಳಿಯನ್ನು ತರುವವರೆಗಿನ ಕಥೆಯನ್ನು ಕವಿ ತಾನೇ ಹೇಳುತ್ತಾನೆ. ಆ ಮೇಲೆ ಗಿಳಿಯು ತಾನು ಹುಟ್ಟಿ ಬೆಳೆದು ಜಾಬಾಲಿ ಮುನಿಗಳ ಆಶ್ರಮಕ್ಕೆ ಹೋಗುವವರೆಗಿನ ತನ್ನ ಚರಿತ್ರೆಯನ್ನು ಶೂದ್ರಕನಿಗೆ ಹೇಳುತ್ತದೆ. ಅಲ್ಲಿಂದ ಮುಂದೆ ಗಿಳಿಗೆ ಆ ಜನ್ಮ ಬರುವುದಕ್ಕೆ ಕಾರಣವಾದ ಅದರ ಪೂರ್ವಜನ್ಮದ ಕಥೆಯನ್ನು ಜಾಬಾಲಿ ಮುನಿಗಳು ತಮ್ಮ ಆಶ್ರಮದ ಋಷಿಗಳಿಗೆ ಹೇಳುತ್ತಾರೆ. (ಈ ಕಥೆಯೆಲ್ಲವೂ ಜಾಬಾಲಿಗಳ ಮಾತಿನಲ್ಲಿಯೇ ಇಲ್ಲ. ಇದರಲ್ಲಿ ಕೆಲವು ಭಾಗವು ಮಹಾಶ್ವೇತೆಯ ಮಾತಿನಲ್ಲಿಯೂ ಕೆಲವು ಭಾಗವು ಕಪಿಂಜಲನ ಮಾತಿನಲ್ಲಿಯೂ ಇದೆ.) ಅದನ್ನು ಗಿಳಿ ಶೂದ್ರಕನಿಗೆ ಹೇಳುತ್ತದೆ. ಅಲ್ಲಿಂದ ಮುಂದೆ ಗಿಳಿ ತಾನು ಶೂದ್ರಕನ ಬಳಿಗೆ ಬರುವವರೆಗಿನ ಸ್ವಚರಿತ್ರೆಯನ್ನು ತಾನೇ ಹೇಳುತ್ತದೆ. ಇದಾದಮೇಲೆ ಚಂಡಾಲಕನ್ಯೆ ತಾನಾರೆಂಬುದನ್ನೂ ಶೂದ್ರಕನೂ ಗಿಳಿಯೂ ಯಾರೆಂಬುದನ್ನೂ ತಿಳಿಸುತ್ತಾಳೆ. ಕಥೆಯ ಆರಂಭ ಭಾಗದಂತೆಯೇ ಕಥೆಯ ಅಂತ್ಯಭಾಗವನ್ನೂ ಕವಿ ತಾನೇ ಹೇಳಿ ಮುಗಿಸುತ್ತಾನೆ.

## ಕಾದಂಬರಿಯ ಕಥಾಸಾರಾಂಶ

ಮಾಳವದ ರಾಜಧಾನಿಯಾದ ವಿದಿಶೆಯೆಂಬ ಪಟ್ಟಣದಲ್ಲಿ ಶೂದ್ರಕನೆಂಬ ರಾಜನು "ಚತುರಬ್ಧಿ ಮೇಖಲಾವಲಯಿತ ಭೂಮಿಗೆ" ಒಡೆಯನಾಗಿ ರಾಜ್ಯಭಾರಮಾಡುತ್ತಿದ್ದನು. ಆತನು ಒಂದು ದಿವಸ ಪ್ರಭಾತ ಸಮಯದಲ್ಲಿ ಒಡ್ಡೋಲಗದಲ್ಲಿರುವಾಗ, ಮೋಹಿನಿಯಂತೆ ಮನೋಹರಾಕಾರೆಯಾದ ಒಬ್ಬ ಚಂಡಾಲಕನ್ಯೆ ನೀಲಮಣಿಪುತ್ರಿಕೆಯಂತೆ ಒಡ್ಡೋಲಗವನ್ನು ಪ್ರವೇಶಿಸಿದಳು. ಆಕೆಯ ರೂಪರೇಖಾವಿಲಾಸವನ್ನು ನೋಡಿ ರಾಜನು ಮುಗ್ಧನಾದನು. ರಾಜನಿಗೆ ಕಾಣಿಕೆಯಾಗಿ ಅರ್ಪಿಸುವುದಕ್ಕಾಗಿ ಆಕೆ ಒಂದು ಅರಗಿಳಿಯನ್ನು ತಂದಿದ್ದಳು. ಆ ಅರಗಿಳಿಯಿದ್ದ ಪಂಜರವನ್ನು ರಾಜನ ಮುಂದಿಟ್ಟು ಆ ಗಿಳಿ ವೇದಶಾಸ್ತ್ರ ಪುರಾಣಗಳನ್ನು

ಸಂಗೀತಸಾಹಿತ್ಯಾದಿ ಕಲೆಗಳನ್ನೂ ಬಲ್ಲುದೆಂದು ತಿಳಿಸಿ ಪಂಜರದ ಬಾಗಿಲನ್ನು ತೆರೆಯಲು, ಅದು "ರಾಜಾಭಿಮುಖನುಂ ಉನ್ನಮಿತ ದಕ್ಷಿಣ ಚರಣನುಂ ಅತಿಸ್ಪಷ್ಟ ವರ್ಣಸಂಸ್ಕಾರಮಪ್ಪ ವಾಣಿಯಿಂ ಕೃತಜಯ ಶಬ್ದನುಮಾಗಿ,

ಸ್ತನಯುಗಮಶ್ರುಸ್ನಾತಂ ಸಮೀಪತರವರ್ತಿ ಹೃದಯಶೋಕಾಗ್ನೇಃ ।
ಚರತಿ ವಿಮುಕ್ತಾಹಾರಂ ವ್ರತಮಿವ ಭವತೋ ರಿಪುಸ್ತ್ರೀಣಾಂ ॥

ಎಂದು ಒಂದು ಆರ್ಯೆಯನ್ನು ಹೇಳಿತು. ಅದನ್ನು ಕೇಳಿ ವಿಸ್ಮಿತನಾದ ರಾಜನು ಅದರ ವೃತ್ತಾಂತವನ್ನು ತಿಳಿಯಲಪೇಕ್ಷಿಸಿ ಭೋಜನಾನಂತರದಲ್ಲಿ ಆ ಗಿಳಿಯನ್ನು ಕುರಿತು ನೀನು ಯಾರು, ಎಲ್ಲಿಯವನು, ನಿನಗೆ ಈ ಶಾಸ್ತ್ರ ಪರಿಚಯವು ಹೇಗಾಯಿತು, ನೀನು ನಿಜವಾಗಿ ಗಿಳಿಯೋ ಅಥವಾ ವಿಹಂಗಮ ದೇಹಿಯೋ ಎಂದು ಕೇಳಿದನು. ಆಗ ಗಿಳಿ ತನ್ನ ಕಥೆಯನ್ನು ಹೀಗೆ ಹೇಳಿತು.

ಗಿಳಿಯು ಹೇಳಿಕೆ.—ವಿಂಧ್ಯಾಚಲದ ಅಡವಿಯಲ್ಲಿರುವ ಪಂಪಾ ಸರೋವರದ ತಡಿಯಲ್ಲಿ ಒಂದು ದೊಡ್ಡ ಬೂರುಗದ ಮರವಿದೆ. ಆ ಮರದಲ್ಲಿ ಗಿಳಿಯ ಹಿಂಡುಗಳು ಗೂಡುಗಳನ್ನು ಮಾಡಿಕೊಂಡಿದ್ದುವು; ಅದರ ಒಂದು ಹಳೆಯ ಪೊಟ್ಟರೆಯಲ್ಲಿ ಒಂದು ಮುದಿಗಿಳಿ ತನ್ನ ಹೆಂಡತಿ ಯೊಡನೆ ವಾಸಿಸುತ್ತಿತ್ತು. ಆ ಮುದಿಗಿಳಿಗೆ ಪಾಪಿಯಾದ ನಾನು ಮಗ ನಾಗಿ ಹುಟ್ಟಿದೆನು. ಹುಟ್ಟಿದ ಕೂಡಲೆ ನನ್ನ ತಾಯಿ ಪ್ರಸವವೇದನೆ ಯನ್ನು ತಾಳಲಾರದೆ ತೀರಿಕೊಂಡಳು. ಹೀಗೆ ಜಾಯಾ ವಿಯೋಗ ದುಃಖವು ಪ್ರಾಪ್ತವಾದರೂ ನನ್ನ ತಂದೆ ನನ್ನಮೇಲಿನ ಮಮತೆಯಿಂದ ಆ ದುಃಖವನ್ನು ಅಡಗಿಸಿಕೊಂಡು, ಮುಪ್ಪಿನಿಂದ ಹಾರಲಾರದೆ ಇದ್ದರೂ ಅಕ್ಕಪಕ್ಕದ ಗೂಡುಗಳಿಂದ ಹಕ್ಕಿಗಳು ತಿಂದುಳಿದ ಕಾಳನ್ನೂ ಹಣ್ಣುಹಂಪ ಲನ್ನೂ ತಂದು ನನಗೆ ತಿನ್ನಿಸಿ ಮಿಕ್ಕದ್ದನ್ನು ತಾನು ತಿಂದು ನನ್ನನ್ನು ಸಾಕುತ್ತಿದ್ದನು. ಹೀಗಿರಲು ಒಂದು ದಿನ ಬೇಡರ ಪಡೆಯೊಂದು ಆ ಕಾಡನ್ನು ಮುತ್ತಿತು. ಅವರಲ್ಲಿ ಒಬ್ಬ ಮುದಿಬೇಡನು ಆ ಬೂರುಗದ ಮರವನ್ನು ಹತ್ತಿ ಮರಿಗಳೆನ್ನದೆ ಮುದಿಗಿಳಿಗಳೆನ್ನದೆ ಗಿಳಿಗಳ ಗಂಟಲನ್ನು ಮುರಿದು ನೆಲಕ್ಕೀಡಾಡುತ್ತಿದ್ದನು. ಆಗ ನನ್ನ ಮುದಿತಂದೆ ನನ್ನನ್ನು ನೋಡಿ ಕಣ್ಣೀರನ್ನು ಸುರಿಸುತ್ತಾ "ಮಗು, ನಿನ್ನನ್ನು ಯಾರು ಕಾಯ ಬಲ್ಲರು?

"ನಿನ್ನಯ ತಾಯನುಯ್ವ ಪದದೊಳ್ ಜವನಕ್ಕಟ ನೋಡು ಕಂದ ಬಂ
ದೆನ್ನುಮನಂತೆ ಕೂಡಿದೊಡನೊಕ್ಕಲುಪ್ಪೋಗಿಸನೇಕೆ ಬಿಟ್ಟನಾಂ
ನಿನ್ನನೆ ನೋಡಿ ಶೋಕಮನಡಂಗಿಸಿ ವಾರ್ಧಕೆಯ ಲೇಸೆನುತ್ತುಮಿ
ರ್ಪನ್ನೆಗಮುಮ್ಮ ನಿನ್ನನೊಡಗೊಂಡು ಮುಟುಂಗುವ ಕಾಲಮಾದುದೋ"

ಎಂದು ನನ್ನನ್ನು ತೊಡೆಯೆಡೆಯಲ್ಲಿಟ್ಟುಕೊಂಡು ತನ್ನ ಹರಿದ ರೆಕ್ಕೆಗಳಿಂದ ಮುಚ್ಚಿ ಮರುಗುತ್ತಿರಲು ಆ ಬೇಡನು ನಾವಿದ್ದ ಗೂಡಿಗೆ ಕೈಹಾಕಿ ನನ್ನ ತಂದೆಯ ಗಂಟಲನ್ನು ಮುರಿದು ನೆಲಕ್ಕೀಡಾಡಿದನು. ನನ್ನ ತಂದೆ ನೆಲಕ್ಕೆ ಬೀಳುವಾಗ ಆತನ ರೆಕ್ಕೆಯಿಂದ ಸಿಡಿದು ತರಗೆಲೆಯ ರಾಶಿಯಲ್ಲಿ ಬಿದ್ದು ನಾನು ಜೀವವನ್ನು ಉಳಿಸಿಕೊಂಡೆನು. ಬಳಿಕ ನನಗೆ ನೀರಡಿಕೆಯಾಯಿತು. ಹಾರುವುದಕ್ಕೆ ಗರಿ ಹುಟ್ಟಿರಲಿಲ್ಲ; ಕಾಲೂ ಬಲಿತಿರಲಿಲ್ಲ. ಮೂಗು ಮುರಿಯುವಂತೆ ಮುಗ್ಗರಿಸುತ್ತಾ ಎಡಬಲಕ್ಕೆ ಬೀಳುತ್ತಾ ಸಾಗುತ್ತಿರಲು ಮಧ್ಯಾಹ್ನವಾಯಿತು; ಬಿಸಿಲ ಬೇಗೆ ಹೆಚ್ಚಿತು; ನೀರಡಿಕೆ ಘನವಾಯಿತು. ಇನ್ನುಳಿಯುವ ಆಸೆಯಿಲ್ಲವೆಂದುಕೊಂಡೆನು. ಅದೃಷ್ಟವಶಾತ್ ಆಗ ಅದೇ ದಾರಿಯಲ್ಲಿ ಸ್ನಾನಕ್ಕಾಗಿ ಹೋಗುತ್ತಿದ್ದ ಜಾಬಾಲಿ ಮುನಿಕುಮಾರನಾದ ಹಾರೀತನು ನನ್ನನ್ನು ಕಂಡು ಮನಕರಗಿ ಕೊಳದ ಬಳಿಗೆ ತೆಗೆದುಕೊಂಡುಹೋಗಿ ಶೈತ್ಯೋಪಚಾರಮಾಡಿ ಸ್ನಾನಾನಂತರ ತನ್ನ ತಂದೆಯ ಆಶ್ರಮಕ್ಕೆ ತೆಗೆದುಕೊಂಡು ಹೋದನು. ಜಾಬಾಲಿ ಮುನಿ ನನ್ನನ್ನು ನೋಡಿ ಸ್ವಲ್ಪಕಾಲ ಧ್ಯಾನಿಸಿ, ಈತನು ಹಿಂದಿನ ಜನ್ಮದಲ್ಲಿ ನೀತಿಯನ್ನು ಬಿಟ್ಟು ನಡೆದು ಮೋಹದಿಂದ ತಿರ್ಯಗ್ಜಾತಿಯಲ್ಲಿ ಹುಟ್ಟಿದನು ಎಂದು ಹೇಳಿದನು. ಅಲ್ಲಿದ್ದ ಋಷಿಗಳು ಈತನ ಹಿಂದಿನ ಕಥೆಯೇನೆಂದು ಕೇಳಲು ಈ ರೀತಿಯಾಗಿ ಹೇಳಿದನು.

ಜಾಬಾಲಿಯ ಹೇಳಿಕೆ.—ಅವಂತೀ ದೇಶದ ಉಜ್ಜಯಿನಿಯೆಂಬ ಪಟ್ಟಣದಲ್ಲಿ ತಾರಾಪೀಡನೆಂಬ ರಾಜನಿದ್ದನು; ಆತನಿಗೆ ಸಕಲಶಾಸ್ತ್ರವಿದನಾದ ಶುಕನಾಸನೆಂಬ ಬ್ರಾಹ್ಮಣನು ಮಂತ್ರಿಯಾಗಿದ್ದನು. ಆತನ ರಾಣಿಯ ಹೆಸರು ವಿಲಾಸವತೀ ಮಹಾದೇವಿ. ಬಹುಕಾಲ ಮಕ್ಕಳಾಗದ್ದರಿಂದ ಆ ರಾಜನೂ ರಾಣಿಯೂ ರಾಜ್ಯವಿಭವವು ವಿಫಲವಾದಂತೆ ಮರುಗುತ್ತಿದ್ದರು. ಪುತ್ರಾಪೇಕ್ಷಿಗಳಾದ ಅವರು ಅನೇಕ ವ್ರತನೇಮಾದಿಗಳನ್ನು ಆಚರಿಸುತ್ತಿರಲು ಅವರಿಗೆ ಒಬ್ಬ ಮಗನಾದನು. ಆ ದಿವಸವೇ ಮಂತ್ರಿಗೂ

ಒಬ್ಬ ಮಗನಾದನು. ರಾಜನ ಮಗನಿಗೆ ಚಂದ್ರಾಪೀಡನೆಂದೂ ಮಂತ್ರಿಯ ಮಗನಿಗೆ ವೈಶಂಪಾಯನನೆಂದೂ ನಾಮಕರಣ ಮಾಡಿದರು. ಶೈಶವವು ಕಳೆದ ಮೇಲೆ ಅವರಿಗೆ ತಕ್ಕ ವಿದ್ಯಾಬುದ್ಧಿಗಳನ್ನು ಕಲಿಸಿದರು. ಅವರಿಬ್ಬರೂ ಪ್ರಾಣಪ್ರಿಯರಾದರು.

ದಿನಪತಿಯುಂ ದಿನಮುಂ ಬಿಡ
ದನುಬಂಧದಿನಗಲದಂತೆವೋಲ್ ಚಂದ್ರಾಪೀ
ಡನುಮಂತಾ ವೈಶಂಪಾ
ಯನನುಂ ಪದಪಿಂದಮೊರ್ವರೊರ್ವರನಗಲರ್

ಚಂದ್ರಾಪೀಡನಿಗೆ ಹದಿನಾರು ವರುಷ ವಯಸ್ಸಾಗುವ ಹೊತ್ತಿಗೆ ಆತನು "ಪರಿಸಮಾಪ್ತ ಸಕಲ ಕಲಾ ವಿಜ್ಞಾನ"ನಾದನು. ಆಗ ತಾರಾಪೀಡನು ಮಗನಿಗೆ ಪರಮೋತ್ಸಾಹದಿಂದ ಯೌವರಾಜ್ಯಾಭಿಷೇಕವನ್ನು ಮಾಡಿದನು. ಈ ಸಮಯದಲ್ಲಿ, ಚಂದ್ರಾಪೀಡನಿಗೆ ಪರಮಪ್ರಿಯವಾದ ಇಂದ್ರಾಯುಧ ವೆಂಬ ಕುದುರೆಯು ತಂದೆಯಿಂದಲೂ ಆತನನ್ನು ನೆರಳಿನಂತೆ ಅನುಸರಿಸ ತಕ್ಕ ಪತ್ರಲೇಖೆಯೆಂಬ ಪರಿಚಾರಿಕೆ ತಾಯಿಯಿಂದಲೂ ದೊರೆತರು. ಪತ್ರಲೇಖೆಯ ಶೀಲಾಚಾರವಿನಯಾದಿಗಳನ್ನು ನೋಡಿ ಚಂದ್ರಾಪೀಡನು ಆಕೆಯನ್ನು ತನ್ನ ತಾಂಬೂಲ ಕರಂಕವಾಹಿನಿಯನ್ನಾಗಿ ಮಾಡಿಕೊಂಡನು. ಯೌವರಾಜ್ಯಾಭಿಷೇಕವಾದೊಡನೆಯೇ ದಿಗ್ವಿಜಯಕ್ಕಾಗಿ ಹೊರಟನು.

ದಿಗ್ವಿಜಯಮಾಡಿಕೊಂಡು ಬರುತ್ತಾ ಒಂದು ದಿನ ಚಂದ್ರಾಪೀಡನು ಬೇಟೆಗೆ ಹೋಗಿದ್ದನು. ಆಗ ಕುದುರೆಯ ಮುಖವನ್ನುಳ್ಳ ವಿಲಕ್ಷಣವಾದ ಕಿನ್ನರ ಮಿಥುನವು ಬೆಟ್ಟದ ತುದಿಯಿಂದ ಇಳಿದು ಬಂದು ಅದುತ್ತಿದ್ದುದನ್ನು ಕಂಡು ಹಿಡಿಯಬೇಕೆಂಬ ತವಕದಿಂದ ಬೆನ್ನಟ್ಟಿ ಹೋದನು. ಆದರೆ ಅವು ಸಿಕ್ಕದೆ ಕೈಲಾಸ ಶಿಖರವನ್ನೇರಿ ಕಣ್ಮರೆಯಾದುವು. ರಾಜಕುಮಾರನು ಆಗಲೇ ತನ್ನ ಪಾಳಯವನ್ನು ಬಿಟ್ಟು ಬಹುದೂರ ಬಂದುಬಿಟ್ಟಿದ್ದನು. ಅಷ್ಟು ಹೊತ್ತಿಗೆ ಮಧ್ಯಾಹ್ನವಾಗಿತ್ತು. ಕುದುರೆಯೂ ದಣಿದಿತ್ತು, ತಾನೂ ದಣಿದಿದ್ದನು. ಆದಕಾರಣ ಮೊದಲು ಒಂದು ಜಲಾಶಯವನ್ನು ಕಂಡುಹಿಡಿದು ಅಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು ಅನಂತರ ತನ್ನ ಪಾಳಯಕ್ಕೆ ಹಿಂದಿರುಗಬೇಕೆಂದು ನಿಶ್ಚಯಿಸಿ ಬರುತ್ತಿರುವಲ್ಲಿ ಅಚ್ಛೋದ ಸರೋವರವು ಸಿಕ್ಕಿತು. ಅಲ್ಲಿ ಕುದುರೆಯಿಂದಿಳಿದು ಅದಕ್ಕೆ ನೀರು ಕುಡಿಸಿ ಹುಲ್ಲು

ಕೊಯ್ದು ಹಾಕಿ ತಾನೂ ವಿಶ್ರಮಿಸಿಕೊಳ್ಳುತ್ತಿರಲು ಇಂಪಾದ ಗಾನವು ಕೇಳಿ ಬಂತು. ಆ ಶಬ್ದವನ್ನನುಸರಿಸಿ ಹೋಗಲು ಒಂದು ಸಿದ್ಧಾಯತನವು ಕಣ್ಣಿಗೆ ಬಿತ್ತು. ಅಲ್ಲಿ ಅಪೂರ್ವ ಸುಂದರಿಯೂ ನವಯೌವನಶಾಲಿನಿಯೂ ತೇಜಸ್ವಿನಿಯೂ ಆದ ಒಬ್ಬ ತಾಪಸವೇಷಧಾರಿಣಿ ಶಿವನನ್ನು ಆರಾಧಿಸುತ್ತಿದ್ದಳು. ಸ್ವಲ್ಪ ಹೊತ್ತಾದ ಮೇಲೆ ಆಕೆ ಶಿವಲಿಂಗಕ್ಕೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅಲ್ಲಿ ನಿಂತಿದ್ದ ಚಂದ್ರಾಪೀಡನನ್ನು ನೋಡಿ ಸ್ವಾಗತವನ್ನು ಕೇಳಿ ತನ್ನ ಆತಿಥ್ಯವನ್ನು ಸ್ವೀಕರಿಸುವಂತೆ ಆತನನ್ನು ಪ್ರಾರ್ಥಿಸಿ ತಾನು ವಾಸಿಸುತ್ತಿದ್ದ ಗುಹೆಗೆ ಕರೆದುಕೊಂಡುಹೋದಳು. ಆಕೆಯ ಆತಿಥ್ಯವನ್ನು ಚಂದ್ರಾಪೀಡನು ಸ್ವೀಕರಿಸಿ, ಆಕೆ ಫಲಾಹಾರಮಾಡಿ ಬಂದ ಮೇಲೆ ತನ್ನ ವೃತ್ತಾಂತವನ್ನೆಲ್ಲ ಆಕೆಗೆ ವಿವರಿಸಿ ಆಕೆಯ ವೃತ್ತಾಂತವನ್ನು ಕೇಳಿದನು. ಮಹಾಶ್ವೇತೆಯ ಬಾಯಿಂದ ಮಾತು ಹೊರಡಲಿಲ್ಲ ; ಕಣ್ಣಿನಿಂದ ನೀರು ಧಾರಾಕಾರವಾಗಿ ಸುರಿಯಲು ಆರಂಭವಾಯಿತು. ಆಕೆ ಅಳವಿಲ್ಲದೆ ಅಳುತ್ತಿರಲು ಚಂದ್ರಾಪೀಡನು ಆಶ್ಚರ್ಯಚಕಿತನಾದನು. ದುಃಖದ ಆವೇಗವು ಸ್ವಲ್ಪ ಕಡಮೆಯಾದ ಮೇಲೆ ಆಕೆ ತನ್ನ ಕಥೆಯನ್ನು ಹೇಳಿದಳು.

ಮಹಾಶ್ವೇತೆಯ ಹೇಳಿಕೆ.—ನನ್ನ ತಂದೆ ಇಂದ್ರನ ಪ್ರಿಯಮಿತ್ರನಾದ ಹಂಸನೆಂಬ ಗಂಧರ್ವ ; ತಾಯಿ ಗೌರಿಯೆಂಬ ಅಪ್ಸರಸ್ತ್ರೀ. ಅವರು ಬಹು ಕಾಲ ಸಂತಾನಹೀನರಾಗಿದ್ದರು. ಆ ಮೇಲೆ ನಿರ್ಭಾಗ್ಯೆಯಾದ ನಾನು ಅವರ ಮಗಳಾಗಿ ಹುಟ್ಟಿದೆನು. ಅವರು ನನ್ನನ್ನು ಗಂಡು ಮಗನನ್ನು ಪ್ರೀತಿಸುವುದಕ್ಕಿಂತಲೂ ಹೆಚ್ಚು ಪ್ರೀತಿಯಿಂದ ಬೆಳೆಸುತ್ತಿದ್ದರು. ಕಾಲಕ್ರಮದಲ್ಲಿ ನನಗೆ ಯೌವನೋದಯವಾಯಿತು. ಆಗ ಒಮ್ಮೆ ವಸಂತ ಸಮಯದಲ್ಲಿ ನಾನು ತಾಯಿಯೊಡನೆ ಮಜ್ಜನಕ್ಕಾಗಿ ಅಚ್ಛೋದ ಸರಸ್ಸಿಗೆ ಬರುತ್ತಾ ದಾರಿಯಲ್ಲಿ ಒಬ್ಬ ಸುಂದರನಾದ ಮುನಿಕುಮಾರನನ್ನೂ ಅವನ ಗೆಳೆಯನನ್ನೂ ನೋಡಿದೆನು. ಆ ಮುನಿಕುಮಾರನನ್ನು ನೋಡಿದ ಕೂಡಲೆ ನಾನು ಮೋಹಪರವಶಳಾಗಿಬಿಟ್ಟೆನು. (ತಾಪಸರು ಕೋಪಿಗಳಲ್ಲವೆ ?) ಆದಕಾರಣ ಆ ಮುನಿ ನನ್ನ ಕಾಮುಕಾರವನ್ನು ನೋಡಿ ಎಲ್ಲಿ ಶಾಪಕೊಡುವನೋ ಎಂದು ಭಯವಾಯಿತು ; ಆದರೂ ಪೂಜಾರ್ಹರನ್ನು ಅವಜ್ಞೆಗೆಯ್ಯಲಾಗದೆಂದು ಆತನ ಮುಖವನ್ನೇ

ನೋಡುತ್ತಾ ಅವನಿಗೆ ನಮಸ್ಕಾರ ಮಾಡಿದೆನು. ಶಾಪಕೊಡುವುದು ಹಾಗಿರಲಿ, ಕಾಮವಿಕಾರಕ್ಕೊಳಗಾದ ನನ್ನನ್ನು ನೋಡಿ ಅತನೂ ಕಾಮವಿಕಾರಕ್ಕೊಳಗಾದನು. ಆಗ ನಾನು ಆತನ ಗೆಳೆಯನನ್ನು ಕುರಿತು "ಈತನಾರು, ಈತನ ಹೆಸರೇನು, ಈತನ ಕಿವಿಯಲ್ಲಿರುವ ಸುಂದರವಾದ ಕುಸುಮಮಂಜರಿ ಎಲ್ಲಿಯದು ?" ಎಂದು ಕೇಳಲು, ಆತನು ನನಗೆ ಎಲ್ಲ ಸಮಾಚಾರವನ್ನೂ ತಿಳಿಸಿದನು. "ನಿನಗೆ ಈ ಪುಷ್ಪಮಂಜರಿ ಬೇಕಾಗಿದೆ ಎಂದು ಕಾಣುತ್ತದೆ, ತೆಗೆದುಕೋ" ಎಂದು ಹೇಳಿದ ಆ ಮುನಿಕುಮಾರನು ಅದನ್ನು ನನ್ನ ಕಿವಿಗೆ ತೊಡಿಸಿದನು. ನನ್ನ ಕದಂಪಿನ ಸೋಂಕಿನ ಸುಖದಿಂದ ಆತನ ಕೈ ಕಂಪಿಸಲು ಆತನ ಕೈಯಲ್ಲಿದ್ದ ಅಕ್ಷಮಾಲೆ ಜಾರಿ ನೆಲಕ್ಕೆ ಬಿತ್ತು. ಅದನ್ನು ನಾನು ಕೊರಳಲ್ಲಿ ಹಾಕಿಕೊಂಡು ಸುಖಾನುಭವಮಾಡುತ್ತಿರಲು ನನ್ನ ಪರಿಚಾರಕಳು "ಮನೆಗೆ ಹೋಗಲು ತಾಯಿಯವರು ಕಾದಿರುವರು, ಬಾ" ಎಂದು ಕರೆದುಕೊಂಡು ಹೋದಳು. ಕೈಯಿಂದ ಅಕ್ಷಮಾಲಿಕೆ ಜಾರಿಬಿದ್ದದ್ದನ್ನೂ ನಾನು ಅದನ್ನು ತೆಗೆದುಕೊಂಡುಹೋದದ್ದನ್ನೂ ಅರಿಯದಷ್ಟು ಕಾಮಪರವಶನಾಗಿದ್ದ ಗೆಳೆಯನನ್ನು ನೋಡಿ ಕಪಿಂಜಲನು "ಇದೇನು ಪುಂಡರೀಕ, ಮೈಮೇಲೆ ಎಚ್ಚರ ತಪ್ಪಿತೆ ? ನಿನ್ನ ಕೈಯಿಂದ ಜಾರಿದ ಅಕ್ಷಮಾಲೆಯನ್ನು ಆಕೆ ತೆಗೆದುಕೊಂಡು ಹೋದದ್ದು ಕೂಡ ನಿನಗೆ ಗೊತ್ತಾಗಲಿಲ್ಲ. ಇಷ್ಟು ಎಚ್ಚರ ತಪ್ಪಿದವರು ಎಲ್ಲಾದರೂ ಉಂಟೆ ?" ಎಂದು ಗದರಿಸಿದನು. ಆಗ ಆ ಮುನಿಕುಮಾರನು ಕೋಪಗೊಂಡಂತೆ ನಟಿಸಿ, "ಎಲೆ ಚಪಲೆ, ನನ್ನ ಜಪಸರವನ್ನು ಕೊಡು, ಕೊಡದೆ ಮುಂದೆ ಹೆಜ್ಜೆಯಿಟ್ಟೀಯೆ" ಎನ್ನಲು ನಾನು ಗಾಬರಿಯಿಂದ ಜಪಸರಕ್ಕೆ ಬದಲಾಗಿ ಹಾರವನ್ನು ಕೊಟ್ಟೆನು. ನನ್ನ ಮುಖವನ್ನೇ ಆಸಕ್ತಿಯಿಂದ ನೋಡುತ್ತಿದ್ದ ಆತನು ಅದನ್ನು ಜಪಸರವೆಂದೇ ತೆಗೆದುಕೊಂಡನು. ಬಳಿಕ ನನ್ನನ್ನು ಮನೆಗೆ ಕರೆದೊಯ್ದರು. ನಾನು ಮೋಹಪರವಶಳಾಗಿ ಗವಾಕ್ಷಿಯ ಬಳಿಗೆ ಹೋಗಿ ಆತನು ಇದ್ದ ದೆಸೆಯನ್ನು ನೋಡುತ್ತ ಕುಳಿತೆನು. ಹೀಗೆ ಆತನಲ್ಲಿ ಮನಸ್ಸು ನಟ್ಟು ನಾನು ಕುಳಿತಿರಲು ಸ್ನಾನಕ್ಕಾಗಿ ಹಿಂದೆ ಉಳಿದಿದ್ದ ಮಕರಿಕೆಯೆಂಬ ಸೇವಕಳು ನನ್ನ ಬಳಿಗೆ ಬಂದು ಆ ಮುನಿಕುಮಾರನು ಕಳುಹಿದ ಪ್ರೇಮಪತ್ರವನ್ನು ನನಗೆ ಕೊಟ್ಟಳು. (ಮೊದಲೇ ಸೊಕ್ಕಿದವನಿಗೆ ಕಳ್ಳು ಕುಡಿಸಿದಂತಾಯಿತು.) ಹೇಗೋ

ದಿವಸವು ಕಳೆಯಿತು ; ಸಾಯಂಕಾಲವಾಯಿತು. ಆಗ ಆ ಮುನಿಕುಮಾರನ ಗೆಳೆಯ ಕಪಿಂಜಲನು ಬಂದು ಆತನ ಸಂತಾಪಾವಸ್ಥೆಯನ್ನು ತಿಳಿಸುತ್ತಿದ್ದನು. ಅಷ್ಟರಲ್ಲಿಯೇ ನನ್ನ ತಾಯಿ ನನ್ನನ್ನು ನೋಡಬೇಕೆಂದು ಬಂದದ್ದರಿಂದ ಕಪಿಂಜಲನು “ನನ್ನ ಪ್ರಾಣಮಿತ್ರನ ಜೀವವನ್ನು ಹೇಗಾದರೂ ಕಾಪಾಡು” ಎಂದು ಅಂಗಲಾಚಿಕೊಂಡು ಯಾರಿಗೂ ತಿಳಿಯದಂತೆ ತಪ್ಪಿಸಿಕೊಂಡು ಹೋದನು. ತಾಯಿ ಬಂದಳು, ಏನೋ ಹೇಳಿದಳು. ನನಗೆ ಒಂದೂ ತಿಳಿಯಲಿಲ್ಲ. ಆಕೆ ಹೊರಟು ಹೋದ ಮೇಲೆ ಯಾರಿಗೂ ತಿಳಿಯದಂತೆ ತರಳಿಕೆಯೊಡನೆ ಮುನಿಕುಮಾರನ ಬಳಿಗೆ ಹೋಗಲು ಹೊರಟೆನು. ಬಲಗಣ್ಣು ಹಾರಿತು ; ಈ ಅಪಶಕುನದಿಂದ ಹೃದಯವು ನಡುಗಿತು. ಗಾಬರಿಯಿಂದ ಹೇಗೋ ನಡೆದೆನು. ಪುರುಷಪ್ರಲಾಪವು ಕೇಳಬಂತು ; ಕಪಿಂಜಲನು ಅಳುತ್ತಿದ್ದನು. ಎದೆಗೆಟ್ಟು ಸತ್ತಂತಾಗಿ ಕಣ್ಣೀರಿನಿಂದ ದೆಸೆಗಾಣದೆ ಎಡವುತ್ತಾ ಮುಗ್ಗರಿಸುತ್ತಾ ಅಯ್ಯೋ ಎಂದು ಅಳುತ್ತಾ ಆತನಲ್ಲಿಗೆ ಹೋದೆನು. ಪ್ರಿಯವಿರಹ ದುಃಖವನ್ನು ಸೈರಿಸಲಾರದೆ ಸಹಗಮನಕ್ಕೆ ಸಿದ್ಧಳಾಗುತ್ತಿರಲು ಒಂದು ಆಶ್ಚರ್ಯದ ಸಂಗತಿ ನಡೆಯಿತು. ಚಂದ್ರಮಂಡಲದಿಂದ ಒಬ್ಬ ದಿವ್ಯಪುರುಷನು ಬಂದು ನನ್ನ ಮುಂದಿದ್ದ ಪುಂಡರೀಕನ ದೇಹವನ್ನು ತನ್ನ ಕೈಗಳಲ್ಲಿ ಎತ್ತಿಕೊಂಡು “ಮಗಳೆ ಮಹಾಶ್ವೇತೆ, ಸಾಯುವ ಆಲೋಚನೆ ಬೇಡ. ನೀನು ಮತ್ತೆ ಈತನನ್ನು ಕೂಡುವೆ” ಎಂದು ಹೇಳಿ ಆಕಾಶಕ್ಕೆ ನೆಗೆದನು. ಕಪಿಂಜಲನು “ಹೇಳದೆ ಕೇಳದೆ ನನ್ನ ಗೆಳೆಯನನ್ನು ಎತ್ತಿಕೊಂಡು ಹೋಗುತ್ತೀಯಾ” ಎನ್ನುತ್ತ ಆತನನ್ನು ಹಿಂಬಾಲಿಸಿ ಹೋದನು. ತರಳಿಕೆ ನನ್ನನ್ನು ಸಂತೈಸಿ, ಬೆಳಗಿನ ಜಾವವಾಗಲು ಈ ಕೊಳದ ಬಳಿಗೆ ಕರೆದುಕೊಂಡು ಬಂದು ಸ್ನಾನಮಾಡಿಸಿದಳು. ಅಂದಿನಿಂದಲೂ ಆತನ ಮೇಲಣ ಪ್ರೀತಿಯಿಂದ ಅತನ ವಲ್ಕಲ ಅಕ್ಷಾವಳಿ ಕಮಂಡಲುಗಳನ್ನು ಸ್ವೀಕರಿಸಿ ಆತನ ವೇಷವನ್ನೇ ತಳೆದು ತಪಶ್ಚರಣೆಮಾಡುತ್ತಿದ್ದೇನೆ. ತಾಯಿತಂದೆಗಳನ್ನೂ ಬಂಧುಜನಗಳನ್ನೂ ಬಿಟ್ಟು ತರಳಿಕೆಯೊಬ್ಬಳೊಡಗೂಡಿ ಆತನು ಪುನಃ ದೊರೆಯುವ ಕಾಲವನ್ನು ನಿರೀಕ್ಷಿಸುತ್ತಾ ಅನಾಥೆಯಾದ ನಾನು ಲೋಕೈಕನಾಥನಾದ ಶಂಕರನನ್ನು ಆರಾಧಿಸುತ್ತಾ ಹೀಗೆ ಇರುತ್ತೇನೆ ಎಂದು ಹೇಳಿ ಮಹಾಶ್ವೇತೆ ಕಣ್ಣೀರಿಟ್ಟಳು. ಚಂದ್ರಾಪೀಡನು

ಆಕೆಯನ್ನು ಸಂತೈಸಿ "ಆ ನಿಮ್ಮ ತರಳಿಕೆಯೆಲ್ಲಿ ಹೋದಳು" ಎಂದು ಕೇಳಲು, ಮಹಾಶ್ವೇತೆ "ನನಗೆ ಕಾದಂಬರಿಯೆಂಬ ಒಡನಾಡಿಯಿದ್ದಾಳೆ. ಆಕೆ ಚಿತ್ರರಥನೆಂಬ ಗಂಧರ್ವರಾಜನ ಕುವರಿ; ನಾವಿಬ್ಬರೂ ಒಡನುಂಡು, ಒಡನೆ ಇದ್ದು, ಒಡನೆ ಬೆಳೆದವು ; ಆಕೆ ನಾನು ಹೀಗೆ ಶೋಕಾಕುಲೆಯಾಗಿ ರುವೆನೆಂಬುದನ್ನು ಕೇಳಿ ತಾನೂ ಕನ್ಯಾವ್ರತದಲ್ಲಿಯೇ ಕಾಲಕಳೆಯು ವುದಾಗಿಯೂ ತಂದೆ ಯಾರಿಗಾದರೂ ತನ್ನನ್ನು ಕೊಟ್ಟು ಮದುವೆ ಮಾಡಲುಜ್ಜುಗಿಸಿದರೆ ತಾನು ಪ್ರಾಣ ಬಿಡುವುದಾಗಿಯೂ ನಿಶ್ಚಯಿ ಸಿರುವಳು. ಇದನ್ನು ಕರ್ಣಪರಂಪರೆಯಿಂದ ತಿಳಿದ ಆಕೆಯ ತಂದೆ ಒಬ್ಬ ಕಂಚುಕಿಯನ್ನು ನನ್ನ ಬಳಿಗೆ ಕಳುಹಿಸಿದನು. ತಂದೆಯ ಮಾತಿ ನಂತೆ ನಡೆಯಬೇಕೆಂದು ಆಕೆಗೆ ಬುದ್ಧಿ ಹೇಳಲು ತರಳಿಕೆಯನ್ನು ಕಳುಹಿಸಿ ಕೊಟ್ಟೆನು. ಅತ್ತ ತರಳಿಕೆ ಹೋದಳು ; ಇತ್ತ ನೀವು ಬಂದಿರಿ" ಎಂದು ಹೇಳಿದಳು.

ಜಾಬಾಲಿಯ ಹೇಳಿಕೆ.—ಮರುದಿನ ಬೆಳಗ್ಗೆ ತರಳಿಕೆ ಬಂದು, ತಾನು ಹೇಳಿದ ಮಾತಿಗೆ ಕಾದಂಬರಿ ಒಡಂಬಡಲಿಲ್ಲವೆಂದು ತಿಳಿಸಲು ಮಹಾಶ್ವೇತೆ ಚಂದ್ರಾಪೀಡನನ್ನು ಕುರಿತು "ರಾಜಧಾನಿ ಹತ್ತಿರವೇ ಇದೆ. ನೀನು ನನ್ನೊಡನೆ ಬಂದು ಆಕೆಗೆ ಬುದ್ಧಿ ಹೇಳಬೇಕು ; ಆಕೆ ನನ್ನ ಪ್ರಾಣ ಸಮಾನಳು, ನಿಜವಾಗಿಯೂ ಅಸ್ವಸ್ಥಳಾಗಿದ್ದಾಳೆ. ನನ್ನ ಈ ಪ್ರಾರ್ಥನೆ ಯನ್ನು ನಿರರ್ಥಕಮಾಡದೆ ಇದೊಂದು ದಿನ ಅಲ್ಲಿದ್ದು ವಿಶ್ರಮಿಸಿಕೊಂಡು ನಾಳೆ ಬೀಡಿಗೆ ಬಿಜಯಂಗೈಯಬೇಕು ; ಅಕಾರಣಬಂಧುವಾದ ನಿನ್ನನ್ನು ನೋಡಿಯೇ ನನಗೆ ಶೋಕವು ಆರಿತು. ನಿನ್ನ ಆಗಮನವು ಆಕೆಗೂ ಸುಖವನ್ನುಂಟುಮಾಡಬಹುದು" ಎಂದು ಹೇಳಿದಳು. ಚಂದ್ರಾಪೀಡನು ಅದಕ್ಕೆ ಒಪ್ಪಿ ಆಕೆಯೊಡನೆ ಚಿತ್ರರಥನ ರಾಜಧಾನಿಗೆ ಹೋದನು. ಕಾದಂಬ ರಿಯನ್ನು ನೋಡಿದ ಒಡನೆಯೇ ಚಂದ್ರಾಪೀಡನಿಗೆ ಆಕೆಯಲ್ಲಿ ಅನುರಾಗ ಹುಟ್ಟಿತು. ಈತನನ್ನು ನೋಡಿದ ಕೂಡಲೇ ಆಕೆಗೂ ಈತನಲ್ಲಿ ಅನುರಾಗ ಹುಟ್ಟಿತು. ಮಹಾಶ್ವೇತೆ ಕಾದಂಬರಿಗೆ ಚಂದ್ರಾಪೀಡನ ಪರಿಚಯವನ್ನು ಮಾಡಿಸಿ "ಈತನು ಹೊಸಬನೆಂದು ಭಾವಿಸಬೇಡ ; ನನ್ನಲ್ಲಿ ಹೇಗೋ ಈತನಲ್ಲಿಯೂ ಹಾಗೆಯೇ ನಡೆದುಕೊ" ಎಂದು ಹೇಳಿದಳು. ಕಾದಂಬರಿ ಮಹಾಶ್ವೇತೆಯ ಪಾದವನ್ನು ತಾನೇ ತೊಳೆದು ಮದಲೇಖೆಯೆಂಬವಳಿಂದ

ರಾಜಪುತ್ರನ ಪಾದಗಳನ್ನು ತೊಳೆಯಿಸಿ ಮಹಾಶ್ವೇತೆಗೆ ತಾಂಬೂಲವನ್ನು ಕೊಡಹೋಗಲು ಆಕೆ "ಈತನು ರಾಜಕುಮಾರ, ಹೊಸದಾಗಿ ಬಂದವನು, ಮಾನ್ಯನು. ನಮಗೆ ಆರಾಧ್ಯನು. ಆದಕಾರಣ ಈ ತಾಂಬೂಲವನ್ನು ಮೊದಲು ಈತನಿಗೆ ಕೊಡು" ಎಂದು ಹೇಳಿದಳು. ಕಾದಂಬರಿ "ನನಗೆ ನಾಚಿಕೆಯಾಗುತ್ತದೆ. ನೀನೇ ಕೊಡು" ಎಂದು ಲಜ್ಜೆಯಿಂದ ತಲೆಬಾಗಿಸಿಕೊಂಡು ಹೇಳಿದಳು. ಮಹಾಶ್ವೇತೆ ಆಗ್ರಹಿಸಲು ಆಕೆ ಲಜ್ಜೆಯಿಂದ ಬೆವರುತ್ತಾ ನಡುಗುತ್ತಾ ತಾಂಬೂಲವನ್ನು ಕೊಟ್ಟಳು. ಹೀಗೆ ಕಾದಂಬರಿಗೆ ಚಂದ್ರಾಪೀಡನಲ್ಲಿ ಪ್ರೇಮಾಂಕುರವು ಮೊಳೆತು ಚಿಗುರಿಟ್ಟಿತು. ಅಷ್ಟರಲ್ಲಿ ಚಿತ್ರರಥನೂ ಮದಿರಾದೇವಿಯೂ ಮಹಾಶ್ವೇತೆಯನ್ನು ನೋಡಲು ಉತ್ಸುಕರಾಗಿರುವುದಾಗಿ ಸುದ್ದಿ ಬಂದದ್ದರಿಂದ ಮಹಾಶ್ವೇತೆ ಚಂದ್ರಾಪೀಡನಿಗೆ ಬಿಡಾರವನ್ನು ಗೊತ್ತುಮಾಡಿ ಆತನನ್ನು ಅಲ್ಲಿಗೆ ಕಳುಹಿಸಿ ಚಿತ್ರರಥನನ್ನು ಕಾಣಲು ಹೋದಳು. ಪ್ರಣಯ ಜಾಲದಲ್ಲಿ ಸಿಲುಕಿದ ಕಾದಂಬರಿಗೆ ಮನಸ್ಸಿನಲ್ಲಿ ವಿಚಾರತರಂಗಗಳೆದ್ದುವು. ಸುತ್ತಲೂ ಸಖಿಯರಿದ್ದರು, ಪರಿಚಾರಿಕೆಯರಿದ್ದರು; ಎದುರಿಗೆ ಪತಿವಿರಹದುಃಖಿನಿಯಾದ ಮಹಾಶ್ವೇತೆಯಿದ್ದಳು; ರಾಜಕುಮಾರನಾದರೋ ಹೊಸಬ; ಇವರೆಲ್ಲರೆದುರಿಗೆ ನನ್ನ ಕಾಮಪರವಶತೆಯು ವ್ಯಕ್ತವಾಯಿತು. ಇದೆಲ್ಲವೂ ಒತ್ತಟ್ಟಿಗಿರಲಿ, "ಅಕ್ಕನು ವ್ರತದಲ್ಲಿ ದೇಹವನ್ನು ತೆಯ್ಯುತ್ತಿದ್ದಾಳೆ. ಆದಕಾರಣ ನಾನು ಮದುವೆಯಾಗುವುದಿಲ್ಲ. ಕನ್ಯಾವ್ರತವನ್ನು ಕೈಕೊಳ್ಳುತ್ತೇನೆ" ಎಂದು ಎಲ್ಲರಿಗೂ ಹೇಳಿ, ಎಂದೂ ಕಾಣದ ಕೇಳದ ರಾಜಕುಮಾರನಲ್ಲಿ ಅಕ್ಕನ ಎದುರಿಗೇ ಮೋಹಗೊಂಡೆನಲ್ಲ, ಮನವೆಲ್ಲವೂ ಆತನಿಗೆ ಸೂರೆಹೋಗಿದೆ ಎಂದು ಯೋಚಿಸುತ್ತಿದ್ದಳು. ಇತ್ತ ಚಂದ್ರಾಪೀಡನೂ ಆಕೆಯ ಹಾವಭಾವಗಳನ್ನು ಸ್ಮರಿಸುತ್ತಾ ಆಕೆಗೆ ತನ್ನಲ್ಲಿ ಪ್ರೇಮವುಂಟಾಗಿರಬೇಕೆಂದು ಯೋಚಿಸುತ್ತಿದ್ದನು. ಅಷ್ಟು ಹೊತ್ತಿಗೆ ಮದಲೇಖೆ ಶೇಷವೆಂಬ ಹೆಸರಿನ ಮುತ್ತಿನ ಹಾರವನ್ನು ತೆಗೆದುಕೊಂಡು ಬಂದು "ಇದು ನಿಮ್ಮ ಮದನಾವತಾರವೆನಿಸಿದ ಆಕಾರಕ್ಕೆ ಎಣೆಯಾದದ್ದೆಂದು ಕಾದಂಬರಿ ಕಳುಹಿಸಿದ್ದಾಳೆ; ಇದು ಆಕೆಯ ಪ್ರಣಯದ ಕುರುಹು; ಇದನ್ನು ನೀವು ಕೈಕೊಳ್ಳದಿದ್ದರೆ ಆಕೆ ಭಗ್ನಪ್ರಣಯೆಯಾಗುವಳು" ಎಂದು ಹೇಳಿ ಒಪ್ಪಿಸಿ ಹೋದಳು. ಕೊಂಚ ಹೊತ್ತಾದಮೇಲೆ ಚಂದ್ರೋದಯ

ವಾಗಲು ಕಾದಂಬರಿ ಮಿತಪರಿವಾರೆಯಾಗಿ ಬಂದು ಚಂದ್ರಾಪೀಡನನ್ನು ನೋಡಿ ಸ್ವಲ್ಪಕಾಲ ಮಾತನಾಡುತ್ತಿದ್ದು ಹಿಂದಿರುಗಿದಳು. ಆಮೇಲೆ ಚಂದ್ರಾಪೀಡನು ಶಯ್ಯೆಯಲ್ಲಿ ಮಲಗಿ ಕಾದಂಬರಿಯ ನಿರಹಂಕಾರ, ಮಹಾಶ್ವೇತೆಯ ನಿಷ್ಕಾರಣವತ್ಸಲತೆ, ಮದಲೇಖೆಯ ಸುಜನತೆ ಮುಂತಾದುವನ್ನು ಭಾವಿಸುತ್ತಿರಲು ಬೆಳಗಾಯಿತು. ಬಳಿಕ ಅವನು ಎದ್ದು ಮುಖಮಜ್ಜನಾದಿಗಳನ್ನು ಪೂರೈಸಿ ಕಾದಂಬರಿ ಮಹಾಶ್ವೇತೆಯರ ಅಪ್ಪಣೆಯನ್ನು ಪಡೆದು ಹೊರಟು ಅಚ್ಛೋದ ಸರಸ್ಸಿನ ಮಾರ್ಗವಾಗಿ ಹೋದನು. ಆ ವೇಳೆಗೆ ಇಂದ್ರಾಯುಧದ ಹೆಜ್ಜೆಯನ್ನನುಸರಿಸಿ ಬಂದು ಆ ಸರೋವರದ ಬಳಿ ಬೀಡುಬಿಟ್ಟಿದ್ದ ತನ್ನ ಪರಿವಾರವನ್ನು ನೋಡಿ ಆ ದಿನವನ್ನು ಅಲ್ಲಿ ಕಳೆದನು. ಮರುದಿನ ಬೆಳಗ್ಗೆ ಕೇಯೂರಕನು ಬಂದು ಚಂದ್ರಾಪೀಡನು ಮರೆತು ಬಂದಿದ್ದ ಶೇಷಹಾರವನ್ನೂ ಕಾದಂಬರಿ ಕಳುಹಿಸಿದ್ದ ಉಪಾಯನವನ್ನೂ ಕೊಟ್ಟು ಕಾದಂಬರಿಗೆ ಉಂಟಾಗಿದ್ದ ವಿರಹವನ್ನು ವಿವರಿಸಿ "ಆಕೆ ನಿಮ್ಮನ್ನು ಕರೆತರುವಂತೆ ಹೇಳಿ ನನ್ನನ್ನು ಕಳುಹಿದಳು" ಎಂದು ತಿಳಿಸಿದನು. ಚಂದ್ರಾಪೀಡನು ಪತ್ರಲೇಖೆಯೊಡನೆ ಹೋಗಿ ಪ್ರಮದವನದ ಹಿಮಗೃಹದಲ್ಲಿದ್ದ ಕಾದಂಬರಿಯನ್ನು ಕಂಡನು. ಅಲ್ಲಿ ಸ್ವಲ್ಪ ಹೊತ್ತು ಪ್ರೇಮಾಲಾಪವು ನಡೆದ ಮೇಲೆ ಚಂದ್ರಾಪೀಡನು ಕಾದಂಬರಿಯ ಇಷ್ಟದಂತೆ ಪತ್ರಲೇಖೆಯನ್ನು ಆಕೆಯ ಬಳಿಯಲ್ಲಿಯೇ ಬಿಟ್ಟು ತನ್ನ ಪಾಳಯಕ್ಕೆ ಹಿಂದಿರುಗಿದನು. ಆ ವೇಳೆಗೆ ಒಬ್ಬ ದೂತನು ಉಜ್ಜಯಿನಿಯಿಂದ ಬಂದು ಒಂದು ಕಾಗದವನ್ನು ಕೊಟ್ಟನು. ಅದರಲ್ಲಿ ಆ ಕಾಗದವನ್ನು ನೋಡಿದ ಕೂಡಲೇ ರಾಜಧಾನಿಗೆ ಹಿಂದಿರುಗಿ ಬರಬೇಕೆಂದು ಬರೆದಿತ್ತು. ಈ ಸುದ್ದಿಯನ್ನು ಕಾದಂಬರಿಗೆ ಹೇಳಿ ಕಳುಹಿಸಿ, ಪತ್ರಲೇಖೆಯನ್ನು ಕರೆತರಲು ಮೇಘನಾದನನ್ನು ಅಲ್ಲಿಯೇ ಬಿಟ್ಟು, ತನ್ನ ಸೈನ್ಯವನ್ನು ಕರೆದುಕೊಂಡು ಬರುವಂತೆ ವೈಶಂಪಾಯನನಿಗೆ ಹೇಳಿ, ಉಜ್ಜಯಿನಿಗೆ ಹೊರಟುಹೋದನು.

ಚಂದ್ರಾಪೀಡನು ಉಜ್ಜಯಿನಿಗೆ ಬಂದು ಕಾದಂಬರಿಯನ್ನೇ ಸ್ಮರಿಸುತ್ತಾ ಪತ್ರಲೇಖೆಯ ಆಗಮನವನ್ನು ನಿರೀಕ್ಷಿಸುತ್ತಿದ್ದನು. ಕೆಲವು ದಿನಗಳ ಮೇಲೆ ಆಕೆ ಬರಲು ಆಕೆಯಿಂದ ಕಾದಂಬರಿಯ ವಿರಹವ್ಯಥೆಯ ವರ್ಣನೆಯನ್ನು ಕೇಳಿ ಮರುಗಿದನು. ಇದಾದ ಕೆಲವು ದಿನಗಳ ಮೇಲೆ ಕಾದಂಬರಿಯ ಸ್ಥಿತಿಯನ್ನು ಬಿನ್ನವಿಸಲು ಬಂದ ಕೇಯೂರಕನಿಂದಲೂ

ಅವಳ ವಿರಹ ವೇದನೆಯನ್ನು ಕೇಳಿ ಉದ್ವಿಗ್ನಚಿತ್ತನಾದನು. ವೈಶಂಪಾಯನನು ಸೈನ್ಯದೊಡನೆ ಹಿಂದಿರುಗಿದ ಕೂಡಲೇ ತಾನು ತಂದೆತಾಯಿಗಳ ಅಪ್ಪಣೆ ಪಡೆದು ಹೊರಟುಬರುವುದಾಗಿ ಕಾದಂಬರಿಗೆ ತಿಳಿಸಿ ಆಕೆಯನ್ನು ಸಮಾಧಾನಪಡಿಸಬೇಕೆಂದು ಹೇಳಿ ಕೇಯೂರನನ್ನೂ ಪತ್ರಲೇಖೆಯನ್ನೂ ಕಾದಂಬರಿಯ ಬಳಿಗೆ ಕಳುಹಿದನು. ಎಷ್ಟು ದಿನಗಳಾದರೂ ವೈಶಂಪಾಯನನಾಗಲಿ ಸೈನ್ಯವಾಗಲಿ ಬಾರದಿರಲು ತಾನಾದರೂ ಹೋಗಿ ವೈಶಂಪಾಯನನ ವಿಷಯವನ್ನು ತಿಳಿದುಕೊಂಡು ಬರಬೇಕೆಂದು ಹೊರಟನು. ತಾವು ಎಷ್ಟು ಪ್ರಾರ್ಥಿಸಿದರೂ ವೈಶಂಪಾಯನನು ಅಚ್ಛೋದ ಸರಸ್ತೀರದ ಪ್ರದೇಶವನ್ನು ಬಿಟ್ಟುಬರುವುದಕ್ಕೆ ಒಪ್ಪಲಿಲ್ಲವೆಂಬುದನ್ನೂ ಆತನಿಗೆ ಇದ್ದಕ್ಕಿದ್ದ ಹಾಗೆ ವೈರಾಗ್ಯವುಂಟಾಗಿರುವುದೆಂಬುದನ್ನೂ ಹಿಂದಕ್ಕೆ ಬರುತ್ತಿದ್ದ ಸೈನ್ಯದವರು ತಿಳಿಸಲು, ಆತನನ್ನು ಕರೆತರುವುದಕ್ಕಾಗಿ ತಂದೆತಾಯಿಗಳ ಅಪ್ಪಣೆಯನ್ನು ಪಡೆದು ತಾನೇ ಹೊರಟನು.

ಚಂದ್ರಾಪೀಡನು ಇಂದ್ರಾಯುಧವನ್ನೇರಿ ಸೈನ್ಯದೊಡನೆ ಹೊರಟು ಸ್ನೇಹಿತನನ್ನು ನೋಡಬೇಕೆಂಬ ಕುತೂಹಲದಿಂದಲೂ ಕಾದಂಬರಿಯ ಸಮಾಗಮ ಸೌಖ್ಯವನ್ನು ಪಡೆಯಬೇಕೆಂಬ ಉತ್ಸುಕತೆಯಿಂದಲೂ ಎಲ್ಲಿಯೂ ತಡೆಯದೆ ಪ್ರಯಾಣಮಾಡಿದನು. ಹೋಗುತ್ತಾ ದಾರಿಯಲ್ಲಿ "ನನ್ನನ್ನು ಕಂಡು ನಾಚಿಹೋಗುವ ಗೆಳೆಯನ ಹಿಂದೆ ಹೋಗಿ ಅವನನ್ನು ತಕ್ಕೈಸುತ್ತೇನೆ; ನಾನೂ ಆತನೂ ಇಬ್ಬರೂ ಮಹಾಶ್ವೇತೆಯ ಆಶ್ರಮಕ್ಕೆ ಹೋಗಿ ಅಲ್ಲಿ ಸೈನ್ಯವನ್ನು ಬಿಟ್ಟು ಆಕೆಯೊಡನೆ ಹೇಮಕೂಟಕ್ಕೆ ಹೋಗುತ್ತೇವೆ. ನಾನು ಬಂದದ್ದನ್ನು ಕೇಳಿ ಇದಿರೇಳುವ ಕಾದಂಬರಿಯನ್ನು ನೋಡಿ ಕಣ್ಣು ಪಡೆದುದಕ್ಕೆ ಸಾಫಲ್ಯವನ್ನು ಸಂಪಾದಿಸುತ್ತೇನೆ. ಕಾದಂಬರಿಗೆ ಹೇಳಿ ವೈಶಂಪಾಯನನಿಗೂ ಮದಲೇಖೆಗೂ ವಿವಾಹವನ್ನು ಮಾಡಿಸುತ್ತೇನೆ"—ಹೀಗೆ ಮನಸ್ಸಿನಲ್ಲಿ ಮಂಡಿಗೆ ಮಾಡುತ್ತಾ ಚಿತ್ರರಥವನ್ನು ಸೇರಿದನು. ಅಲ್ಲಿ ಎಷ್ಟು ಹುಡುಕಿದರೂ ವೈಶಂಪಾಯನನ ಸುಳಿವೇ ಗೊತ್ತಾಗಲಿಲ್ಲ. ಮಹಾಶ್ವೇತೆಗೆ ಆತನ ವೃತ್ತಾಂತವು ತಿಳಿದಿರಬಹುದೆಂದು ಭಾವಿಸಿ ಆಕೆಯ ಆಶ್ರಮಕ್ಕೆ ಹೋಗಿ ನೋಡಲು, ಆಕೆ ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಸುತ್ತಾ ದುಃಖದಿಂದ ತಲೆಬಾಗಿ ಕುಳಿತಿದ್ದಳು. ಅದನ್ನು ಕಂಡು ಗಾಬರಿಯಾಗಿ, ಕಾದಂಬರಿಗೇನಾದರೂ

ಕೇಡಾಗಿರಬಹುದೆಂದು ಶಂಕಿಸಿ ಇದೇನೆಂದು ಕೇಳಲು ಆಕೆ ಹೀಗೆ ಹೇಳಿ ದಳು—ನೀನು ಉಜ್ಜಯಿನಿಗೆ ಹೋದದ್ದನ್ನು ಕೇಳಿ ಮನನೊಂದು ಮಹಾ ಘೋರತಪಶ್ಚರಣಾರ್ಥವಾಗಿ ಇಲ್ಲಿಗೆ ಬಂದೆನು. ಒಂದು ದಿನ ನಿನ್ನ ವಯಸ್ಸಿನ ಒಬ್ಬ ಬ್ರಾಹ್ಮಣ ಕುಮಾರನು ಬಂದು ನನ್ನನ್ನು ಕಣ್ಣುಗ ಳಿಂದಲೇ ಹೀರುವಂತೆ ನೋಡಿ "ಸುಂದರಿ, ನಿನ್ನಂಥವರು ಐಹಿಕ ಸುಖ ವನ್ನು ಬಿಟ್ಟು ತಪಕ್ಕೆ ಹೋಗುವುದೆ?" ಎಂದು ಮೊದಲಾಗಿ ಅನೇಕ ಚಾಟು ಚಪಲವಾಕ್ಯಗಳನ್ನು ನುಡಿದನು. ಪುಂಡರೀಕನನ್ನೇ ಸ್ಮರಿಸುತ್ತಾ ಸುಖವನ್ನೇ ಅರಿಯದಿದ್ದ ನಾನು ನೀನಾರೆಂದು ಕೂಡ ಕೇಳದೆ ಬೇರೆಡೆಗೆ ಹೊರಟುಹೋಗಿ, ತರಳಿಕೆಯನ್ನು ಕರೆದು "ಇವನನ್ನು ಗುಹೆಯತ್ತ ಬಾರದಂತೆ ತಡೆದಿರು" ಎಂದು ಹೇಳಿದೆನು. ಅವಳು ತಡೆದರೂ ಬಿಡದೆ ಅವನು ನನ್ನ ಹತ್ತಿರವೇ ಸುಳಿದಾಡುತ್ತಿದ್ದನು. ಒಂದು ದಿನ ರಾತ್ರಿ ಮೂರು ಯಾಮವಾಗಿತ್ತು; ತರಳಿಕೆ ನಿದ್ದೆ ಹೋಗಿದ್ದಳು; ಹೊರಗೆ ಸ್ವಚ್ಛವಾದ ಬೆಳುದಿಂಗಳು ಕಾಯುತ್ತಿತ್ತು. ನಾನೊಬ್ಬಳೇ ಗುಹೆಯಿಂದ ಹೊರಗೆ ಬಂದು ಒಂದು ಬಂಡೆಯ ಮೇಲೆ ಮಲಗಿ ಪುಂಡರೀಕನ ವಿಷಯ ವನ್ನೇ ಧ್ಯಾನಿಸುತ್ತಿದ್ದೆನು. ಆ ಸಮಯದಲ್ಲಿ ಆ ಬ್ರಾಹ್ಮಣ ಕುಮಾರನು ಮೆಲ್ಲಮೆಲ್ಲನೆ ನನ್ನ ಬಳಿಗೆ ಬಂದು "ಮನ್ಮಥಸಹಾಯನಾದ ಚಂದ್ರನು ನನ್ನನ್ನು ಕೊಲ್ಲುತ್ತಾನೆ; ನಾನು ಅನಾಥನಾಗಿ ನಿನ್ನನ್ನು ಮರೆಹೊಕ್ಕಿ ದ್ದೇನೆ; ಈ ಜೀವ ನಿನ್ನದು, ನನ್ನನ್ನು ರಕ್ಷಿಸು" ಎಂದನು. ಅದನ್ನು ಕೇಳಿ ರೇಗಿದವಳಾಗಿ, "ಗಿಳಿಯಾಗಿ ಹುಟ್ಟು" ಎಂದು ಆತನನ್ನು ಶಪಿಸಿದೆನು. ಕೂಡಲೆ ಆತನು ನಿಶ್ಚೇತನನಾಗಿ ಭೂಮಿಗೆ ಬಿದ್ದು ಸತ್ತುಹೋದನು. ಆತನು ನಿನ್ನ ಗೆಳೆಯನೆಂದು ಪರಿಜನರಿಂದ ಗೊತ್ತಾಯಿತು—ಎಂದು ಆಕೆ ಹೇಳುತ್ತಿದ್ದ ಹಾಗೆಯೇ ಎದೆಯೊಡೆದು ಚಂದ್ರಾಪೀಡನು ನೆಲಕ್ಕೆಬಿದ್ದನು. ಮಹಾಶ್ವೇತೆ ಮೂರ್ಛೆಹೋದಳು. ತರಳಿಕೆ ಅಳುವುದಕ್ಕೆ ಮೊದಲು ಮಾಡಿದಳು. ಮಹಾಶ್ವೇತೆಯ ಆಶ್ರಮಕ್ಕೆ ಚಂದ್ರಾಪೀಡನು ಬಂದ ನೆಂದು ಕೇಳಿ ಅಷ್ಟು ಹೊತ್ತಿಗೆ ಅಲ್ಲಿಗೆ ಬಂದ ಕಾದಂಬರಿಯೂ ಅವಳ ಜತೆಗಿದ್ದ ಪತ್ರಲೇಖೆಯೂ ಮೂರ್ಛಿತರಾದರು. ಬಳಿಕ ಕಾದಂಬರಿ ಎಚ್ಚೆತ್ತು ಪ್ರಾಣತ್ಯಾಗಕ್ಕೆ ಉಜ್ಜುಗಿಸಲು, ಅಂತರಿಕ್ಷದಲ್ಲಿ ಚಂದ್ರಕಿರಣ ಮಯವಾದ ಪ್ರಭಾಮಂಡಲವು ಮೂಡಿ, ಅಲ್ಲಿಂದ "ಮಹಾಶ್ವೇತೆ, ಹಿಂದೆ

ನಾನು ನಿನ್ನನ್ನು ಸಮಾಶ್ವಾಸಿಸಿದ್ದೆನು. ಈಗಲೂ ಆಶ್ವಾಸಿಸಲು ಬಂದಿರುವೆನು. ಪುಂಡರೀಕನ ದೇಹವು ನಿನ್ನ ಸಮಾಗಮಾರ್ಥವಾಗಿ ಇನ್ನೂ ಬೆಳಗುತ್ತಾ ನಿತ್ಯರೂಪತ್ವದಿಂದಿದೆ. ಈ ಚಂದ್ರಾಪೀಡನ ದೇಹವೂ ನಿತ್ಯವಾದದ್ದು. ಕೆಲವು ಕಾಲಾನಂತರ ಚಂದ್ರಾಪೀಡನು ಕಾದಂಬರಿಯನ್ನು ಕೂಡುವನು. ಈತನ ದೇಹವನ್ನು ಅತಿ ಪ್ರಯತ್ನದಿಂದ ನೋಡಿಕೊಳ್ಳುತ್ತಿರಬೇಕು " ಎಂಬ ದಿವ್ಯಧ್ವನಿ ಕೇಳಿಸಿತು. ಬಳಿಕ ಪತ್ರಲೇಖೆ ಮೂರ್ಛೆ ತಿಳಿದೆದ್ದು ಇಂದ್ರಾಯುಧದ ಬಳಿಗೆ ಹೋಗಿ ಅದರೊಡನೆ ಅಚ್ಛೋದ ಸರಸ್ಸಿನಲ್ಲಿ ಹಾರಿಕೊಂಡಳು. ಕೂಡಲೆ ಸರೋವರದಿಂದ ಕಪಿಂಜಲನು ಎದ್ದು ಬಂದು ಮಹಾಶ್ವೇತೆಗೆ ಹೀಗೆ ಹೇಳಿದನು—ಪುಂಡರೀಕನು ವಿರಹೋದ್ರೇಕದಿಂದ ಚಂದ್ರನನ್ನು ಕುರಿತು " ನೀನು ಎರಡುಸಲ ಮನುಷ್ಯನಾಗಿ ಹುಟ್ಟು " ಎಂದು ಶಪಿಸಿದನಂತೆ. ಅದರಿಂದ ಕುಪಿತನಾದ ಚಂದ್ರನು " ನೀನೂ ನನ್ನೊಡನೆ ಸುಖದುಃಖವನ್ನನುಭವಿಸು " ಎಂದು ಶಾಪಕೊಟ್ಟು ಪುಂಡರೀಕನ ದೇಹವನ್ನು ತೆಗೆದುಕೊಂಡು ಹೋಗಿ ಚಂದ್ರಲೋಕದಲ್ಲಿ ಕಾಪಾಡುತ್ತಿರುವನು. ಚಂದ್ರನು ನನ್ನನ್ನು ಕುರಿತು " ನೀನು ಹೋಗಿ ಶ್ವೇತಕೇತು ಪ್ರತಿಗೆಆಯುಷ್ಕಾಮಹೋಮ:ದಾನಗಳನ್ನು ಮಾಡುವಂತೆ ತಿಳಿಸು " ಎಂದು ಹೇಳಿದನು. ಅಲ್ಲಿಂದ ಹಿಂದಿರುಗಿ ಬರುತ್ತಿರುವಾಗ ಅರಿಯದೆ ನಾನು ಒಬ್ಬ ವೈಮಾನಿಕನನ್ನು ದಾಟಿದೆನು. ಆತನು ಕುಪಿತನಾಗಿ ವಾಹತ್ವವನ್ನು ತಾಳೆಂದು ಶಪಿಸಿದನು. ಆಗ ನಾನು " ಶೋಕಾಂಧನಾಗಿ ದಾಟಿದೆನೇ ಹೊರತು ಅವಜ್ಞೆಯಿಂದ ದಾಟಲಿಲ್ಲ. ವಾಹತ್ವ ಬಂದರೂ ಬರಲಿ. ನನ್ನ ಮಿತ್ರನ ಬಳಿ ಇರುವಂತೆ ಕರುಣಿಸು " ಎಂದು ಬೇಡಿಕೊಳ್ಳಲು ಆತನು, " ಉಜ್ಜಯಿನಿಯಲ್ಲಿ ತಾರಾಪೀಡ ಚಕ್ರವರ್ತಿಗೆ ಮಗನಾಗಿ ಚಂದ್ರನೇ ಚಂದ್ರಾಪೀಡನೆಂಬ ಹೆಸರಿನಿಂದ ಹುಟ್ಟುತ್ತಾನೆ. ಆ ಚಂದ್ರಾಪೀಡನಿಗೆ ನೀನು ವಾಹನವಾಗುವೆ " ಎಂದು ತಿಳಿಸಿದನು. ಕೂಡಲೆ ನಾನು ತುರಗ ರೂಪವನ್ನು ಹೊಂದಿ ಸಮುದ್ರಾಂತರದಲ್ಲಿ ಬಿದ್ದೆನು. ಪಾರಶೀಕರಾಜನು ನನ್ನನ್ನು ತಾರಾಪೀಡನಿಗೆ ಒಪ್ಪಿಸಿದನು. ಆತನ ಮಗನಾದ ಚಂದ್ರಾಪೀಡನಿಗೆ ಹೀಗೆ ನಾನು ವಾಹನವಾದೆನು. ಅಚ್ಛೋದದಲ್ಲಿ ಮುಳುಗಿದ ಕೂಡಲೆ ವಾಹತ್ವವು ಕಳೆಯಿತು. ಇನ್ನು ಶ್ವೇತಕೇತು ಪ್ರತಿಗಳ ಬಳಿಗೆ ಹೋಗುವೆನು—ಎಂದು

ಹೇಳಿ ಹೊರಟುಹೋದನು. ಮಹಾಶ್ವೇತೆ ಕಾದಂಬರಿಯನ್ನು ಕುರಿತು ತಂಗಿ, ನೀನು ಸಮಾಧಾನಮಾಡಿಕೊ. ನಾವಿಬ್ಬರೂ ಸಮಸುಖದುಃಖ ವೃತ್ತಿಗಳಾದೆವು. ನಮ್ಮ ಕರ್ತವ್ಯವನ್ನು ಮಾಡೋಣ. ಮನಸ್ಸಿನಲ್ಲಿ ದೈವವೆಂದು ಭಾವಿಸಿ ಕಲ್ಲು ಮಣ್ಣು ರೂಪವನ್ನು ಪೂಜಿಸುತ್ತಿದ್ದರೇ ಸನ್ನಿಹಿತ ವಾಗುತ್ತಿರಲು ಸಾಕ್ಷಾತ್ ಚಂದ್ರಮೂರ್ತಿಯನ್ನು ಪೂಜಿಸುತ್ತಿದ್ದರೆ ಆತನು ಸನ್ನಿಹಿತವಾಗದಿರುವನೆ ?---ಎಂದು ಸಂತೈಸಿದಳು. ಇತ್ತ ಚಂದ್ರಾಪೀಡನ ಸ್ಥಿತಿಯನ್ನು ಚಾರರಿಂದ ತಿಳಿದು ಚಂದ್ರಾಪೀಡ ವೈಶಂ ಪಾಯನರ ತಾಯಿ ತಂದೆಗಳೂ ಅಲ್ಲಿಗೆ ಬಂದು ತಾಪಸರಂತಿದ್ದರು. ಹೀಗೆ ಪುಂಡರೀಕನು ಶ್ವೇತಕೇತುವ್ರತಿಗೆ ಮಗನಾಗಿ ಹುಟ್ಟಿ, ಕಾಮಪರ ವಶತೆಯಿಂದ ದೇವತ್ವವನ್ನು ಕಳೆದುಕೊಂಡು, ಶುಕನಾಸನಿಗೆ ವೈಶಂಪಾಯ ನನೆಂಬ ಹೆಸರಿನಿಂದ ಮಗನಾಗಿ ಹುಟ್ಟಿ, ಮತ್ತೆ ಕಾಮಿಯಾಗಿ ಮಹಾ ಶ್ವೇತೆಯ ಶಾಪದಿಂದ ಈ ಗಿಳಿಯಾಗಿ ಹುಟ್ಟಿದನು.

ಗಿಳಿಯ ಹೇಳಿಕೆ.---ಜಾಬಾಲಿಗಳು ಹೀಗೆ ಹೇಳಲು ನನಗೆ ಎಚ್ಚ ತ್ತಂತಾಗಿ ಜನ್ಮಾಂತರದಲ್ಲಿ ಕಲಿತ ವಿದ್ಯಾಸಂತತಿಯು ಲಭ್ಯವಾಯಿತು. ನಾನು ಜಾಬಾಲಿಗಳನ್ನು ಕುರಿತು “ ಜಾತಿಸ್ಮರತೆ ವಿರಕ್ತಿಗೆ ಹೇತುವೆನ್ನು ತ್ತಾರೆ. ನನಗಾದರೋ ಮಹಾಶ್ವೇತೆಯಲ್ಲಿ ಆದ ಅನುರಾಗವು ಹೆಚ್ಚು ತ್ತಿದೆ. ಚಂದ್ರಾಪೀಡನನ್ನು ನೋಡಬೇಕೆನ್ನಿಸುತ್ತದೆ. ಆತನು ಎಲ್ಲಿ ಹುಟ್ಟಿದ್ದಾನೆಂಬುದನ್ನು ತಿಳಿಸಿ ” ಎಂದು ಕೇಳಲು, ಅವರು “ ನೀನು ಇನ್ನೂ ಹಾರಲಾರೆ ; ಗರಿ ಮೂಡಿದ ಮೇಲೆ ಹೋಗುವೆಯಂತೆ, ಈಗ ಸುಮ್ಮನಿರು ” ಎಂದು ಹೇಳಿ ಹೊರಟು ಹೋದರು. ಸ್ವಲ್ಪ ಹೊತ್ತಾದ ಮೇಲೆ ನನ್ನ ಪೂರ್ವಜನ್ಮದ ಮಿತ್ರನಾದ ಕಪಿಂಜಲನು ನನ್ನನ್ನು ಹುಡುಕಿ ಕೊಂಡು ಬಂದು, ತಂದೆಯಾದ ಶ್ವೇತಕೇತು ವ್ರತಿಗಳು ಆಯುಷ್ಕಾಮ ಹೋಮವನ್ನು ಮಾಡುತ್ತಿರುವರೆಂದೂ ತಾಯಿಯಾದ ಲಕ್ಷ್ಮಿಯೂ ಆ ಕಾರ್ಯದಲ್ಲಿ ಪರಿಚಾರಿಣಿಯಾಗಿರುವಳೆಂದೂ ಆ ಯಜ್ಞ ಮುಗಿಯುವ ವರೆಗೂ ನಾನು ಜಾಬಾಲಿಗಳ ಸಮೀಪದಲ್ಲಿಯೇ ಇರುವಂತೆ ಅವರಿಬ್ಬರೂ ಹೇಳಿಕಳುಹಿಸಿರುವರೆಂದೂ ತಿಳಿಸಿ ಹೊರಟು ಹೋದನು. ಕೆಲಕಾಲಾ ನಂತರ ರೆಕ್ಕೆ ಬಲಿತು ನನಗೆ ಸ್ವಲ್ಪ ಮಟ್ಟಿಗೆ ಹಾರುವ ಶಕ್ತಿ ಬಂತು. ಚಂದ್ರಾಪೀಡನ ಉತ್ಪತ್ತಿಯೂ ಗೊತ್ತಾಯಿತು. ಆತನನ್ನು ನೋಡದೆ

ಒಂದು ನಿಮಿಷವೂ ಇರಲಾರದೆ, ಆತನ ಬಳಿಗೆ ಹೋಗಬೇಕೆಂದು ಒಂದು ದಿನ ಬೆಳಗ್ಗೆ ಜಾಬಾಲಿಗಳ ಆಶ್ರಮದಿಂದ ತಪ್ಪಿಸಿಕೊಂಡು ಹೊರಟೆನು. ಹಾರುತ್ತಾ ಸ್ವಲ್ಪ ದೂರ ಬಂದ ಮೇಲೆ ಬಳಲಿ ಒಂದು ಗಿಡದ ಮೇಲೆ ಮಲಗಿದೆನು. ಎಚ್ಚರವಾಗಿ ನೋಡುವ ಹೊತ್ತಿಗೆ ಬಲೆಯಲ್ಲಿ ಸಿಕ್ಕಿಬಿದ್ದಿದ್ದೆನು. ನನ್ನನ್ನು ಹಿಡಿದ ಚಂಡಾಲನನ್ನು ಕುರಿತು "ನಾನು ಪ್ರಿಯ ಸಖನನ್ನು ನೋಡಲು ಹೋಗುತ್ತಿದ್ದೇನೆ, ಇನ್ನೂ ಬಹುದೂರ ಹೋಗ ಬೇಕಾಗಿದೆ, ನನ್ನನ್ನು ಬಿಡು" ಎಂದು ಎಷ್ಟೋ ಅಂಗಲಾಚಿಕೊಂಡೆನು. ಅವನು ಅದೊಂದನ್ನೂ ಕಿವಿಗೆ ಹಾಕಿಕೊಳ್ಳದೆ ಹೊಲೆಯರ ಹಟ್ಟಿಗೆ ನನ್ನನ್ನು ತೆಗೆದುಕೊಂಡು ಹೋಗಿ ಆ ಹಟ್ಟಿಯಲ್ಲಿದ್ದ ಚಂಡಾಲ ಕನ್ಯೆಗೆ ಕೊಡಲು ಆಕೆ ನನ್ನನ್ನು ಒಂದು ಪಂಜರದಲ್ಲಿರಿಸಿದಳು. ಕೆಲವು ದಿನ ಗಳು ಹಾಗೆಯೇ ಇಟ್ಟಿದ್ದು ಈ ದಿನ ಇಲ್ಲಿಗೆ ತಂದಳು. ಈಕೆಯು ನನ್ನನ್ನು ಏಕೆ ಹಿಡಿಸಿದಳು, ಏಕೆ ಸೆರೆಯಲ್ಲಿಕ್ಕಿದಳು, ಇಲ್ಲಿಗೇಕೆ ತಂದಳು ಎಂಬು ದೊಂದೂ ನನಗೆ ತಿಳಿಯದು ಎಂದು ಗಿಳಿ ಹೇಳಿತು. ಹೀಗೆ ಗಿಳಿ ಹೇಳಲು, ರಾಜನು ವಿಸ್ಮಿತನಾಗಿ ಚಂಡಾಲ ಕನ್ಯೆಯನ್ನು ಕರೆಸಲು ಆಕೆ ಬಂದು, ಶೂದ್ರಕನೇ ಚಂದ್ರಾಪೀಡನಾಗಿದ್ದ ಚಂದ್ರನೆಂದೂ, ಗಿಳಿಯೇ ವೈಶಂಪಾಯನನಾಗಿದ್ದ ಪುಂಡರೀಕನೆಂದೂ, ತಾನು ಚಂಡಾಲ ಕನ್ಯೆಯ ರೂಪವನ್ನು ತಳೆದಿದ್ದ ಲಕ್ಷ್ಮಿಯೆಂದೂ ಶ್ವೇತಕೇತುಗಳ ಆಜ್ಞೆಯಂತೆ ಆಯುಷ್ಕಾಮಹೋಮವು ಮುಗಿಯುವವರೆಗೂ ಗಿಳಿಯನ್ನು ಸೆರೆಯಿಕ್ಕಿ ದ್ದುದಾಗಿಯೂ ಯಜ್ಞಾವಸಾನ ಸಮಯ ಬಂದದ್ದರಿಂದ ಅವನ್ನು ಜನ್ಮಾಂತರ ಸಹಾಯನಾದ ರಾಜನ ಬಳಿಗೆ ತಂದದ್ದಾಗಿಯೂ ತಿಳಿಸಿ, ಇನ್ನು ಅವರಿಬ್ಬರೂ ಈ ದೇಹಗಳನ್ನು ತ್ಯಜಿಸಿ ದಿವ್ಯ ದೇಹಗಳನ್ನು ಹೊಂದಿ, ಇಷ್ಟಜನ ಸಮಾಗಮಸುಖವನ್ನನುಭವಿಸಬಹು ದೆಂದು ಹೇಳಿ ಮಿಂಚಿನಂತೆ ಆಕಾಶಕ್ಕೆ ನೆಗೆದಳು. ರಾಜನೂ ಗಿಳಿಯೂ ತಮ್ಮ ತಮ್ಮ ದೇಹಗಳನ್ನು ತ್ಯಾಗಮಾಡಿದರು. ಇತ್ತ ಚಂದ್ರಾ ಪೀಡನ ದೇಹದಲ್ಲಿ ಪುನಃ ಚೈತನ್ಯವುಂಟಾಗಿ ಆತನೂ ಎದ್ದು ಕುಳಿತನು. ಚಂದ್ರಲೋಕದಿಂದ ಪುಂಡರೀಕನೂ ಬಂದನು. ಅನಂತರ ಚಂದ್ರಾ ಪೀಡನಿಗೂ ಕಾದಂಬರಿಗೂ ಪುಂಡರೀಕನಿಗೂ ಮಹಾಶ್ವೇತೆಗೂ ವಿವಾಹ ವಾಯಿತು.

## ಕಾದಂಬರಿಯ ವಿಮರ್ಶೆ

ಬಾಣಕವಿಯ ಕಾವ್ಯರಚನೆಯ ರೀತಿಯನ್ನು ಕುರಿತು ಹಿಂದೆ ಹೇಳಿರುವ ಕೆಲವು ಅಭಿಪ್ರಾಯಗಳಿಗೆ ನಿದರ್ಶನವನ್ನು ಪಾಠಕರು ಮೇಲಿನ ಕಥಾ ಸಂಗ್ರಹದಲ್ಲಿ ಕಾಣಬಹುದು. ಈ ಕಾವ್ಯವು ಅದರ ಹೆಸರೇ ತಿಳಿಸುವಂತೆ ಕಾದಂಬರಿಯ ಪ್ರೇಮವನ್ನು ವರ್ಣಿಸುವ ಕಥೆಯಷ್ಟೆ. ಇದರ ಮುಖ್ಯ ಕಥೆಯೇನು ? ಚಂದ್ರಾಪೀಡನು ಬೇಟೆಗೆ ಹೋಗಿದ್ದಾಗ ದಾರಿತಪ್ಪಿ ಮಹಾಶ್ವೇತೆಯ ಆಶ್ರಮವನ್ನು ಸೇರಿ ಆಕೆಯಿಂದ ಪ್ರೇರಿತನಾಗಿ ಕಾದಂಬರಿಯನ್ನು ನೋಡುವುದಕ್ಕೆ ಹೋಗುವುದು ; ಪ್ರಥಮ ದರ್ಶನ ಕಾಲದಲ್ಲಿಯೇ ಕಾದಂಬರಿಗೆ ಆತನಲ್ಲಿ ಅನುರಾಗ ಹುಟ್ಟಿ ಬೆಳೆಯುವುದು ; ಕಾರಣಾಂತರದಿಂದ ಚಂದ್ರಾಪೀಡನು ಅಗಲಲು ಕಾದಂಬರಿಗೆ ವಿರಹವುಂಟಾಗುವುದು ; ಕೆಲಕಾಲಾನಂತರ ಇಬ್ಬರಿಗೂ ಸಮಾಗಮವಾಗಿ ಅವರು ವಿವಾಹವಾಗುವುದು. ಕಥಾಕಾವ್ಯವನ್ನು ರಚಿಸುವವನು ಈ ಕಥೆಗೆ ಆವಶ್ಯಕವಾದ ಅಂಗೋಪಾಂಗಗಳನ್ನೆಲ್ಲ ಪ್ರಮಾಣವರಿತು ಪುಷ್ಟಿಗೊಳಿಸಿ ಕಾದಂಬರಿಯ ಪ್ರೇಮಜೀವನದ ಚರಿತ್ರೆ ಎದ್ದು ಕಾಣುವಂತೆ ಮಾಡಬೇಕು. ಈ ಕಾವ್ಯದ ಒಟ್ಟಿನಲ್ಲಿ ಮುಖ್ಯ ಕಥೆ ಇರುವುದೆಷ್ಟು, ಪ್ರಾಸಂಗಿಕವಾಗಿ ಬಂದಿರುವ ಸಂಗತಿಗಳೆಷ್ಟು ? ಇವಕ್ಕೂ ಮುಖ್ಯ ಕಥೆಗೂ ಪ್ರಮಾಣವು ಸರಿಯಾಗಿರುವುದೆ ? ಇಲ್ಲವೆಂಬುದು ಈ ಕಥಾ ಸಂಗ್ರಹದಿಂದ ಸ್ಪಷ್ಟವಾಗುತ್ತದೆ. ಕಥೆಯ ಸ್ವಾರಸ್ಯದ ದೃಷ್ಟಿಯಿಂದಲೇ ನೋಡುವುದಾದರೆ ಕಾದಂಬರಿಯ ಜೀವನ ಕಥೆಗಿಂತಲೂ ಗಿಳಿಯ ಜೀವನದ ಕಥೆಯೂ ಮಹಾಶ್ವೇತೆಯ ಜೀವನ ವೃತ್ತಾಂತವೂ ಹೆಚ್ಚು ಚಿತ್ತಾಕರ್ಷಕವಾಗಿವೆ. ಕವಿಗೆ ಬೇಕಾದದ್ದು ಕಥೆಯಲ್ಲ ; ಆತನ ಮುಖ್ಯೋದ್ದೇಶವು ವರ್ಣನೆ ಮತ್ತು ಪದಬಂಧಪ್ರೌಢಿಮೆ. ಕಾದಂಬರಿಯಲ್ಲಿ ವರ್ಣನೆಗಳು ಮೇಲಿಂದ ಮೇಲೆ ಬರುವುವು. ಶೂದ್ರಕ ರಾಜನ ಸಭಾ ವರ್ಣನೆ, ವಿಂಧ್ಯಾಟವಿಯ ವರ್ಣನೆ, ಜಾಬಾಲಿ ಋಷ್ಯಾಶ್ರಮದ ವರ್ಣನೆ; ಪ್ರತೀಹಾರಿಯ ವರ್ಣನೆ, ಚಂಡಾಲ ಕನ್ಯೆಯ ವರ್ಣನೆ, ಮಹಾಶ್ವೇತೆಯ ವರ್ಣನೆ, ಗಿಳಿಮರಿಯ ಮನೋಭಾವದ ವರ್ಣನೆ, ಕಾದಂಬರಿಯ ಅನುರಾಗದ ವರ್ಣನೆ ; ಇತ್ಯಾದಿ. ಈ ವರ್ಣನೆಗಳಲ್ಲಿ ಪ್ರತಿಯೊಂದನ್ನೂ— ಅದು ಪ್ರಕೃತಿಯ ವರ್ಣನೆಯೇ ಆಗಲಿ, ವ್ಯಕ್ತಿಗಳ ವರ್ಣನೆಯೇ ಆಗಲಿ,

ಭಾವಗಳ ವರ್ಣನೆಯೇ ಆಗಲಿ—ಮುಖ್ಯ, ಗೌಣವೆಂಬ ಭೇದವಿಲ್ಲದೆ ಕವಿ ಸಾವಧಾನವಾಗಿ, ಸಂಪೂರ್ಣವಾಗಿ, ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುತ್ತಾನೆ. ಈ ವರ್ಣನೆಗೂ ಪದರಚನೆಗೂ ಕಥೆ ಅವಲಂಬನವಾಗುತ್ತದೆ. ಈ ವಿಷಯದಲ್ಲಿ ರವೀಂದ್ರನಾಥ ಠಾಕೂರರು ತಮ್ಮ "ಕಾದಂಬರೀ ಚಿತ್ರ" ಎಂಬ ಲೇಖನದಲ್ಲಿ ಹೇಳಿರುವ ಒಂದೆರಡು ವಾಕ್ಯಗಳನ್ನು ಇಲ್ಲಿ ಉದ್ಧರಿಸಬಹುದು. "ಸಮಗ್ರ ಕಾದಂಬರಿಯು ಒಂದು ಚಿತ್ರಶಾಲೆ. ಸಾಮಾನ್ಯವಾಗಿ ಜನರು ಘಟನೆಯನ್ನು ವರ್ಣಿಸಿ ಕಥೆಯನ್ನು ಬರೆಯುತ್ತಾರೆ; ಬಾಣಭಟ್ಟನಾದರೋ ಮೇಲಿಂದ ಮೇಲೆ ಚಿತ್ರಗಳನ್ನು ಶೃಂಗರಿಸಿ ಕಥೆಯನ್ನು ಹೇಳುತ್ತಾನೆ. ಆದುದರಿಂದಲೇ ಆತನ ಕಥೆಯು ಮುಂದೆ ಸಾಗತಕ್ಕದ್ದಲ್ಲ, ಅದು ವರ್ಣಕಾಂತಿಯಿಂದ ಕೂಡಿದ್ದು. ಚಿತ್ರಗಳಾದರೂ ವಿಶೇಷಸಂಬಂಧವುಳ್ಳವುಗಳಾಗಲಿ, ಧಾರಾವಾಹಿಕವಾಗಿರುವುವಾಗಲಿ ಅಲ್ಲ." "ಬಾಣಭಟ್ಟನಿಗೆ ಒಂದು ವೇಳೆ ಕಥೆಯನ್ನು ಹೇಳಬೇಕೆಂಬ ಸ್ಪಷ್ಟವಾದ ಉದ್ದೇಶವಿದ್ದಿದ್ದರೂ ಆತನು ಭಾಷೆಯ ದೊಡ್ಡ ಗೌರವಕ್ಕೆ ಲಾಘವವನ್ನುಂಟುಮಾಡಿ ಎಲ್ಲಿಯೂ ಕಥೆಯನ್ನು ಓಡಿಸಿಕೊಂಡು ಹೋಗಿಲ್ಲ. ಸಂಸ್ಕೃತ ಭಾಷೆಯನ್ನು ಅನುಚರರಿಂದೊಡಗೂಡಿದ ಚಕ್ರವರ್ತಿಯಂತೆ ಮುಂದು ಮಾಡಿಕೊಂಡು ಕಥೆಯು ಕಣ್ಣಿಗೆ ಬೀಳದಂತೆ ಅದರ ಹಿಂದೆ ಛತ್ರಿಯನ್ನು ಹೊತ್ತುಕೊಂಡು ಹೋಗುತ್ತದೆ. ಭಾಷೆಯ ರಾಜಮರ್ಯಾದೆ ಹೆಚ್ಚುವುದಕ್ಕೆ ಕಥೆಯಿಂದಲೂ ಸ್ವಲ್ಪ ಪ್ರಯೋಜನವುಂಟು; ಆದುದರಿಂದಲೇ ಅದಕ್ಕೆ ಅವಕಾಶ ಸಿಕ್ಕಿರುವುದು; ಅಷ್ಟೇ ಹೊರತು ಅದನ್ನು ಯಾರೂ ಕಣ್ಣೆತ್ತಿ ನೋಡುವುದಿಲ್ಲ." (ಪ್ರಾಚೀನ ಸಾಹಿತ್ಯ — ಕಾದಂಬರೀ ಚಿತ್ರ.)

ಬಾಣಕವಿ ಕಾದಂಬರಿಯನ್ನು ಪೂರ್ಣವಾಗಿ ರಚಿಸಲಿಲ್ಲ. ಚಂದ್ರಾಪೀಡನು ಕಾದಂಬರಿಯ ಪ್ರಥಮ ಸಂದರ್ಶನವನ್ನು ಹೊಂದಿ ಉಜ್ಜಯಿನಿಗೆ ಹಿಂದಿರುಗುವವರೆಗೆ ಮಾತ್ರ ಬರೆದಿದ್ದನು. ಮಿಕ್ಕದ್ದನ್ನು ಆತನ ಮಗನಾದ ಭೂಷಣಭಟ್ಟನು ಬರೆದು ಗ್ರಂಥವನ್ನು ಪೂರ್ಣಮಾಡಿದನು. ಆದಕಾರಣವೇ ಈ ಕಾವ್ಯದ ಪೂರ್ವಾರ್ಧದಲ್ಲಿ ಕಂಡು ಬರುವ ಕವಿತಾಕೌಶಲವು ಉತ್ತರಾರ್ಧದಲ್ಲಿ ಕಂಡು ಬರುವುದಿಲ್ಲ. ಬಾಣಕವಿ ತನ್ನ ಮಾಯದ ಕುಂಚವನ್ನು ಬೀಸಿದನೆಂದರೆ ಅಸಂಭವವಾದದ್ದು ಸಂಭವವಾಗಿ

ತೋರುವುದು. ಗಿಳಿ ವಿದ್ವಾಂಸನಂತೆ ರಾಜನನ್ನು ಹೊಗಳುವುದಕ್ಕಾಗಿ
ಒಂದು ಕವನವನ್ನು ಕಟ್ಟುವುದು ; ಕಾವ್ಯದ ಬಹು ಭಾಗದ ಕಥೆಯನ್ನು
ವಿದ್ವಾಂಸರಿಗಿಂತಲೂ ಚೆನ್ನಾಗಿ ಹೇಳುವುದು. ಇದೆಲ್ಲವೂ ಗಿಳಿಗೆ ಸಾಧ್ಯವೇ
ಎಂದು ಕೇಳುವವರಾರು ? ಅದೇ ಮಾಯದ ಕುಂಚವೇ ಕಲ್ಪಿತವಾದ
ದ್ದನ್ನು ಸಹಜವಾದದ್ದೆಂದು ಬೋಧೆಯಾಗುವಂತೆ ಮಾಡುವುದು.
ಕಾದಂಬರಿ, ಮಹಾಶ್ವೇತೆ, ಚಂದ್ರಾಪೀಡ, ಶುಕನಾಸ, ಜಾಬಾಲಿ
ಮುಂತಾದ ಕವಿಕಲ್ಪಿತ ಪಾತ್ರಗಳು ಚರಿತ್ರೆಯ ವ್ಯಕ್ತಿಗಳಂತೆ, ನಿಜವಾಗಿ
ನೋಡಿದ ಜನರಂತೆ, ಚಿರಸ್ಥಾಯಿಯಾಗಿ ವಾಚಕರ ಹೃದಯದಲ್ಲಿ ನೆಲೆ
ಗೊಳ್ಳುವುವು. ಕಾದಂಬರಿ ಚಂದ್ರಾಪೀಡನನ್ನು ನೋಡಿದಾಗ ಆಕೆಗೆ
ಆತನಲ್ಲಿ ಅನುರಾಗವುಂಟಾಗುವುದಷ್ಟೆ. ಆ ಅನುರಾಗವನ್ನು ಕವಿ ಎಷ್ಟು
ಸೂಕ್ಷ್ಮವಾಗಿ, ಎಷ್ಟು ಸ್ಫುಟವಾಗಿ, ಎಷ್ಟು ಕೋಮಲವಾಗಿ ಚಿತ್ರಿಸಿರು
ವನು ! ಆ ಪ್ರಣಯದ ಬೆಳವಣಿಗೆಯನ್ನು ಎಷ್ಟು ಸಹಜವಾಗಿ, ಎಷ್ಟು
ಸಂಪೂರ್ಣವಾಗಿ ವರ್ಣಿಸಿರುವನು ! ಆದರೂ ಒಂದು ದೃಷ್ಟಿಯಿಂದ
ಮಹಾಶ್ವೇತೆಯೇ ಕಾದಂಬರಿಗಿಂತಲೂ ಹೆಚ್ಚಾಗಿ ಕಾವ್ಯಪಾಠಕರ ಹೃದಯ
ದಲ್ಲಿ ಸ್ಥಾನವನ್ನು ಪಡೆಯುತ್ತಾಳೆ. ಪಾಠಕರು ಆಕೆಯನ್ನು ಮೊದಲು
ನೋಡುವುದು ಸಿದ್ಧಾಯತನದಲ್ಲಿ ; ಶಿವ ಸಾನ್ನಿಧ್ಯದಲ್ಲಿ ; ವೀಣಾವಾದನ
ಮಾಡುತ್ತಿರುವಾಗ. ಆಕೆ ಸುಂದರಿ, ಯೌವನಶಾಲಿನಿ, ಸುಕುಮಾರಿ,
ಆದರೆ ತಪಸ್ವಿನಿ. ಆಕೆಯ ಗುಣಗಾಂಭೀರ್ಯವೂ, ಸರಳಸ್ವಭಾ
ವವೂ ದೊಡ್ಡ ನಡತೆಯೂ ಆಕೆಯನ್ನು ಪೂಜ್ಯಳನ್ನಾಗಿ ಮಾಡಿವೆ.
ತಾನು ಪತಿವಿರಹದುಃಖಿತೆಯಾದರೂ ಕಾದಂಬರಿಯ ಸುಖಸಾಧನೆ
ಯಲ್ಲಿ ಅತ್ಯಂತ ಉತ್ಸಾಹದಿಂದ ತೊಡಗಿದ ಆಕೆಯನ್ನು ನೋಡಿದವರು
ಯಾರು ತಾನೆ ಆಕೆಗೆ ತಲೆಬಾಗರು ? ಕಾದಂಬರಿಯ ಮುಖ್ಯರಸವು
ಶೃಂಗಾರವಾದರೂ ಅದರಲ್ಲಿ ನಿರೂಪಿತವಾಗಿರುವ ಪ್ರಣಯವು
ಗಂಭೀರವಾದದ್ದು ; ಶುದ್ಧವಾದದ್ದು ; ಪವಿತ್ರವಾದದ್ದು. ಕಾದಂ
ಬರೀ ಮಹಾಶ್ವೇತೆಯರು ಶೃಂಗಾರಸಾರರಾದರೂ ಪತಿವ್ರತೆಯರು,
ತಪಸ್ವಿನಿಯರು. ಜಗತ್ತಿನ ಸಾಹಿತ್ಯದಲ್ಲಿ ಬಹು ಭಾಗವು ಪ್ರಣಯವನ್ನು
ನಿರೂಪಿಸುವುದೇ ಆಗಿದೆ. ಈ ಪ್ರಣಯ ಸಾಹಿತ್ಯದಲ್ಲಿ ಪ್ರಥಮ ಸ್ಥಾನ
ವನ್ನು ಪಡೆಯಲರ್ಹವಾದ ಗ್ರಂಥಗಳಲ್ಲಿ ಕಾದಂಬರಿಯೂ ಒಂದಾಗಿದೆ

## ಪರಿವರ್ತನದ ವಿಮರ್ಶೆ

ನಾಗವರ್ಮನ ಪರಿವರ್ತನಕಾರ್ಯದ ವಿಚಾರವಾಗಿ ಒಂದೆರಡು ಮಾತನ್ನು ಹೇಳಬಹುದು. ಮೂಲ ಸಂಸ್ಕೃತ ಗ್ರಂಥವು ಗದ್ಯದಲ್ಲಿದೆ. ಅದನ್ನು ನಾಗವರ್ಮನು ಕನ್ನಡದಲ್ಲಿ ಚಂಪೂ ರೂಪವಾಗಿ ಪರಿವರ್ತಿಸಿರುತ್ತಾನೆ. ಒಂದು ದೃಷ್ಟಿಯಿಂದ ಹೀಗೆ ಮಾಡಿರುವುದು ಅನುಕೂಲವೆಂದೇ ಹೇಳಬೇಕು. ಗದ್ಯದಲ್ಲಿದ್ದದ್ದನ್ನು ಗದ್ಯಪದ್ಯವಾಗಿ ಬರೆದರೆ ಕಂಡ ಹಾಗೆ ವೈವಿಧ್ಯವುಂಟಾಗುತ್ತದೆ. ಅಲ್ಲದೆ ಗದ್ಯ ವಾಕ್ಯಕ್ಕೆ ಮಿತಿಯಿಲ್ಲ. ಬಾಣನಲ್ಲಂತೂ ವಾಕ್ಯಗಳು ಅನೇಕವಾಗಿ ತುಂಬ ಲಂಬಿಸಿರುತ್ತವೆ. ಪದ್ಯಕ್ಕೆ ಒಂದು ಎಲ್ಲೆಯುಂಟು. ಆದಕಾರಣ ಮೂಲದ ವಾಕ್ಯಗಳನ್ನು ಅಲ್ಲಲ್ಲಿ ಕತ್ತರಿಸಿ ಬೇರೆ ಬೇರೆ ವಾಕ್ಯಗಳನ್ನು ಮಾಡಬೇಕಾಗುತ್ತದೆ. ಓದುವವನ ದೃಷ್ಟಿಯಿಂದ ಇದೂ ಒಂದು ಸೌಕರ್ಯವೇ. ಕೆಲವು ವೇಳೆ ಗದ್ಯದಲ್ಲಿ ಸಂಗ್ರಹವಾಗಿರುವುದನ್ನು ಪದ್ಯದ ಭರ್ತಿಗಾಗಿ ಹಿಗ್ಗಲಿಸಬೇಕಾಗಿಯೂ ಬರಬಹುದು. ಇದರಿಂದ ವಿಶೇಷ ಬಾಧಕವೇನೂ ಇಲ್ಲ.

ಕಾವ್ಯದಲ್ಲಿ ಶಬ್ದವಿರುತ್ತದೆ, ಅರ್ಥವಿರುತ್ತದೆ. ಒಂದು ಭಾಷೆಯಲ್ಲಿನ ಕಾವ್ಯದ ಅರ್ಥವನ್ನು ಮತ್ತೊಂದು ಭಾಷೆಗೆ ತರುವುದು ಸಾಧ್ಯವಾಗಬಹುದು. ಹೀಗೆ ಮಾಡಬೇಕಾದರೆ ಪರಿವರ್ತನಕಾರನು ಮೂಲ ಗ್ರಂಥದ ಭಾವಗಳನ್ನೂ ಅರ್ಥವನ್ನೂ ಚೆನ್ನಾಗಿ ಗ್ರಹಿಸಿರಬೇಕು. ತಾನು ಯಾವ ಭಾಷೆಗೆ ಪರಿವರ್ತಿಸುವನೋ ಅದರ ಪರಿಚಯವನ್ನು ಚೆನ್ನಾಗಿ ಪಡೆದಿರಬೇಕು. ಇಷ್ಟಿದ್ದರೆ ಮೂಲದ ಅಭಿಪ್ರಾಯವನ್ನು ತರುವುದು ಅಸಾಧ್ಯವಾಗಲಾರದು. ಶಬ್ದದಲ್ಲೇ ಅನೇಕ ವೇಳೆ ಒಂದು ಸೌಂದರ್ಯ, ಒಂದು ಶಕ್ತಿ ಇರುತ್ತದೆ. ಮತ್ತಾವ ಶಬ್ದದಿಂದಲೂ ಅದನ್ನು ಪ್ರಕಟಪಡಿಸಲು ಸಾಧ್ಯವಾಗದಿರಬಹುದು. ಅಂಥ ಸಂದರ್ಭಗಳಲ್ಲಿ ಆ ಶಬ್ದವನ್ನೇ ಪರಿವರ್ತನದಲ್ಲಿಯೂ ಹಾಕಬೇಕಾಗುತ್ತದೆ. ಅದು ಸಾಧ್ಯವಾಗದಿದ್ದಲ್ಲಿ ಅಷ್ಟುಮಟ್ಟಿನ ಮೂಲ ಗ್ರಂಥದ ಸ್ವಾರಸ್ಯವು ಕಡಮೆಯಾಗುತ್ತದೆ. ಪದವಿನ್ಯಾಸದಿಂದ ಉಂಟಾಗುವ ಸೌಂದರ್ಯದ ವಿಷಯದಲ್ಲಿಯೂ ಹೀಗೆಯೇ. ಸಂಸ್ಕೃತದಿಂದ ಕನ್ನಡಕ್ಕೆ ಒಂದು ಕಾವ್ಯವನ್ನು ಪರಿವರ್ತನೆಮಾಡುವಾಗ ಆವಶ್ಯಕವಾದೆಡೆಗಳಲ್ಲಿ ಸಂಸ್ಕೃತ ಪದಗಳನ್ನು ಕನ್ನಡದಲ್ಲಿ ಬಳಸಬಹುದಾದ್ದರಿಂದ, ಪರಿವರ್ತನಕಾರನು ಜಾಣನಾದರೆ

ಈ ಕಾರ್ಯವನ್ನೂ ತಕ್ಕಮಟ್ಟಿಗೆ ತೃಪ್ತಿಕರವಾಗಿಯೇ ಸಾಧಿಸಬಹುದು. ಇಂಥ ಸಂದರ್ಭಗಳಲ್ಲಿ ಪರಿವರ್ತನಕಾರನು ಉಚಿತವರಿತು ಸಂಸ್ಕೃತ ಕನ್ನಡ ಪದಗಳನ್ನು ಪ್ರಯೋಗಿಸಿರುವನೇ ಎಂದು ನೋಡಬೇಕು.

ನಾಗವರ್ಮನು ಸಾಧ್ಯವಾದಮಟ್ಟಿಗೂ ಸರಳವಾದ ಕನ್ನಡದಲ್ಲಿಯೇ ಗ್ರಂಥರಚನೆಮಾಡಿದ್ದಾನೆ. ಅವನು ಪರಿವರ್ತನಮಾಡುತ್ತಿರುವುದು ಸಂಸ್ಕೃತ ಗದ್ಯಕಾವ್ಯವೆಂದೂ ಅದರಲ್ಲಿ ಮಾರುದ್ದದ ಸಮಾಸ ಪದಗಳು ಹಲವಿವೆಯೆಂದೂ ಶಬ್ದಾರ್ಥಾಲಂಕಾರಗಳು ಮೇಲಿಂದ ಮೇಲೆ ಬರುತ್ತವೆಯೆಂದೂ ನೆನಪಿನಲ್ಲಿಟ್ಟಲ್ಲಿ ನಾಗವರ್ಮನ ಸಂಸ್ಕೃತಪ್ರಯೋಗವು ಅಷ್ಟೇನೂ ಹೆಚ್ಚಲ್ಲವೆನ್ನಬೇಕು. ಕಥೆ ಹೇಳುವಾಗ ಅವನ ಶೈಲಿ ತುಂಬಾ ತಿಳಿಯಾಗಿರುತ್ತದೆ. ವರ್ಣನೆಗಳು ಬಂದಾಗ ಸಂಸ್ಕೃತವನ್ನು ತುಂಬಿ ಸಮಾಸಗಳನ್ನು ಹೆಣೆಯುವುದು ಕಂಡು ಬರುತ್ತದೆ. ಇದು ಹೆಚ್ಚಾಗಿ ಕಂಡುಬರುವುದು ಗದ್ಯದಲ್ಲಿ. ಪದ್ಯಗಳಲ್ಲೂ ಒಂದೊಂದು ಸಲ ಬಾಣನ ಕಾದಂಬರಿಗೂ ಕನ್ನಡ ಕಾದಂಬರಿಗೂ ಸ್ಪರ್ಧೆ ಬೀಳುವುದುಂಟು. ಇದಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು.—

ಅನಂತರಂ ಚ ಸರಭಸಂ ಇತೋ ಗಜಯೂಥಪತಿ ಲುಲಿತ ಕಮಲಿನೀ ಪರಿಮಲಃ, ಇತಃ ಕ್ರೋಡಕುಲದಶ್ಯಮಾನ ಭದ್ರಮುಸ್ತಾರಸಾಮೋದಃ, ಇತಃ "ಕರಿಕಲಭ ಭಜ್ಯಮಾನ ಸಲ್ಲಕೀಕಷಾಯಬಂಧಃ, ಇತಃ ನಿಪತಿತ ಶುಷ್ಕಪತ್ರ ಮರ್ಮರ ಧ್ವನಿಃ, ಇತಃ ವನಮಹಿಷ ವಿಷಾಣಕೋಟಿ ಕುಲಿಶ ಭಿದ್ಯಮಾನ ವಲ್ಮೀಕಧೂಲಿಃ....

ಇದರ ಕನ್ನಡ ಪರಿವರ್ತನವನ್ನು ನೋಡಿ—

ಇದೆ ಪರ್ವಿತ್ತು ಮತಂಗಜೋಚ್ಚಲಿತ ಕಂಜಾಳೀರಜಸ್ತೋಮದಿಂ
ತಿದೆ ತೀಡಿತ್ತು ವರಾಹಸಂಕುಳ ದಳನ್ಮುಸ್ತೋತ್ಕರಾಮೋದದಿಂ
ತಿದೆ ಬಂದತ್ತಿಭಯೂಥನಾಥ ದಳಿತೋದ್ಯತ್ಸಲ್ಲಕೀ ಗಂಧದಿಂ
ತಿದೆ ತೋಱಿತ್ತು ಮದಾಂಧಸೈರಿಭಖುರಪ್ರೋದ್ಧೂತರೇಣುವ್ರಜಂ

ಕನ್ನಡ ಪರಿವರ್ತನಕ್ಕಿಂತಲೂ ಸಂಸ್ಕೃತ ಮೂಲವೇ ಸುಲಭವಾಗಿರುವುದಲ್ಲವೆ ?

ಅಲ್ಲದೆ ಗದ್ಯರೂಪದಲ್ಲಿರುವುದನ್ನು ಪದ್ಯಕ್ಕೆ ಅಳವಡಿಸುವಾಗ "ಇತಃ ನಿಪತಿತ ಶುಷ್ಕಪತ್ರ ಮರ್ಮರ ಧ್ವನಿಃ" ಎಂಬುದು ಕೈಬಿಟ್ಟು

ಹೋಗಿದೆ. ಹೀಗೆಯೇ ಅಲ್ಲಲ್ಲಿ ಕೆಲವು ವಾಕ್ಯಭಾಗಗಳು ಬಿಟ್ಟುಹೋ
ಗಿರುವುದು ಕಂಡುಬರುತ್ತದೆ. ಇದಕ್ಕೆ ಒಂದು ಉದಾಹರಣೆಯನ್ನು
ಇಲ್ಲಿ ಕೊಟ್ಟಿದೆ.—

ತೇನ ಚ ಕರ್ಣಾವತಂಸೀಕೃತಾಂ ವಸಂತದರ್ಶನಾನಂದಿ
ತಾಯಾಃ ಸ್ಮಿತ ಪ್ರಭಾಮಿವ ವನಶ್ರಿಯಃ, ಮಲಯಮಾರುತ
ಗಮನಾರ್ಘ ಲಾಜಾಂಜಲಿರಿವ ಮಧುಮಾಸಸ್ಯ, ಯೌವನಲೀಲಾ
ಮಿವ ಕುಸುಮಲಕ್ಷ್ಮ್ಯಾಃ, ಸುರತಪರಿಶ್ರಮ ಸ್ವೇದಜಲ ಕಣಕಾವ
ಲೀಮಿವ ರತೇಃ, ಧ್ವಜಚಿಹ್ನ ಚಾಮರ ಪಿಚ್ಛಿಕಾಮಿವ ಮನೋಭವ
ಗಜಸ್ಯ, ಮಧುಕರ ಕಾಮುಕಾಭಿಸಾರಿಕಾಂ ಕೃತ್ತಿಕಾ ತಾರಾಸ್ತಬ
ಕಾನುಕಾರಿಣೀಂ ಅಮೃತಬಿಂದು ನಿಸ್ಯಂದಿನೀಂ ಅದೃಷ್ಟಪೂ
ರ್ವಾಂ ಕುಸುಮಮಂಜರೀಂ ಅದ್ರಾಕ್ಷಂ.

ಇದರ ಕನ್ನಡ ಪರಿವರ್ತನವು ಹೀಗಿದೆ—

ಸ್ಮರಕಾಂತಾ ರತಘರ್ಮಬಿಂದು ಚಯವೋ ಮೀನಾಂಕ ಮತ್ತೇಭಚಾ
ಮರಮೋ ನಂದನಲಕ್ಷ್ಮಿಯೊಳ್ನಗೆಯೊ ತಾಂ ಮಂದಾನಿಲಂ ತೆಂಕಣಿಂ
ಬರೆ ಚೈತ್ರಂ ಕುಡುವರ್ಘ್ಯಲಾಜತತಿಯೋ ಪೇಳೆಂಬಿನಂ ಪುಷ್ಪಮಂ
ಜರಿಯಂ ತನ್ನಸಿಕರ್ಣಪೂರಕಮನತ್ಯಾಶ್ಚರ್ಯದಿಂ ನೋಡಿದೆಂ ॥

ಇಲ್ಲಿ, ಮೂಲದ ಹಲವು ಭಾವಗಳನ್ನು ಕವಿ ಸಂಗ್ರಹಿಸಿ ಒಂದು ವೃತ್ತದಲ್ಲಿ
ಅಡಕ ಮಾಡಿದ್ದಾನೆ. ಒಂದೆರಡು ಭಾವಗಳು ಕೈಬಿಟ್ಟುಹೋಗಿವೆ.
ಕವಿ ಕೆಲವನ್ನು ಆರಿಸಿಕೊಂಡು ಕೆಲವನ್ನು ಕೈಬಿಟ್ಟಿರುವನೆಂದು ಹೇಳ
ಬೇಕಷ್ಟೆ. ಈ ವಿಷಯದಲ್ಲಿ ಅವನು ತನ್ನ ವಿಮರ್ಶನ ಬುದ್ಧಿಯನ್ನು ಸರಿ
ಯಾಗಿ ಉಪಯೋಗಿಸಲಿಲ್ಲವೆನ್ನಿಸುತ್ತದೆ. ಉತ್ಪ್ರೇಕ್ಷೆಗಳನ್ನು ಉಳಿಸಿ
ಕೊಂಡ ಕವಿ ''ಕೃತ್ತಿಕಾ ತಾರಾಸ್ತಬಕಾನುಕಾರಿಣೀಂ'' ಎಂಬ ಸಹಜ
ವಾದರೂ ಪರಮ ಸುಂದರವಾದ ಉಪಮೆಯನ್ನು ಕೈಬಿಟ್ಟಿರುವುದನ್ನು
ಮೆನಾವು ಚ್ಚಲಾರೆವು.

ಹೀಗೆ ಅಲ್ಲಲ್ಲಿ ಕವಿ ಎಡವಿರುವನಾದರೂ ಮೂಲದ ಭಾವಗಳನ್ನು
ಸಂಗ್ರಹಿಸುವಾಗ ಹಲವು ಕಡೆ ವಿವೇಚನೆಯನ್ನುಪಯೋಗಿಸಿದ್ದಾನೆ.
ಒಂದು ಭಾಗವು ಪುನರಾವೃತ್ತವಾಗಿದ್ದರೆ, ಒಂದು ವರ್ಣನೆ ತುಂಬ
ಲಂಬಿಸಿದ್ದರೆ, ಅಲ್ಲಿ ತನ್ನ ಕತ್ತರಿಯನ್ನು ಉಪಯೋಗಿಸುತ್ತಾನೆ. ಕೆಲವು

ವೇಳೆ ಮೂಲದಲ್ಲಿನ ಯಾವುದಾದರೂ ಸಂದರ್ಭವು ಉಚಿತವಲ್ಲವೆಂದು ತನಗೆ ತೋರಿದರೆ ಅದನ್ನು ಬಿಟ್ಟು ತನ್ನ ಜಾಣ್ಮೆಯನ್ನು ಪ್ರಕಟಪಡಿಸಿರುವುದೂ ಉಂಟು. ಉದಾಹರಣೆಗೆ—ವೈಶಂಪಾಯನನೆಂಬ ಗಿಳಿಮರಿ ಇದ್ದ ಮರದಡಿಗೆ ಬೇಡರ ಪಡೆ ಬಂದಾಗ, ತಾನು ಬೇಡರನ್ನು ಕಾಣುವುದಕ್ಕೂ ಅವರ ವಿಚಾರವನ್ನು ತಿಳಿಯುವುದಕ್ಕೂ ಅದೇ ಮೊದಲನೆಯ ಸಲವಾಗಿದ್ದರೂ ರೆಕ್ಕೆಕೂಡ ಇನ್ನೂ ಬಲಿತಿಲ್ಲದ ಆ ಮರಿಗಿಳಿ ನೀತಿಜ್ಞನಾದ ವೃದ್ಧನಂತೆ ವ್ಯಾಧವೃತ್ತಿಯ ದೋಷಗಳನ್ನೆಲ್ಲಾ ತಾನು ಕಾಣದಿದ್ದರೂ ಕೇಳದಿದ್ದರೂ ಪಟ್ಟಿಹಾಕುತ್ತದೆ. ಅದರ ಛಾಯಲ್ಲಿ ಈ ಮಾತುಗಳು ಒಪ್ಪುವುದಿಲ್ಲವೆಂದು ತಿಳಿದು ನಾಗವರ್ಮನು ತನ್ನ ಪರಿವರ್ತನದಲ್ಲಿ ಅದನ್ನು ಸಂಪೂರ್ಣವಾಗಿ ಕೈಬಿಟ್ಟಿರುವಂತೆ ತೋರುತ್ತದೆ.

ಅನೇಕವೇಳೆ ಕವಿ ಮೂಲದಲ್ಲಿರುವುದನ್ನು ಅಲ್ಲಲ್ಲಿ ಬಿಡುವನಾದರೂ ಅಪೂರ್ವವಾಗಿ ಮೂಲದಲ್ಲಿರುವುದನ್ನು ವಿಸ್ತರಿಸಿ ಹೊಸದನ್ನು ಸೇರಿಸುವುದೂ ಉಂಟು. ಇದಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು.—

> ಏಕತ್ರ ಖಲು ಮದನ ಮಧುಮಾಸ ಮಲಯಮಾರುತ ಪ್ರಭೃತಯಃ ಸಮುನ್ನತಾಃ. ಏಕತ್ರ ಚಾಯಂ ಪಾಪಕಾರೀ ಚಂದ್ರಹತಕೋ ನ ಶಕ್ಯತೇ ಸೋಢುಂ. ಇದಂ ಅತಿದುರ್ವಿಷಹ ಮದನವೇದನಾತುರಂ ಚ ಮೇ ಹೃದಯಂ.

ಇದು ಈ ಪದ್ಯದಲ್ಲಿ ಹೀಗೆ ಪರಿವರ್ತಿತವಾಗಿದೆ—

> ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮ
> ತ್ತಿತ್ತ ಮದೋತ್ಕಕೋಕಿಲ ಕದಂಬಕವೆಯ್ದೆ ವಿಜೃಂಭಿಸಿತ್ತು ತಾ
> ನಿತ್ತಲಡರ್ದ ಚಂದ್ರಹತಕಂ ತಲೆದೋಱಿದನೋವೊ ಕೆಟ್ಟೆನೀ
> ಚಿತ್ತಜತಾಪವಗ್ಗಲಿಸಿದಪ್ಪುದು ಮದ್ಧೃದಯಾಂತರಾಳದೊಳ್ ॥

ಇಲ್ಲಿ "ಮದೋತ್ಕಕೋಕಿಲ ಕದಂಬಕ" ಎಂಬ ಭಾಗವು ಮೂಲದಲ್ಲಿಲ್ಲ. ಇದು ನಾಗವರ್ಮನು ಸೇರಿಸಿರುವುದು. ಉಚಿತವಾಗಿಯೂ ಇದೆ. "ಪ್ರಭೃತಯಃ" ಎಂಬ ಮೂಲದ ಪದವು ಈ ಭಾಗವನ್ನು ಸೇರಿಸುವುದಕ್ಕೆ ಅವಕಾಶವನ್ನು ಕೊಡುತ್ತದೆ. ಪದ್ಯವನ್ನು ತುಂಬುವುದಕ್ಕಾಗಿ ಕವಿ ಕೆಲವೆಡೆಗಳಲ್ಲಿ ಹೀಗೆ ಹೊಸ ವಿಷಯಗಳನ್ನು ಸೇರಿಸಿದ್ದರೂ ಸೇರಿಸಿರಬಹುದು;

ಮತ್ತೆ ಕೆಲವೆಡೆಗಳಲ್ಲಿ ಮೂಲದಲ್ಲಿರುವುದನ್ನು ಹಿಗ್ಗಲಿಸಿರಬಹುದು. ಹೀಗೆ ಹಿಗ್ಗಲಿಸಿರುವುದು ಕೆಲವೆಡೆಗಳಲ್ಲಿ ಭಾವಕ್ಕೆ ಪುಷ್ಟಿಯನ್ನು ಕೊಡುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ನಾಗವರ್ಮನು ಮೂಲಗ್ರಂಥವನ್ನು ಹೆಜ್ಜೆ ಹೆಜ್ಜೆಗೂ ಅನುಸರಿಸಿದ್ದಾನೆ. ಆದರೂ ಅವನದು "ಮಕ್ಷಿಕಾ ಮಕ್ಷಿ" ಪರಿವರ್ತನವಲ್ಲ. ಮೂಲದ ವಾಕ್ಯಸರಣಿಯನ್ನೇ ಸಾಮಾನ್ಯ ವಾಗಿ ಅನುಸರಿಸಿದರೂ ಆಗಾಗ ಛಂದಸ್ಸಿನ ಸೌಕರ್ಯಕ್ಕಾಗಿಯೋ ಭಾಷಾಮರ್ಯಾದೆಯನ್ನು ಕಾಪಾಡಿಕೊಳ್ಳುವುದಕ್ಕಾಗಿಯೋ ವಾಕ್ಯ ಗಳನ್ನು ಹಿಂದುಮುಂದು ಮಾಡಲು ಹಿಂಜರಿಯುವುದಿಲ್ಲ. ಕೆಲವುವೇಳೆ ಮೂಲದ ಕೆಲವು ಭಾಗಗಳನ್ನೇ ಕೈಬಿಡುತ್ತಾನೆ. ಒಂದೆರಡು ಕಡೆ ತಾನೇ ಸ್ವತಂತ್ರವಾಗಿ ವಿಸ್ತರಿಸುವುದೂ ಉಂಟು. ಆದರೆ ಇವೆಲ್ಲವೂ ಸಣ್ಣ ಸಣ್ಣ ವ್ಯತ್ಯಾಸಗಳು. ಇವುಗಳಿಂದ ಮೂಲದ ಸ್ವಾರಸ್ಯಕ್ಕೆ ಕುಂದುಬರುವುದು ಕಡಮೆಯೆಂದೇ ಸಾಮಾನ್ಯವಾಗಿ ಹೇಳಬಹುದು.

## ಗ್ರಂಥಪಾಠ

ಈ ಸಂಗ್ರಹವನ್ನು ಕುರಿತು ಮುಖ್ಯವಾದ ಕೆಲವು ಸಂಗತಿಗಳನ್ನು ಇಲ್ಲಿ ತಿಳಿಸಬೇಕಾಗಿದೆ. ಪ್ರಧಾನಸಂಪಾದಕರು ತಮ್ಮ ಮುನ್ನುಡಿಯಲ್ಲಿ ಹೇಳಿರುವಂತೆ ವಿದ್ಯಾರ್ಥಿಗಳ ಪಾಠಕ್ಕೆ ಪ್ರಮಾಣವು ಅತಿ ವಿಸ್ತಾರದಂತೆ ಇರಬೇಕಾದದ್ದು ಸಂಗ್ರಹದ ಒಂದು ಮುಖ್ಯೋದ್ದೇಶ. ಈ ಉದ್ದೇಶ ಸಾಧನೆಗಾಗಿ ಕಥಾಸೂತ್ರಕ್ಕೆ ಅವಶ್ಯಕವಲ್ಲವೆಂದು ತೋರಿದ ಭಾಗ ಗಳನ್ನು, ಅವು ಬೇರೆ ದೃಷ್ಟಿಗಳಿಂದ ಎಷ್ಟೇ ಚೆನ್ನಾಗಿದ್ದರೂ, ಕೆಲವುಕಡೆ ಸಂಪೂರ್ಣವಾಗಿ ಕೈಬಿಟ್ಟಿದೆ ; ಕೆಲವುಕಡೆ ಸಂಗ್ರಹಿಸಿದೆ. ಅಲ್ಲದೆ, ಅಲ್ಲಲ್ಲಿ ಪದ್ಯಗಳಲ್ಲಿರುವ ಕೆಲವು ಮಾತುಗಳನ್ನು ಮಾತ್ರ ಆರಿಸಿ, ಜೋಡಿಸಿ ಗದ್ಯ ವಾಗಿ ಬರೆದಿದೆ. ಇಷ್ಟಾದರೂ ಈ ಸಂಗ್ರಹವು ಸ್ವಲ್ಪ ದೊಡ್ಡದಾಗಿದೆ ಯೆಂದೇ ಹೇಳಬೇಕು. ಕರ್ಣಾಟಕ ಕಾದಂಬರಿಯಲ್ಲಿ ಇತರ ಚಂಪೂ ಕಾವ್ಯಗಳಲ್ಲಿರುವಂತೆ ಆಶ್ವಾಸವಿಭಾಗಗಳಿಲ್ಲ; ಪೂರ್ವಭಾಗ ಉತ್ತರಭಾಗ ಎಂದು ಎರಡು ಭಾಗಗಳು ಮಾತ್ರ ಇವೆ. ಪಾಠಕರ ಸೌಕರ್ಯಕ್ಕಾಗಿ ಈ ಸಂಗ್ರಹವನ್ನು ಐಂಟು ಪರಿಚ್ಛೇದಗಳಾಗಿ ವಿಂಗಡಿಸಿ ಅವುಗಳಿಗೆ ಉಚಿತವಾದ ಹೆಸರುಗಳನ್ನು ಕೊಟ್ಟಿದೆ.

ಕರ್ಣಾಟಕ ಕಾದಂಬರಿಯ ಶುದ್ಧಪಾಠವನ್ನು ಗೊತ್ತುಮಾಡಲು ಆವಶ್ಯಕವಾದ ಹಸ್ತಲಿಖಿತ ಪ್ರತಿಗಳು ದೊರೆಯದಿರುವುದರಿಂದ ಬಿ. ಮಲ್ಲಪ್ಪನವರಿಂದ ಮುದ್ರಿತವಾಗಿರುವ ಗ್ರಂಥದಲ್ಲಿಯ ಪಾಠವನ್ನೇ ಸಾಮಾನ್ಯವಾಗಿ ಅನುಸರಿಸಿದೆ. ಕೆಲವೆಡೆಗಳಲ್ಲಿ ಸಂಸ್ಕೃತ ಗ್ರಂಥವನ್ನು ನೋಡಿ, ಕೆಲವೆಡೆಗಳಲ್ಲಿ ಓರಿಯಂಟಲ್ ಲೈಬ್ರರಿಯಲ್ಲಿರುವ ಹಸ್ತಲಿಖಿತ ಪ್ರತಿಯನ್ನು ನೋಡಿ, ಮತ್ತೆ ಕೆಲವೆಡೆಗಳಲ್ಲಿ ಮುದ್ರಿತ ಪುಸ್ತಕದಲ್ಲಿ ಕೊಟ್ಟಿರುವ ಪಾಠಾಂತರಗಳ ಸಹಾಯದಿಂದ, ಅಲ್ಲಲ್ಲಿ ಕೆಲವು ವ್ಯತ್ಯಾಸ ಗಳನ್ನು ಮಾಡಿದೆ. ಈ ಗ್ರಂಥವು ಹನ್ನೊಂದನೆಯ ಶತಮಾನದಲ್ಲಿ ಹುಟ್ಟಿದ್ದಾಗಿ ತಿಳಿದುಬರುವುದರಿಂದ ಆ ಕಾಲದಲ್ಲಿ ಬಳಕೆಯಲ್ಲಿದ್ದ ಹಳ ಗನ್ನಡದ ಪ್ರಯೋಗಗಳನ್ನೇ ಉಪಯೋಗಿಸಿದೆ. ಉದಾಹರಣೆಗೆ--- ಮುದ್ರಿತ ಗ್ರಂಥದಲ್ಲಿ ಱಟಾಕ್ಷರ ಪ್ರಯೋಗವಿರಲಿಲ್ಲ ; ಳ ಕಾರವು ಮಾತ್ರ ಕಂಡುಬರುತ್ತದೆ. ಈ ಗ್ರಂಥದಲ್ಲಿ ಱಟವನ್ನು ಉಚಿತವಾದೆಡೆಗಳಲ್ಲಿ ಪ್ರಯೋಗಿಸಿದೆ.

ಈ ಗ್ರಂಥವನ್ನು ಸಂಗ್ರಹಿಸುವುದರಲ್ಲಿಯೂ ಅದರ ಪಾಠವನ್ನು ಗೊತ್ತುಮಾಡುವುದರಲ್ಲಿಯೂ ಅದರ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳಲ್ಲಿಯೂ ಉಚಿತವಾದ ಸಲಹೆಗಳನ್ನಿತ್ತು ವಿಶೇಷವಾಗಿ ಸಹಾಯ ಮಾಡಿದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಅವರಿಗೂ, ನನ್ನ ಸಂಪಾದಕ ಕಾರ್ಯದಲ್ಲಿ ಮೊದಲಿಂದ ಕೊನೆಯವರೆಗೂ ನನಗೆ ನೆರವಾಗಿ ನಿಂತ ಮಹಾರಾಜರವರ ಕಾಲೇಜಿನ ಉಪನ್ಯಾಸಕರೂ ಪಂಡಿತರೂ ಆದ ಶ್ರೀಮಾನ್ ಟಿ. ಎನ್. ಶ್ರೀಕಂಠಯ್ಯ, ಎಂ.ಎ., ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್, ಎಂ.ಎ., ಇವರಿಗೂ, ಮುದ್ರಣ ಕಾರ್ಯದಲ್ಲಿ ನನಗೆ ಬೇಕಾದಹಾಗೆ ಸಲಕರಣೆಗಳನ್ನು ಒದಗಿಸಿಕೊಟ್ಟ ವೆಸ್ಲಿ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸಿನ ಅಧಿಕಾರಿಗಳಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

**ಟಿ. ಎಸ್. ವೆಂಕಣ್ಣಯ್ಯ.**

# ಕರ್ಣಾಟಕ ಕಾದಂಬರೀ ಸಂಗ್ರಹ

## ೧. ಕಥಾವತರಣ

ಶ್ರೀಮನ್ನಾಗೇಂದ್ರಭೋಗ ಸ್ಫುರದರುಣಮಣಿದ್ಯೋತಿಸಂಧ್ಯಾ ನಿಬದ್ಧ
ಪ್ರೇಮಂ ಪ್ರೋದ್ಯತ್ತರಂಗೋಚ್ಚರದಮರನದೀಶೀಕರೋದಾರತಾರಾ
ರಾಮಂ ಹೇಮಪ್ರಭಾಪ್ರಸ್ಫುರಿತ ಗಿರಿಶ ಚಂಚಜ್ಜಟಾಜಾಲಜೂಟ
ವ್ಯೋಮಪ್ರೋದ್ಭಾಸಿ ಚಂದ್ರಂ ತ್ರಿಭುವನಜನಕಾನಂದಮಂ ಮಾಡು
ಗೆಂದುಂ ೧

ಸತತಗಭೀರವೃತ್ತಿಯಿನುದಾರತೆಯಿಂ ಜಗದೇಕಜೀವನ
ಸ್ಥಿತಿಯಿನತಿಪ್ರಸಾದಗುಣದಿಂ ರಸಭಾವವಿಳಾಸದಿಂ ಕವಿ
ಪ್ರತತಿನಿತಾಂತಸೇವ್ಯತೆಯಿನೊಂದಿ ಸರಸ್ವತಿಯುಂದದಿಂ ಸರ
ಸ್ವತಿ ದಯೆಗೆಯ್ಗೆ ನಮ್ಮೊಳನುಕೂಲತೆಯಿಂದವೆ ನಿರ್ಮಳತ್ವಮಂ ೨

ಬಾಣಂ ವಲ್ಲಭನಕ್ಕುಮೆಂದು ಪಡೆವಾ ವಾಗ್ದೇವಿಗಬ್ಜೋದ್ಭವಂ
ಜಾಣಿಂ ಬಾಣಿಯೆನಿಪ್ಪುದೊಂದು ಪೆಸರಂ ಮುನ್ನಿತ್ತನೆಂದಂದು ಪೋ
ಮಾಣಿನ್ನನ್ಯಕವಿಸ್ಮೃತಿವ್ಯಸನಮಂ ವಾಗ್ಜಾತಚಾತುರ್ಯಗೀ
ರ್ವಾಣಂ ತಾನೆನೆ ಸಂದ ಬಾಣನೆ ವಲಂ ವಂದ್ಯಂ ಪೆಱರ್ ವಂದ್ಯರೇ ೩

ಸತ್ಕೃತಿ ಸಂಸ್ಕೃತದಿಂದೆ ಜ
ಗತ್ಕೌತುಕಮಾಗಿ ಮತ್ತೆ ಕರ್ಣಾಟದೊಳಂ
ಸತ್ಕವಿನಿವಹಂ ಪೊಗೞೆ ಚ
ಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ ೪

ಕೃತಿಪತಿ ನರೇಂದ್ರಚಂದ್ರಂ
ಕೃತಿಯಂ ಪೇೞ್ದಂ ಬುಧಾಬ್ಜವನಕಳಹಂಸಂ
ಕೃತಿ ಕಾದಂಬರಿಯೆನೆ ಸ
ತ್ಕೃತಿಕಥಿತ ಕಥಾವತಾರಮೇಂ ಕೇವಳಮೋ ೫

ಇಳೆಯೊಳದೊರ್ವ್ವಸಿಂದ್ರನೆನೆ ಸಂದ ಸಮೃದ್ಧಿಯೊಳೊಂದಿ ಕೂಡಿ ತ
ನ್ನೊಳೆ ನೃಪಲಕ್ಷಣಂ ನೆಗಱೆ ದೋರ್ವ್ವಳದಿಂ ಚತುರಬ್ಧಿಮೇಖಲಾ
ವಳಯಿತ ಭೂಮಿಗಾದನೆಱೆಯುಂ ನೃಪತಿಪ್ರಭುಲೋಕಮಂ ನಿಜೋ
ಜ್ಜ್ವಳತರ ಕೀರ್ತ್ತಿಯಿಂ ನೆಱೆಯೆ ಮುದ್ರಿಸಿ ಶೂದ್ರಕನೆಂಬ ಭೂಭುಜಂ ೬

ಕಲಿಮಲಿನಕುಭೃತ್ಸಂಗದ
ಕಳಂಕಮಂ ಕರ್ಚಿ ಕಳೆಯಲೆಂದಾ ಭೂಮಂ
ಡಳಪತಿಯ ಖಡ್ಗಧಾರಾ
ಜಳದೊಳ್ ಸಾಮ್ರಾಜ್ಯಲಕ್ಷ್ಮಿ ಸಲೆ ನೆಲಸಿರ್ದಳ್ ೭

ಇದು ಕಲಿಭೀತಿಯಿಂ ಕೃತಯುಗಂ ಬಲಿದಿರ್ದಪುದೆಂಬ ಸಚ್ಚರಿ
ತ್ರದಿನೆಸೆದಾವಗಂ ತ್ರಿಭುವನಪ್ರಸವಕ್ಕಿದು ಭೂಮಿಯೆಂಬ ಪೆಂ
ಪೊದವಿರೆ ಪೆರ್ಮೆಯಿಂ ವಿದಿಸೆಯೆಂಬುದು ನಚ್ಚಿನ ರಾಜಧಾನಿಯಾ
ದುದು ಜಗದೊಳ್ ವಿಶೇಷಮೆನಲೊಪ್ಪುವ ಮಾಳವ ಮಧ್ಯದೇಶದೊಳ್ ೮

ಕಂತುಗೆ ತಾನೆ ಮೇಲೆನಿಸಿಯುಂ ಪೊಸಜವ್ವನದಿಂದಮೊಂದಿಯುಂ
ಸಂತತಿ ವೇಟ್ಕುಮೆಂದು ಸಚಿವರ್ ಸಲೆ ಪೇೞೆಯುಮೊಳ್ಪುವೆತ್ತ ಶು
ದ್ಧಾಂತನಿತಂಬಿನೀನಿವಹಮೊಲ್ದುಳಸುತ್ತಿರೆಯುಂ ಧರಾಂಗನಾ
ಕಾಂತನ ಚಿತ್ತಮೇಕೞಿಯೆನೊಂದದಣಂ ಸುರತೋಪಭೋಗಮಂ ೯

ಅದೊರ್ಮೆ ಕಲವಾದ್ಯದಿಂ ಸರಸ ವಾದಗೀತಂಗಳಿಂ
ದದೊರ್ಮೆ ಮೃದುಪಂಚಮಾಂಚಿತ ವಿಪಂಚಿಕಾನಾದದಿಂ
ದದೊರ್ಮೆ ರಸಭಾವಕಂಚುಕಿತ ಚಿತ್ರಕರ್ಮಂಗಳಿಂ
ದದೊರ್ಮೆ ವಿವಿಧಪ್ರಕಾರ ಮೃಗಯಾವಿನೋದಂಗಳಿಂ ೧೦

ಅದೊರ್ಮೆ ನವಕಾವ್ಯಬಂಧರಚನಾವಿಶೇಷಂಗಳಿಂ
ದದೊರ್ಮೆ ವರವೀರವಿಶ್ರುತಕಥಾಪುರಾಣಂಗಳಿಂ
ದದೊರ್ಮೆ ಮುನಿಮಂಡಳೀಪದಪಯೋಜಶುಶ್ರೂಷೆಯಿಂ
ವಿದಗ್ಧಜನವಲ್ಲಭಂ ಕಳೆವನಿಂತು ಪೊೞ್ತಂ ನೃಪಂ ೧೧

ಅಂತು ವನಿತಾಸುಖಪರಾಙ್ಮುಖಂ ಪೊೞ್ತುಗಳೆಯುತ್ತಿರ್ದೊಂದು ದಿವಸಂ ಪ್ರಭಾತಸಮಯದೊಳೊಡ್ಡೋಲಗದೊಳಿರ್ಪಾಗಳ್ ಪ್ರತೀಹಾರಿ ಬಂದು ನಯದಿಂ

ಜನತಾಧೀಶ್ವರ ಬಿನ್ನಪಂ ತ್ರಿದಶಲೋಕಕ್ಕೇಱುತಿರ್ದಾ ತ್ರಿಶಂ
ಕುನರಾಧೀಶನ ಲಕ್ಷ್ಮಿ ಶಕ್ರನ ಮಹಾಹುಂಕಾರದಿಂ ಬಿೞ್ದಳೆಂ
ಬಿನೆಗಂ ವಿಶ್ರುತ ದಕ್ಷಿಣಾಪಥದಿನೊರ್ವಳ್ ಕನ್ನೆ ಚಂಡಾಲೆ ದ
ರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್ ೧೨

ಎಂದು ಬಿನ್ನವಿಸೆ ರಾಜಾಧಿರಾಜಂ ರಾಜಲೋಕದ ಮೊಗಮಂ ನೋಡಿ ದೋಷಮೇಂ ಬರ್ಕೆಂಬುದುಂ ಚಂಡಾಲಕನ್ನೆಯುಂ ಪುಗವೇೞ್ದಾಗಳ್

ದನುಜರ ಕಯ್ಯೊಳಿರ್ದಮರ್ದನಾವಗಮೀಯ್ಕೊಳಲೆಂದು ದೈತ್ಯಮ
ರ್ದನನೆನಿಸಿರ್ದವಂ ಕಪಟದಿಂದೆ ವಿಲಾಸಿನಿಯಾದ ವೇಷಮಂ
ನೆನೆಯಿಸಿದಪ್ಪುದೀ ಪಸಿಯ ಬಣ್ಣಮಿವಳ್ಗೆನೆ ಚೆಲ್ವನಾಳ್ದು ಮೆ
ಲ್ಲನೆ ನಡೆತರ್ಪ ನೀಲಮಣಿಪುತ್ರಿಕೆಯಂದದಿನಾದಮೊಪ್ಪಿದಳ್ ೧೩

ಅಂತು ಪುಗುತರ್ಪಾಗಳ್

ಜರೆಯಿಂದಂ ಕೂಡಿ ಬೆಳ್ಪಂ ತಳೆಯೆ ತಲೆ ದಳದ್ರಕ್ತನೀರೇಜಮಂ ಪೋ
ಲ್ತಿರೆ ಕಣ್ ವ್ಯಾಯಾಮದಿಂ ಮೆಯ್ ಸಡಿಲವೆಸೆಯೆ ಮಾತಂಗನಾಗಿರ್ದುಮೇಂ ನಿ
ಷ್ಠುರಮುತ್ತಾಕಾರಮೀತಂಗೆನಿಸಿ ಧವಳವಾಸೋನ್ವಿತಂ ಮತ್ತಮೊರ್ವಂ
ಬರುತಿರ್ದಂ ಚೆನ್ನೊಳಾತ್ಮೋಚಿತಮೆನಿಸಿದ ಚಾತುರ್ಯದಿಂದಾರ್ಯವೇಷಂ ೧೪

ಅಲ್ಲಿಂ ಪೆಱಗೆ

ಅರಗಿಳಿಯ ಪಸುರ್ಪಿಂದಂ
ಮರಕತಮಯಮೆನಿಪ ಪೊನ್ನ ಪಂಜರಮಂ ಪೊ
ತ್ತಿರದೆೞ್ತಂದಂ ಚಂಡಿಕೆ
ಮೆರಸಿದ ಚಂಡಾಲಬಾಲಕಂ ಮತ್ತೊರ್ವಂ ೧೫

ಅಂತವರ್ಪರಸು ಬಂದಾ ಏಱುಂಜವ್ವನೆಯ ರೂಪಾತಿಶಯಮನೆಮೆ ಯಿಕ್ಕದೆ ಶೂದ್ರಕಂ ನೋಡುತ್ತುಮತಿವಿಸ್ಮಿತಚಿತ್ತನಾಗಿ ತನ್ನೊಳಿಂತೆಂದಂ

ಇದು ಮೂಲೋಕಕ್ಕಮೊಂದಚ್ಚರಿಯೆನಿಸಿದುದಸ್ಥಾನದೊಳ್ ರೂಪಮಂ ಮಾ
ಡಿದ ವಾಣೀಶಪ್ರಯತ್ನಂ ತ್ರಿಭುವನಜನಕಾಶ್ಚರ್ಯಮಪ್ಪಂತು ರೂಪಂ
ಪದಪಿಂದಂ ಮಾಡಿಯುಂ ನೋಡಿಯುಮಸದೃಶದೊಳ್ ಗರ್ಹಿತಸ್ಪರ್ಶಸಂಭೋ
ಗದೊಳಿಂತೀ ದುಷ್ಟಚಂಡಾಲರ ಕುಲದೊಳ್ ಗೇಗೆಯ್ದನೋ ದುರ್ವಿವೇಕಂ ೧೬

ಇದನಱಿವೆಂ ಕಮಲಭವಂ
ಮೊದಲೊಳ್ ಮಾತಂಗಿಯೆಂದು ತಾಂ ಮುಟ್ಟದೆ ಮಾ
ಡಿದನಕ್ಕುಂ ಕಯ್ಯೊಳ್ ಮು
ಟ್ಟಿದೊಡಿಂತಗ್ಗಳಿಸಿ ತೋರ್ಕುಮೇ ಲಾವಣ್ಯಂ ೧೭

ಎಂದಾ ರೂಪಿಂಗಚ್ಚರಿವಡುತಿರ್ದ ನೃಪರೂಪಚಂದ್ರನಂ ನೋಡಿ ಚಂಡಾಲಕನ್ಯೆ ಪೊಡಮಟ್ಟು ಮಣಿಕುಟ್ಟಿಮತಳದೊಳ್ ಕುಳ್ಳಿರ್ಪುದುಮೊಡನೆಯಾ ಮಾತಂಗಂ ವಿಹಂಗಸಂಗತ ಪಂಜರಮಂ ಪಿಡಿದು ನರೇಂದ್ರನಂ ದೇವ ಬಿನ್ನಪಮೆಂದಿಂತೆಂದಂ

ಇದು ವಿದಿತಾರ್ಥಶಾಸ್ತ್ರನಿದಶೇಷಪುರಾಣಕಥಾಪ್ರವೀಣನಿಂ
ತಿದು ಸಕಲಾಂಗವೇದವಿದನಿಂತಿದು ಕಾವ್ಯಕಲಾಪ್ರಗಲ್ಭನಿಂ
ತಿದು ವಿತತಾದಿವಾದ್ಯವಿದನಿಂತಿದು ಚಿತ್ರಕಥಾಭಿರೂಪನಿಂ
ತಿದು ಗಜವಾಜಿಲಕ್ಷಣವಿಚಕ್ಷಣನೀ ಶುಕನುದ್ಗತಾಂಶುಕಂ ೧೮

ವನಿತೆಯ್ರರೊಲವಿನ ಕಲಹದ
ಮುನಿಸುಗಳಂ ತಿಳಿಪುವೆಡೆಯೊಳತಿಚತುರಂ ತಾ
ನೆನಿಸಿರ್ದುಂ ವೈಶಂಪಾ
ಯನನೆನಿಪುದು ಪೆಸರೊಳೀ ಶುಕಂ ಭುವನಪತೀ ೧೯

ದೇವರೆ ಭಾಜನಂ ವಿದಿತರತ್ನಚಯಕ್ಕೆ ದಲೆಂದು ತನ್ನ ಸ
ದ್ಭಾವದಿನೆನ್ನನಾಳ್ದನ ಮಗಳ್ ಪದಪಿಂದಮೆ ತಂದಳಿಂತಿದಂ
ದೇವರ ಪಾದಪಂಕರುಹದಲ್ಲಿಗೆ ಕನ್ಯೆಯದೊಂದು ಭಕ್ತಿಯಂ
ಭಾವಿಸಿ ನೀನಿದಂ ನೃಪತಿ ಕಯ್ಕೊಳವೇಳ್ಪುದು ರಾಜಕೀರಮಂ ೨೦

ಎಂದೊಡನೆಯಾ ಮಾತಂಗಂ ಬಿನ್ನಪಿಸಿ ಶುಕಪಂಜರದ ಬಾಗಿಲಂ ತೆಱೆದು ಮುಂದಿರಿಸಲಾ ಶುಕಂ ರಾಜಾಭಿಮುಖನುಮುನ್ನಮಿತ ದಕ್ಷಿಣಚರಣನುಮತಿಸ್ಪಷ್ಟವರ್ಣಸಂಸ್ಕಾರಮಪ್ಪ ವಾಣಿಯಿಂ ಕೃತಜಯಶಬ್ದನುಮಾಗಿ

ತಿರ್ಯಗ್ಜಾತಿಯೊಳೀ ಚಾ
ತುರ್ಯಮಿದೇನೆಂದು ಸಭೆಯ ಚಿತ್ತದೊಳತ್ಯಾ
ಶ್ಚರ್ಯಮೊದವುವಿನಮರಸಂ
ಗಾರ್ಯೆಯನೋದಿತ್ತದೊಂದನಾ ಶುಕರತ್ನಂ ೧೧

"ಸ್ತನಯುಗಮಶ್ರುಸ್ನಾತಂ
ಸಮೀಪತರವರ್ತಿಹೃದಯಶೋಕಾಗ್ನೇಃ
ಚರತಿ ವಿಮುಕ್ತಾಹಾರಂ
ವ್ರತಮಿವ ಭವತೋ ರಿಪುಸ್ತ್ರೀಣಾಂ" ೧೨

ವೀರರ ವೀರ ವಿಮುಕ್ತಾ
ಹಾರಂ ಭವದರಿವಧೂಸ್ತನದ್ವಿತಯಂ ಕ
ಣ್ಣೀರಿಂ ಮಿಂದೆರ್ದೆಗಿರ್ಚಿಂ
ದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ ೧೩

ಅಂತದನರಸಂ ಕೇಳ್ದು ಚೋದ್ಯಂಬಟ್ಟು ಕುಮಾರಪಾಲಿತನೆಂಬ ಮಂತ್ರಿಮುಖ್ಯನನಿಂತೆಂದಂ

ಗಿಳಿಗೀ ಸ್ಪಷ್ಟಾಕ್ಷರೋಚ್ಚಾರಣಮು ಮೊದಲೊಳಾಶ್ಚರ್ಯಮೆಂಬಲ್ಲಿ ಮತ್ತ
ಗ್ಗಳಿಸುತ್ತುಂ ವರ್ಣಮಾತ್ರಾಸ್ವರರುಚಿರಮುಮಾದಾರ್ಕೆಯಂ ವ್ಯಕ್ತದಿಂದ
ಸ್ಖಳಿತಂ ತಾನೆನ್ನನುದ್ದೇಶಿಸಿ ಸುಲಲಿತಮೆಂಬಂದದಿಂದೋದಿ ತೋರ್ದೀ
ಗಿಳಿಗೆಂತೋ ಬುದ್ಧಿಪೂರ್ವಂ ಮನುಜರ ತೆಱದಿಂದೋದುಮಾಶ್ಚರ್ಯಮಾಗರ್ ೧೪

ಎಂಬುದುಂ ಕುಮಾರಪಾಲಿತನಿಂತೆಂದಂ

ಶುಕಶಾರಿಕಾದಿವಿಹಗ
ಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು ಕೌ
ತುಕಮಲ್ಲದೀಗಳುಂ ಕೌ
ತುಕಮಿಂತಿಂತೇಕೆ ದೇವ ನೀನಱಿಯದುದೇ ೧೫

ಇದು ಪೂರ್ವಜನ್ಮಸಂಸ್ಕಾ
ರದೆ ಮೇಣ್ ಪುರುಷಪ್ರಯತ್ನದಿಂದಂ ಮೇಣಿಂ
ತುದಯಿಸುಗುಮೆಲ್ತು ಸಂಸ್ಕಾ
ರದೊಳತಿಶಯಚಿತ್ರಮಲ್ತು ಭಾವಿಸಿ ನೋಡಲ್ ೨೬

ಅದಲ್ಲದೆಯುಂ

ನುಡಿ ಮುನ್ನಂ ಸ್ಪಷ್ಟಮಾಗಿರ್ದುದು ಬಟಿಕಮಿದಸ್ಪಷ್ಟಮಾಯ್ತಾಗಿ
ಶಾಪಂಗುಡಲಲ್ಲಿಂದಿತ್ತಲಿಂತೀ ಶುಕಸಮಿತಿಗೆ ತಚ್ಛಾಪದಿಂದಾನೆಗಳ್ಗಂ
ನುಡಿಯಲ್ಕಾಗಂದಿನಿಂ ನಾಲಗೆ ಮಡಿದುದೆನುತ್ತಿಂತು ಪೇೞುತ್ತಿರಲ್ಕಾ
ಗಡೆ ಪೊಣ್ಮಿತ್ತಲ್ಲಿ ಮಧ್ಯಂದಿನಸಮಯಸಮುದ್ಭೂತ ಶಂಖಪ್ರಣಾದಂ ೨೭

ಅದಂ ಕೇಳ್ದು ಮಜ್ಜನಕ್ಕುಜ್ಜುಗಂಗೆಯ್ದೊಡ್ಡೋಲಗಮಂ ಪರೆಯ ಲ್ವೇೞ್ದು ಅತಿ ಸಂಭ್ರಮದಿನೊಡನೇೞ್ವ ಮಹೀಪಾಲರೊಳಂ ಮುಂದೆ ಬಂದೋದುವ ಮಂಗಳ ಪಾಠಕರ ಜಯಜಯಾದಿ ಮಧುರರವಂಗಳೊ ಳಮತಿಕ್ಷುಭಿತಮಾದಾಸ್ಥಾನಮಂಟಪದಿಂ ಮನುಜೇಂದ್ರಂ ಪೊಱಮಟ್ಟು ಸಕಳರಾಜಲೋಕಮಂ ವಿಸರ್ಜಿಸಿ ಚಂಡಾಲಕನ್ಯೆಯಂ ವಿಶ್ರಮಿಸಲ್ವೇೞ್ದು ವೈಶಂಪಾಯನನಂ ಮಹಾದೇವಿಯರರಮನೆಗೆ ಕಟಿಪಿಮೆಂದಾ ತಾಂಬೂ ಲಕರಂಕವಾಹಿನಿಗೆ ಬೆಸಸಿ ಕೆಲಬರರಸುಮಕ್ಕಳ್ವೆರಸೊಳಗಂ ಪೊಕ್ಕು ಮಜ್ಜನಭೋಜನಾನಂತರದೊಳ್

ಬಳಸಿರ್ದಭ್ರಾಳಿಯಿಂದಂ ತುಹಿನಗಿರಿಶಿಲಾಪಟ್ಟಮೆಂಬಂತೆ ಚೆಲ್ವಾ
ದ ಲತಾಂತಂ ತಳ್ತ ಶಯ್ಯಾಶ್ರಿತ ಸಿತಮೃದುಳಪ್ರಚ್ಛದಚ್ಛನ್ನ ಶಯ್ಯಾ
ತಲದೊಳ್ ಕಿಬ್ಬಾಳವಳ್ ಮೆಲ್ಲನೆ ಕರತಳಪದ್ಮಂಗಳಿಂ ಪಾದಪದ್ಮಂ
ಗಳನಂದೊತ್ತುತ್ತಿರಲ್ ಶೂದ್ರಕನೃಪತಿ ಸುಖಾಸೀನನಾಗಿರ್ದನಾಗಳ್ ೨೮

ಅನಂತರಮನತಿದೂರದೊಳಿರ್ದ ದೌವಾರಿಕೆಯಂ ವೈಶಂಪಾಯ ನನನೊಡಂಗೊಂಡು ಬರ್ಪುದೆಂದು ತದ್ವೃತ್ತಾಂತಾಕರ್ಣನಕೌತುಕದಿಂ ಬೆಸಸೆ

ಪಡಿಯಱಿತಿ ವಿನಯವಿನಮಿತೆ
ಪೊಡವಟ್ಟಾಕ್ಷಣದೊಳಂತೆ ಮುದದಿಂದಂ ಕ
ನ್ನಡವಕ್ಕಿಯ ಪಂಜರಮಂ
ತಡೆಯದೆ ತಂದವನಿಪತಿಯ ಮುಂದಿಟಿಪುವುದುಂ ೨೯

ಏನೇನಭಿಮತಮಂ ಪೇೞ್
ನೀನಾಸ್ವಾದಿಸಿದೆ ದೇವಿಯರಮನೆಯೊಳೆನ
ಲ್ಕೇನೇನಭಿಮತಮಂ ಪೇ
ೞಾನಾಸ್ವಾದಿಸಿದನಲ್ಲ ನೃಪಕುಲತಿಲಕಾ ೩೦

ಕಳಕಂಠಲೋಚನಚ್ಛವಿ
ವಿಳಾಸಮಂ ತಳೆದ ನೀಲಪಾಟಳಜಂಬೂ
ಫಳ ಮಧುರರಸಮನೀಂಟಿದೆ
ನಿಳೇಶ ಪಿರಿದಟ್ಟಿಯಿಂ ಮನಂ ತಣಿವಿನೆಗಂ ೩೧

ಹರಿವಿದಳಿತ ಮದಗಜಕುಂ
ಭರಕ್ತಸಿಕ್ತಾರ್ದ್ರ ಮೌಕ್ತಿಕಪ್ರಕರದವೋಲ್
ಕರಮೆಸೆವ ದಾಡಿಮೀಬೀ
ಜರಾಜಿಯಂ ತೆಗೆದು ರಸವನಾಸ್ವಾದಿಸಿದೆಂ ೩೨

ಆದತ್ತಾಮಳಕಫಳಾ
ಸ್ವಾದನೆಯಿಂ ತೃಪ್ತಿ ದೇವ ಗಟಪುತ್ತಿರಲೇಂ
ಆದತ್ತಮೃತಂ ದೇವಿಯ
ರಾದರದಿಂ ತಮ್ಮ ಕಯ್ಯೊಳೂಡಿದರೆನ್ನಂ ೩೩

ಅಂತು ನುಡಿದ ವೈಶಂಪಾಯನನಂ ನರೇಂದ್ರನಿಂತೆಂದಂ

ಎಂತೆಂತು ನುಡಿಯೆ ವಿಸ್ಮಯ
ವಂತಂತೊದವಿಪುದು ಚಿತ್ತದೊಳ್ ಕೇಳಿದನ
ತ್ಯಂತಂ ನಿನ್ನಯ ನಿಜವೃ
ತ್ತಾಂತಮನೆನಗಱಿಯೆ ಪೇೞ್ವುದತಿಕೌತುಕಮಂ ೩೪

ನಿನ್ನಯ ದೇಶಮೆತ್ತಣದು ಪುಟ್ಟಿದೆಯೆಂತಭಿಧಾನಮಾವನಿಂ
ದಂ ನಿನಗಾಯ್ತು ವೇದನಿವಹ ಸ್ಮೃತಿ ಶಾಸ್ತ್ರ ಕಳಾಕಳಾಪ ಸಂ
ಪನ್ನತೆಯೆಂತು ಬಂದುದು ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾ
ದೋನ್ನತಿಯಾದುದೋ ಮಱಸಲೆಂದು ಪಿಹಂಗಮವೇಷಿಯಾದೆಯೋ ೩೫

ದೊರೆಕೊಂಡೆಯೆಂತು ಮುಂ ಪಂ
ಜರಬಂಧನಮಾದುದೆಂತು ನಿನಗೀ ಚಂಡಾ
ಲರ ಸಂಗತಿಯೆಂತಿಲ್ಲಿಗೆ
ಬರವಾಯಿತ್ತೆಂತು ಪೇಟಿದೆಲ್ಲಮನೀಗಳ್ ೩೬

ಎಂದು ಬೆಸಗೊಳೆ ವೈಶಂಪಾಯನಾಭಿಧಾನಶುಕಂ ಪೇೞಲ್ತಗುಳ್ದುದದೆಂತೆನೆ ಭೂದೇವಿಯ ರುಚಿರಕಟೀಸೂತ್ರಮೆಂಬಂತೆವೊಲೊಪ್ಪಂಬೆತ್ತ ವಿಂಧ್ಯಾಚಳದ ಪೇರಡವಿಯೊಳ್

ಕಡಲಂ ಪೀರ್ದನಗಸ್ತ್ಯನೆಂಬ ಪುರುಡಿಂ ಮತ್ತೊಂದನಬ್ಜೋದ್ಭವಂ
ಪಡೆದಂ ಪೆರ್ಗಡಲಂ ಮಹಾಪ್ರಳಯದೊಳ್ ದಿಕ್ಸಂಧಿಗಳ್ ಬಂಧಮಂ
ಬಿಡೆ ಬಿಟ್ಟಿತ್ತಿಳೆಗಾಗಸಂ ಧರಣಿಯಂ ಪೆರ್ಬಂದಿ ಕಟ್ಟಿತ್ತಿದೊಂ
ದೆಡೆ ನೀರ್ ತೀವಿತೆನಲ್ಕೆ ಪೆಂಪುವಡೆಗುಂ ಗುಣ್ಪಿಂದೆ ಪಂಪಾಸರಂ ೩೭

ಅದಱ ಪಡುವಣ ತಡಿಯೊಳ ದಶರಥಸುತನ ಶರಪ್ರಹಾರಜರ್ಜರಿತಮಪ್ಪ ತಾಳತರುಷಂಡಸಮೀಪದೊಳ್

ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತೆ ದಿಕ್ಚಕ್ರವಾಳಾಂ
ತರಮಂ ನೋಡಲ್ಕೆ ನೀಳ್ದಂತಿರೆ ಬೆಳೆದ ಮಹಾಶಾಖೆಗಳ್ ತಾಂಡವಾಡಂ
ಬರದೊಳ್ ನಾನಾವಿಧಂ ನರ್ತಿಪ ನಟನ ಭುಜಾದಂಡಮೋ ಪೇಟಿಮೆಂಬಂ
ತಿರಮೇಯಸ್ಕಂಧಮುಂ ಸಂಧಿಸೆ ಜರಠ ಮಹಾಶಾಲ್ಮಲೀವೃಕ್ಷಮಿರ್ಕುಂ ೩೮

ಭುವನತ್ರಯಮುಮನತ್ಯು
ತ್ಸವದಿಂದಂ ನೋಡಲಿದುವೆ ದಲ್ ವನದೇವೀ
ನಿವಹಕ್ಕೆ ಮಹಾಪ್ರಾಸಾ
ದವೆನಿಸಿ ತೋಱುವುದು ತನ್ನೊಳಾದುನ್ನತಿಯಿಂ ೩೯

ಮತ್ತಮದು ವಿಂಧ್ಯಾಚಳಸೋದರಮುಂ ದಂಡಕಾರಣ್ಯದಧಿಪತಿಯುಂ ವನಸ್ಪತಿಗಳ ನಾಯಕನುಮೆನಿಸಿತದಱಾ

ತಳಿರ್ಗಳಿಱುಂಬಿನಲ್ಲಿ ತುದಿಗೋಡ ಮೊದಲ್ಗಳ ತಾಣದಲ್ಲಿ ನಾ
ರ್ಗಳ ಪೊರೆಯಲ್ಲಿ ಪೋಟ್ಗಳೆಡೆಯಲ್ಲಿ ಕವಲ್ಗಣೆಯಲ್ಲಿ ಸುತ್ತಲುಂ
ಗಿಳಿಗಳ ಪಿಂಡುಗಳ್ ನೆರೆದು ಕೂಡಿಯುಮಲ್ಲಿ ಸಹಸ್ರಮುಂ ನಿರಾ
ಕುಳಮನುರಾಗದಿಂ ಪಲವು ದೇಶದೊಳಿರ್ಪುವು ಬಂದು ಭೂಪತೀ ೪೦

ಎಲವಂ ಮಡಲ್ತುದೆನೆ ಯೆಲೆ
ಕೆಲಕೆಲವಾಗಿರ್ದುಮೆಲೆಯ ಪುದುವಿಂದವೆ ಕ
ಟ್ತಲಿಸಿದವೊಲಿರ್ಪುದಂದ
ಗ್ಗಲಿಸಿದ ಗಿಳಿವಿಂಡುಗಳ ಪೊದಳ್ದ ಪಸುರ್ಪಿಂ ೪೧

ಅಂತಾ ಶುಕಸಂತತಿ ನಿ
ಶ್ಚಿಂತದಿನಿರ್ದಲ್ಲಿ ಜೀರ್ಣಕೋಟರ ವಿರಳಾ
ಭ್ಯಂತರದೊಳಿರ್ದುದೊಂದು ಶು
ಕಂ ತನ್ನಯ ಜಾಯೆವೆರಸು ಪರಿಣತವಯಸಂ ೪೨

ಆ ವೃದ್ಧಶುಕಂಗೊರ್ವನೆ
ದೈವಾಧೀನದೊಳೆ ಪುಟ್ಟಿದೆಂ ಪಾಪಿಯೆನಿ
ನ್ನೇವೇೞ್ದಪೆಂ ಪ್ರಸೂತ್ಯು
ದ್ಭಾವದಿನೆಮ್ಮವ್ವೆ ಕಟಿದಳಂತಾ ಕ್ಷಣದೊಳ್ ೪೩

ಅಂತು ಕಟಿಯೆ ಜಾಯಾವಿಯೋಗದಿಂ ದುಃಖಿತನಾಗಿಯುಮೆನ್ನ ತಂದೆ ಪುತ್ರಸ್ನೇಹದಿಂದಳವಿಗಟಿದ ಹೃದಯಶೋಕಮನಡಂಗಿಸಿರ್ದು ಮತ್ಪ್ರಾಣನಪ್ರಯತ್ನತತ್ಪರನಾಗಿ

ಕಟಿಲಲ್ ನಿಜತನುವೊಂದೆರ
ಡುಟಿಯುಲ್ ಗಱಿ ಪಿಟ್ಟು ಕುಟಿಯಲಾ ಕರ್ಣಂ ಜೋ
ಲ್ದಿಟಿಯಲ್ ಮುಯ್ಪುಗಳಾವಗ
ವಟಿಯಲ್ ಬಲಪಾಱದಂತು ಮುಪ್ಪಿಂ ಪಾಱಲ್ ೪೪

ಅಂತು ಮುಪ್ಪಿಂ ಪಾಱಲಾಱದೆ

ಪಕ್ಕಿಗಳಲ್ಲಿ ತಿಂದುೞಿದ ನೆಲ್ಗಳ ನುಚ್ಚುಗಳಂ ಫಲಂಗಳಂ
ಪಕ್ಕದೊಳಿರ್ದ ಗೂಡುಗಳಿನಾಯ್ದೆನಗಿಕ್ಕುವನಟ್ಟಿಱಿಂದೆ ತಾಂ
ಮಿಕ್ಕುದನುಂಡಪಂ ಕಡಿದು ನೆಲ್ಗಳನಂಟಿದ ತಾಱವಣ್ಣ ಬ
ಣ್ಣಕ್ಕೆಣೆಯಾದ ಚಂಚುಪುಟದಿಂದಮೆ ಮಜ್ಜನಕಂ ಮಹೀಪತೀ ೪೫

ಅಂತಾತನೆನಗೆ ಕುಟುಕನಿಕ್ಕಿ ಮಿಕ್ಕುದಂ ತನಗಶನಮಂ ಮಾಡಿ ಜೀವಿಸುತ್ತುಮಿರೆಯಿರೆ

ಚಕಿತೋದ್ಯತ್ಪಕ್ಷಿ ಪಕ್ಷಸ್ವನದೊಳಮಿರ್ದ ಕೋಳಾಹಳಧ್ವಾನದಿಂ ಕೊ
ರ್ವಿ ಕರೀಂದ್ರೋದ್ಭೂತ ಫೂತ್ಕಾರದೆ ಪುದಿದು ಗುಹಾನೀಕಸುಪ್ತೋತ್ಥಸಿಂಹ
ಪ್ರಕರಪ್ರೋನ್ನಾದದಿಂ ತಳ್ತುಪಗತ ವನದೇವೀಚಯಸ್ವಾಂತ ಸಂತ್ರಾ
ಸಕರಂ ಪೊಣ್ಮಿತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತಘೋಷಂ
೪೬

ಆಂ ಜನಕನೆಱಕೆಯೊಳಗಿ
ರ್ದಂಜುತ್ತುಂ ಕೇಳುತಿರ್ದೆನಿರ್ದನ್ನೆವರಂ
ಬಿಂಜದಡವಿಯೊಳಗೆಲ್ಲಂ
ನಂಜಿನ ಮಱೆ ಕೊಂಡು ಬಿಟ್ಟ ತೆಱನಾಯ್ತಾಗಳ್ ೪೭

ಅದು ಪೊಱಗು ಮಾಣ್ದ ಕಾರ್ಗಾ
ಲದ ಮುಗಿಲದು ಕಡೆಪಮುಡುಗಿದಂಬುಧಿಯೆಂಬಂ
ದದಿನಡವಿ ಮೂಗುವಟ್ಟಿ
ರ್ದುದು ಬೇಟೆಯೊಳಾದ ಕಳಕಳಂ ಪಿಂಗುವಿನಂ ೪೮

ಅಂತಾ ಕಳಕಳರವಮಡಂಗಲೊಡನೆಯುದ್ಭೂತವಿಸ್ಮಯನಾಗಿ ತಂದೆಯಿರಿಸಿದ ಪಕ್ಷಸಂಪುಟದೊಳಗಣಿಂ ಪೊಱಮಟ್ಟಿದೇನೆನುತ್ತುಮಾಂ ಪೊಟಲೊಳಗಿರ್ದು ಮೆಲ್ಲನೆ ನಿಳ್ಕಿನಿಳ್ಕಿ ಪೆಳ್ಪಳಿಸಿ ನೋೞ್ಪನ್ನೆಗಮಲ್ಲಿ

ಜರೆಯಿಂದಂ ಪುರ್ಬು ಜೋಲಲ್ ತೆರೆ ತರತರದಿಂದುಣ್ಮೆ ಪೊಣ್ಮಲ್ಕೆ ಗಂಟಲ್
ಮುರಿದತ್ತೊಂದೊಂದಱೊಳ್ ತಳ್ತೊಗೆಯೆ ಸೆರೆಗಳೊತ್ತಂಬದಿಂ ಬರ್ಪ ಕೆಮ್ಮಿಂ
ಬಿರಿಯಲ್ ಬೆಟ್ಟಂಗಳಾ ಬಟ್ಟೆಯೊಳಿನಿತಡಗುಂ ತನ್ನ ಕಯ್ಯಾಸರದೆಂದಾ
ತುರಿಸುತ್ತುಂ ಭ್ರಾಂತಿಯಿಂದೆನ್ನಯ ಮರದಡಿಯೊಳ್ ನಿಂದನೊರ್ವಂ ಪುಳಿಂದಂ
೪೯

ನಿಂದು ಕಣ್ಗಳಿಂ ಶುಕನಿಕಾಯದ ಜೀವಮನೆಯ್ದೆ ಪೀರ್ವವೊಲಾ ಮರನಂ ನೋಡುತ್ತುಮದನೇಕತಾಳೋತ್ಸೇಧಮುಮಭ್ರಂಕಷಮುಂ ದುರಾರೋಹಮುಮಾದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದಡರ್ದೇಱಿ

ಜಳಜದ ಮೊಗ್ಗೆಯಂತೆ ಮುಗುಳಂತೆಳಎಕ್ಕೆಯ ಕಾಯ್ಗಳಂತೆ ಶಾ
ಲ್ಮಲಿ ಕುಸುಮಂಗಳಂತೆ ತರುನೀಡನಿಕಾಯದಿನೆಲ್ಲವಾಗಳಾ
ಗಳೆ ಗಱಿವೊಯ್ವು ಕಣ್ದೆಱೆವ ತುಪ್ಪುಳೊಡರ್ಚುವ ಕೆಂಪನಾಳ್ವ ಕೋ
ಮಳ ಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ ೫೦

ಪಱಿದುವು ಗಱಿ ಚಂಚುಗಳುಂ
ಮುಱಿದುವು ತಲೆ ನಡುಗುತಿರ್ದುವೆನ್ನದೆ ತರದಿಂ
ಬಱಿಗೆಯ್ಯುತಿರ್ದನಾ ಮಾ
ಯ್ದಱಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ ೫೧

ಅಂತವೆಲ್ಲವನೊಡನೊಡನೆ ಗಂಟಲಂ ಮುಱಿದು ನೆಲಕ್ಕೀಡಾಡುತ್ತಿರ್ದ ಬೇಡನಂ ತೊಟ್ಟನೆ ನೋಡಿ ಪ್ರಾಣಾಪಹಾರಮುಮಪ್ರತೀಕಾರಮುಮಪ್ಪ ಕಷ್ಟಮಂ ಕಂಡು ಭಯಂಗೊಂಡು

ಬಸವಳಿದು ಕಣ್ಣನೀರಿಂ
ದೆಸೆಗೆಟ್ಟೆಲೆ ಮಗನೆ ನಿನ್ನನಿನ್ನಾರ್ ಕಾಯು
ಲ್ಕೆ ಸಮರ್ಥರೆನುತ್ತಾಗಳ್
ಬಸುಱಿಯ್ದುಂ ನೋಡಿ ಜನಕನೆನ್ನಯ ಮೊಗಮಂ ೫೨

ನಿನ್ನಯ ತಾಯನುಯ್ವು ಪದದೊಳ್ ಜವನಕ್ಕಟ ನೋಡು ಕಂದ ಬಂ
ದೆನ್ನುಮನಂತೆ ಕೂಡಿದೊಡನೊಕ್ಕಲುಪ್ರೋಗಿಸನೇಕೆ ಬಯ್ತ್ತನಾಂ
ನಿನ್ನನೆ ನೋಡಿ ಶೋಕಮನಡಂಗಿಸಿ ಬಾಳ್ಕೆಯ ಲೇಸೆನುತ್ತಮಿ
ರ್ಪನ್ನೆಗಮಮ್ಮ ನಿನ್ನನೊಡಗೊಂಡು ಮುಱುಂಗುವ ಕಾಲಮಾದುದೋ ೫೩

ಎಂದು ಸ್ವೈರಿಸಲಾಱದೆ

ಇಱುಕಿ ತೊಡೆಯೆಡೆಯೊಳೆನ್ನಂ
ಪಱದೆಱಕೆಗಳಿಂದೆ ಮುಚ್ಚಿ ಮೋಹದೆ ತಾತಂ
ಮಱುಗುತ್ತಿರ್ಪಿನಮೆಯ್ದಿದ
ನಱಗುಲಿ ಕರ್ಪೇಡನೆನ್ನ ಪೊೞಲಿಂಗಾಗಳ್ ೫೪

ಅಡಸುವ ಕಾಳದಂಡಮೆರೆಗೊಳ್ಳಿಸಿತೋರಗಮೆಂಬ ಶಂಕೆ ನೂ
ರ್ಮಡಿಸಿರೆ ಕಾಡ ಪಂದಿಗಳ ಬಲ್ಕಿಣದಿಂ ಪೊಲಸಂಟಿ ನಾರ್ಪ ಜೇ
ವ್ರೇಡೆಗಳ ಪುಣ್ಗಳಿಂ ತೊರೆವ ನೆತ್ತರ ಕಯ್ ನಡುಗಲ್ಕೆ ನೀಡಿ ಕೀ
ೞಿಡೆಯಿಡೆ ಗಂಟಲಂ ಮುಱಿದನೊರ್ವೆಯ ನಿರ್ಘೃಣನೆನ್ನ ತಂದೆಯಂ ೫೫

ಬೆಱೆತುಳಿದೆನಾಗಿಯುಂ ತೆನು
ಕಿಱಿದಾಗಿಯುಮತ್ತಮಾಯುಮುಂಟಾಗಿಯು ಮೇ
ಣಱಿಯಂ ಕಾಣಂ ತಂದೆಯ
ಗಱಿಯೊಳಗಿರ್ದವನನೆನ್ನನಂದು ನೃಶಂಸಂ ೫೬

ಅಂತು ಜೀವಮಂ ಬಿಟ್ಟು ಗೋಣೆಟಲ್ವೆನ್ನ ತಂದೆಯಂ ಮರದ
ಮೇಗಣಿಂ ನೆಲಕ್ಕೀಡಾಡಲಾನುಂ ತೊಡೆಯೆಡೆಯೊಳಿರ್ದೊಡನಂದು
ಸುಟ್ಟುರೆಯ ತಱಗೆಲೆಯಂತೆ ತ್ರಿಜ್ಜನೆ ತಿರುಗಿ ಬೀೞ್ವಲ್ಲಿಱುಂಕಿದೆಱಂಕೆ
ಯೊಳಗಣಿಂ ಸಿಡಿಲ್ದು ದೈವವಶದಿಂ ಗಾಳಿಯೊಳ್ ತೆರಳ್ದ ತಱಗೆಲೆಯ
ರಾಶಿಯೊಳ್ ಪೋಗಿ ಬಿೞ್ದು

ಕಟಿದಿರ್ದ ತಂದೆಯಂ ಬಿಸು
ಟಟಲುಮನಿನಿಸಱಿಯದೆಳವೆಯೊಳ್ ಪಾತಕನೆಂ
ಪಡೆಯ ತಱಗೆಲೆಗಳೊಳಗಿ
ರ್ದಟಿದೆಂ ಖಳನಿಟಿದು ಕಾಣ್ಗುಮೆಂಬೀ ಭಯದಿಂ ೫೭

ಅನ್ನೆಗಮಿತ್ತಲ್

ಇೞಿದು ಮರದಿಂದಮಾಗಳ್
ಕೆೞಗೆಲ್ಲಂ ಪರೆದು ಬಿೞ್ದ ಶುಕಸಂತತಿಯುಂ
ಗೞಗೞಿಸಿ ಕಟ್ಟಿ ನಡುಬೆ
ನ್ನಿೞಿವಿನೆಗಂ ಪೊತ್ತು ಪೋದನಾ ಮುದುಬೇಡಂ ೫೮

ಅಂತಾ ಬೇಡಂ ಬೇಡವಡೆಯುಂ ಬೞಿಸಂದು ಪೋಗೆವೋಗೆ

ತಂದೆ ಕೞಿದೞಲ ಬೇಗೆಯೊ
ಳಂ ದೂರದೆ ಬಿೞ್ದೊಂದು ಕಡುಸೇದೆಯೊಳಂ
ಬಂದೆನ್ನಂ ಪರವಶತೆಯೊ
ಳೊಂದಿಸಿದತ್ತಾಗಳಾ ಪಿಪಾಸೋದ್ರೇಕಂ ೫೯

ಗಱು ಪಾಱಲ್ಕಿಲ್ಲ ಕಾಲುಂ ಬಲಿಯವು ನಡೆಯಲ್ವೆಟ್ಟಿತೆಂಬಂತೆ ಮೂಗುಂ
ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಾಂ ಬೀೞುತುಂ ಪಕ್ಕಗೂಡಾ
ಗೊಱಗುತ್ತುಂ ಪೋಗಿ ಮಧ್ಯಾಹ್ನದ ಬಿಸಿಲಳುರಲ್ ಕಣ್ಮಲರ್ನಟ್ಟು ಸುಯ್ಗಳ
ಪೊಱಮಟೊಂದೊಂದನಟ್ಟುತ್ತಿರೆ ಪಿರಿದುಮೞಲ್ನೊಳಿಂತೆಂದೆನಾಗಳ್ ೬೦

ಬಸನಲೆತ್ತಂತುಮೆನಿಪ್ಪವಸ್ಥೆಗಳನೆಯ್ದುತ್ತಿರ್ಪಿನಂ ಜೀವಮಂ
ಬಿಸುಡಲ್ ಜೀವಿಗಪೇಕ್ಷೆ ಪುಟ್ಟದು ವಲಂ ಪೋ ಜೀವದಿಂ ಬಿಟ್ಟಪೇ
ಕ್ಷಿಸುವಂತಪ್ಪುದುಗಾಣೆನಿಂತು ಸಲೆ ತಾತಂ ದುಃಖಮೆಯ್ದಿರ್ದುದಿ
ಲ್ಲಸುವೆನ್ನಂ ಕೃಪೆಗೆಟ್ಟನಂ ಪೆಱನದೊರ್ವಂ ಸತ್ತವೋಲಿರ್ದನಂ ೬೧

ಎನ್ನಯ ತಾಯ ಸತ್ತೞಲನಾದವಡಂಗಿಸಿ ಮುಪ್ಪಿನೊಳ್ ಮರ
ಲ್ದೆನ್ನನೆ ನೋಡಿ ತತ್ತಿಯೊಡೆದಿಂದುವರಂ ಪಿಡಿದಿರ್ದು ಯತ್ನದಿಂ
ದಂ ನಡಪುತ್ತುಮಿರ್ದುದುಮನೊರ್ಮೆಯೆ ದಲ್ ಮಱೆದೀ ಕೃತಘ್ನನ
ಪ್ಪೆನ್ನಸು ನಿರ್ಘೃಣಂ ಬೞಿಸಲಲ್ಕಣಮಾಱದು ತಂದೆ ಸಾಯೆಯುಂ ೬೨

ಕಡುವೊಱಾತ್ತುದು ರವಿಯುಂ
ನಡುವಗಲೊಳ್ ನಿಂದು ಕೆದಱಿದಂ ಕರತತಿಯಿಂ
ಕಿಡಿಗಳನೆನೆ ಬಿಱುವಿಸಿಲುಂ
ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ ೬೩

ಬಟ್ಟೆಯ ದೂಳಿದೂವೆ ಮೊದಲಾದುದು ಪೋದಪೆನೆಂಬ ಮೆಯ್ ಜವಂ
ಗೆಟ್ಟು ಪಿಪಾಸೆಯಿಂ ಪೊಡರಲಾರ್ತಪುದಿಲ್ಲೆರ್ದೆಗೆಟ್ಟೆನೀಗಳೀ
ದಿಟ್ಟಿ ಮರಳ್ದು ನಂದಿದಪುದೆನ್ನುಮನಾನಱಿದಪ್ಪೆನಿಲ್ಲ ಪೋ
ಬೆಟ್ಟಿದನಾಗಿ ತಾನೆ ವಿಧಿ ಕೊಂದಪನಾಗಳೆ ಸಾಯದಿರ್ದೊಡಂ ೬೪

ಎಂದು ಚಿಂತಿಸುತ್ತಿರೆಯಿರೆ

ಪ್ರತ್ಯಾಸನ್ನದೊಳಿರ್ಪುದು
ಯತ್ಯಾಶ್ರಮಮಲ್ಲಿ ನೆಗಟ್ದ ಜಾಬಾಲಿಗಳೆಂ
ಬತ್ಯುತ್ತಮ ಯತಿಪತಿಗಳ
ಪತ್ಯಂ ಹಾರೀತನಾಮನಿರ್ಪನದೊರ್ವಂ ೬೫

ಆ ಮುನಿಕುಮಾರಕಂ ಮಿಾಯಲ್ ಬರುತಿರ್ದ ಬಟ್ಟೆಯೊಳ್ ಕಂಠಗತ
ಪ್ರಾಣನಾಗಿರ್ದೆನ್ನಂ ಕಂಡು

(ಗುಣಿಗಳ ಮನಮೆಂದುಮಕಾ
ರಣದೊಳೆ ಕರುಣಾರಸಾರ್ದ್ರಮಾರೊಳಮದುಕಾ
ರಣದಿಂದೆ ಮುನಿಕುಮಾರಾ
ಗ್ರಣಿ ಕರುಣಿಸಿ ಕೆಲದ ಮುನಿಕುಮಾರರ್ಗೆಂದಂ ೬೬

ಗಿಡುಗಂ ತಂದತ್ತೊ ಮೇಣ್ ಪೆರ್ಮರನ ತುದಿಯಿನೇಂ ಬಿಟ್ಟುದೋ ಸೇದೆಯೊಂದು
ಗ್ಗದದಿಂದಂ ಸುಯ್ ಪೊದಳ್ದುಣ್ಮಿಗಪುದು ನಡುಗುತ್ತಿರ್ದುವೀ ಕಣ್ಮಲರ್ ಬಾ
ಯ್ಬಿಡುತಿರ್ದತ್ತಕ್ಕಟಾ ಗೋಣಿಸು ನಿಲಲುಮಾರ್ತಪ್ಪುವಿಲ್ಲೆಯ್ದೆ ಜೀವಂ
ಬಿಡದನ್ನಂ ಬೇಗಮಿಂತೀ ಗಿಳಿಯ ಮಱಿಯನಬ್ಜಾಕರಕ್ಕುಯ್ವಮಾಗಳ್ ೬೭

ಎಂದಾಂಬೆರಸು ಕಮಳಾಕರಕ್ಕೆ ವಂದು ದಂಡಕಮಂಡಲುಗಳನೊಂ
ದೆಡೆಯೊಳಿರಿಸಿ

ಕುಡಿತೆಯೊಳೆ ತಂದು ನೀರಂ
ಪಿಡಿದೊಯ್ಯನೆ ತೆಱೆದು ತಾನೆ ಚಂಚೂಪುಟದಿಂ
ಕುಡಿಯಿಸುತಡಿಯಣ ತಾವರೆ
ಗೊಡೆಯೆಲೆಗಳ ತಳದ ನೆಟಲೊಳಿರಿಸಿದನೆನ್ನಂ ೬೮

ಅಂತೆನ್ನಂ ಸಪ್ರಾಣನಪ್ಪಂತು ಮಾಡಿ ಸಕಲಪರಿಶ್ರಮಂಗಳನಾಱಿಸಿ ಮುನಿಕುಮಾರಂ ಕೃತಸ್ನಾನನಾಗಿ ಪ್ರಾಣಾಯಾಮಪೂರ್ವಕಮಘಮರ್ಷಣಕ್ರಿಯೆಗಳಂ ನಿರ್ವರ್ತಿಸಿ ನಳಿನೀದಳಪುಟದೆ ಕೆಂದಾವರೆಯಲರ್ಗಳಿಂ ದಿವಸಕರಂಗರ್ಘ್ಯಮೆತ್ತಿ ಗೃಹೀತಧವಳವಲ್ಕಲನುಂ ನಿರ್ಧೌತಜಟಾಕಳಾಪನುಂ ಪೂರ್ಣಕಮಂಡಲಾಕಲಿತಕರತಳನುಮಾಗೆನ್ನಂ ಪರ್ಣಪುಟದೊಳ್ ತಳೆದು ನಿರ್ವರ್ತಿತನಿಯಮರಪ್ಪ ಮುನಿಕುಮಾರರ್ವೆರಸು ನಿಜಾಶ್ರಮಕ್ಕೆ ಪೋಗೆವೋಗೆ

ತನುವೆರಸುಯ್ಯಲ್ ಮುನಿಗಳ
ನನಲಂ ಸ್ವರ್ಗಕ್ಕೆ ಸೇತುಗಟ್ಟಿದನೆನೆ ಪಾ
ವನ ಹೋಮಧೂಮವೊಗೆಯಲ್
ಮುನಿಪಾಶ್ರಮಮೆನಗೆ ಕಾಣಲಾದತ್ತಾಗಳ್ ೬೯

ತಲೆವಾಗುತ್ತಿರ್ದುವೆಂಬಂತೆಱಪ ಲತೆಗಳಿಂದರ್ಚಿಸುತ್ತಿರ್ದುವೆಂಬಂ
ತಲರ್ಗಳ್ ತಳ್ತಲ್ಲುಗುತ್ತಿರ್ದವಿಳತರುನಿಕಾಯಂಗಳಿಂ ಕೂಡೆ ಬದ್ಧಾಂ
ಜಳಿಯಾಗುತ್ತಿರ್ದುವೆಂಬಂತೆಸೆವ ಕಿಸಲಯಾಬದ್ಧ ಸಂಭಗ್ನಶಾಖಾ
ಕುಲದಿಂ ಚೆಲ್ವಾದ ಪುಷ್ಪಾಶ್ರಮದ ರಚನೆಯಂ ನೋಡುತುಂ ಪೋದೆ
ನಾಗಳ್ ೭೦

ಜಲರುಹ ಬೀಜರಾಜಿಗಳನಾಱಿಪ ಪರ್ಣಕುಟೀರಕಂಗಳಂ
ನಿಲಿಸುವ ದಂಡಮೊತ್ತುವ ಮೃಗಾಜಿನಮಂ ಪೊಲುತಿರ್ಪ ಮುಂಜಮೇ
ಖಲೆಗಳನೊಪ್ಪಮಾಡುವ ಸಮಿತ್ಕುಶಮಂ ತರಪೋಪ ಧೌತವ
ಲ್ಕಲಮನಲುಂಬುವಕ್ಷಮಣಿಯಂ ಸಮೆವೀ ವ್ಯವಸಾಯಮೆತ್ತಲುಂ ೭೧

ಅತಿಥಿಯನಾದರಿಪ್ಪ ಪಿತೃದೈವಮನರ್ಚಿಪ ಧರ್ಮಶಾಸ್ತ್ರಸಂ
ಗತಿಗಳೊಳಿರ್ಪ ಯಜ್ಞವಿಧಿವೇಳ್ವ ಪುರಾಣಮನೋದುವಾಗಮ
ಪ್ರತತಿಗಳಂ ವಿಚಾರಿಸುವ ತತ್ತ್ವನಿರೀಕ್ಷಣೆಗೆಯ್ವ ಯೋಗದು
ನ್ನತಿಕೆಯನಪ್ಪುಕಯ್ವ ಮುನಿಸಂಘದಿನೊಪ್ಪುವುದಾ ತಪೋವನಂ ೭೨

ತಳಿರ್ಗಳಿಱುಂಬಿನೊಳ್ ತರದೆ ಪೇಱಿದ ಕೃಷ್ಣಮೃಗಾಜಿನಂಗಳಿಂ
ಜಳಕಲಶಂಗಳಿಂ ಮುನಿಕುಮಾರಿಯರಿಕ್ಕಿದ ಪಿಷ್ಟಚರ್ಚೆಯಿಂ
ಬಳಸಿಯುಮೇಣಶಾಬತತಿ ನೀರುಣಿ ಕಣ್ಗೊಳಿಪಾಳವಾಳಮಂ
ಡಳದಿನದೊಂದು ಮುಂದೆಸೆದು ತೋಱಿದುದಾಗಳಶೋಕಭೂರುಹಂ ೭೩

ಮತ್ತಂ ಗೋಮಯಾವಲಿಪ್ತ ಭೂತಲಮುಂ ಕುಸುಮೋಪಹಾರ ರಮಣೀಯಮುಂ ವಿಸ್ತೀರ್ಣತರಾವಕಾಶಮುಮೆನಿಸಿದ ರಕ್ತಾಶೋಕ ತರುವಿನ ತಣ್ಣೆಲೊಳ್

ಕುಳಶೈಳವ್ರಾತದಿಂದಂ ಬಳಸಿದ ಕನಕಕ್ಷ್ಮಾಧರೇಂದ್ರಂ ಸಮುದ್ರಾ
ವಳಿಯಿಂ ಸುತ್ತಿರ್ದ ಲೋಕಂ ಹುತವಹತತಿಯಿಂ ವೇಷ್ಟಿಸಿರ್ದಧ್ವರಂ ಪ್ರ
ಜ್ವಲಿತಾರ್ಕಾನೀಕದಿಂದಂ ಬಳಸಿದ ಗಗನಾಭೋಗಮೆಂಬಂದದಿಂ ಕ
ಣ್ಗೊಳಿಸುತ್ತುಂ ಯೋಗಿವೃಂದಾರಕರ ನಡುವೆ ಜಾಬಾಲಿಯೋಗೀಂದ್ರ
ನಿರ್ದಂ ೭೪

ಭುವನಪ್ರಸ್ತುತ್ಯರೆೞರಂದದೆ ತಪದೊಳ್ ಕರ್ಮಕ್ಷಯಂ ಗೆಯ್ದು ಮೂಲೋ
ಕವಿದೆಲ್ಲಂ ಕಯ್ಯೊಳಿರ್ದಾಮಳಕಫಳಮೆನಲ್ ಕಾಣ್ಬ ಯೋಗೀಂದ್ರರಿಂತ
ಪ್ಪವರಂ ಕೇಳ್ದೊಂದು ಪುಣ್ಯಂ ಸಮನಿಸಿದೊಡೆ ಪಾಪಕ್ಷಯಂ ಪ್ರಾಣಿಗೆಂದಂ
ದು ವಿಶೇಷಂ ಕಾಣ್ಬ ಪುಣ್ಯೋದಯಮುದಯಿಸದಾ ಸ್ವೈಪನಿನ್ನೇನನೆಂಬೆಂ ೭೫

ಪರಮ ತಪೋನಿಧಿಯೆನಿಸಿದ
ಗುರುವಿಂಗಭಿವಂದಿಸುತ್ತೆ ಹಾರೀತಂ ಕು
ಳ್ಳಿರೆ ನಿಮಗಿದೆತ್ತಣಿಂದಂ
ದೊರೆಕೊಂಡಿತ್ತೆಂದು ತಾಪಸರ್ ಬೆಸಗೊಂಡರ್ ೭೬

ಅಂತು ಬೆಸಗೊಳ್ವುದುಂ ಹಾರೀತಕನೆಂದನಾಂ ಸ್ನಾನಾರ್ಥಂ ಪೋಗುತ್ತಿರೆ ಪಂಪಾಸರೋವರದ ಪಕ್ಕದಡವಿಯ ಪೆರ್ಮರದ ತುದಿಗೋಡ ಗೂಡಿನಿಂ ಬಿಟ್ಟು ದೆಸೆಗೆಟ್ಟು ನಡುವಗಲ ಬಿಸಿಲಳುರೆ ಕಿಡಿಯಿಡುವ ಪುದಿ ಯೊಳ್ ಪೊರಳುತ್ತುಂ ಕಂಠಗತಪ್ರಾಣನಾಗಿರ್ದುದನೀ ಗಿಳಿಯಂ ಕಂಡು ಕರುಣಿಸಿತಂದೆಂ ನಡಪಿ ಗಱಿಮೂಡಿದ ಬಟಿಕ್ಕಂ ಪಾಱಿಪೋಕುಮಲ್ಲದಂದು

ಪರಿಚಯದಿಂ ನಿಲ್ಗಂದೆನ್ನ ಸಂಬಂಧಮಂ ನುಡಿಯುತ್ತಿರೆ ಜಾಬಾಲಿ ಮುನೀಂದ್ರನಾ ಮಾತಂ ಕೇಳ್ದೀಷದಾವಲಿತ ಕಂಧರನಿದೆತ್ತಣಿಂ ಬಂದುದೆಂದು ಪುಣ್ಯಜಲದಿಂ ಪ್ರಕ್ಷಾಳಿಸುವಂತೆ ಶಾಂತದೃಷ್ಟಿಗಳಿಂದೆನ್ನಂ ಮುನ್ನಂ ಕಂಡಱಿವನಂತೆ ನೀಡುಂ ಭಾವಿಸಿ ನೋಡಿ

ಈತಂ ಮುನ್ನಿನ ಭವದೊಳ್
ನೀತಿಯನುೞಿದೆಸಗಿ ಮೋಹದಿಂದಂ ತಿರ್ಯ
ಗ್ಜಾತಿಗೆ ಬಿೞ್ದೀರಂದದಿ
ನೀ ತೆಱದಿಂ ಕರ್ಮಫಲಮನುಂಡಪನಲ್ತೇ ೭೭

ಎಂದು ಕಾಲತ್ರಯವೇದಿಗಳ್ ನುಡಿಯೆ ಮುನಿಗಳೆಲ್ಲರ್ ವಿಸ್ಮಿತಾಂತಃಕರಣರಾಗಿ ಮುನೀಂದ್ರನನಿಂತೆಂದರ್

ಮುನ್ನಾವನವಿನಯಮನೀ
ನಂ ನೆಗೞ್ದಂ ವಿಹಗಯೋನಿಯೆಂತಾದಂ ಮ
ತ್ತಿನ್ನೇನಾದಪನೆನುತುಂ
ಬಿನ್ನವಿಪುತ್ಕಂತೆ ಮನದೊಳಾದಪುದೀಗಳ್ ೭೮

ಅದು ಕಾರಣದಿಂ

ಬೆಸಸಲ್ ನೀಂ ಪೇೞ್ದುದಿಂತೀ ಗಿಳಿಯ ಮಱಿಯ ವೃತ್ತಾಂತಮಂ ತಾಮೆನಲ್ ತಾ
ಪಸವೃಂದಕ್ಕಾ ಮುನೀಂದ್ರಂ ಕಥೆ ಪಿರಿದು ಮಹಾಶ್ಚರ್ಯಮಾ ರಾತ್ರಿಯೊಳ್ ಸಂ
ತಸಮಿರ್ಪಂತಾಗೆ ತಾಂ ಕೇಳಿಸಿದಪೆನದಱಿಂದೆೞ್ದು ನೀಮೆಲ್ಲರುಂ ಪ್ರಾ
ರ್ಥಿಸದೀ ಮಧ್ಯಾಹ್ನಕಾಲೋಚಿತ ಸಮಯದೊಳಾಸಕ್ತಿಯಂ ತಾಳ್ದಿಮಾಗಳ್ ೭೯

ಎಂದು ಮುನಿಗಳ್ಗೆ ಬೆಸಸು
ತ್ತುಂ ದಿವಸೋಚಿತಮೆನಿಪ್ಪ ನಿಯಮಕ್ಕರದ
ಲ್ಲಿಂದೆೞ್ದು ಪೋದನಾ ಮುನಿ
ವೃಂದಂಬೆರಸಾ ಮುನೀಂದ್ರನಂದವನಿಪತೀ ೮೦

ಅಂತು ನಿತ್ಯನಿಯಮವ್ಯಾಪಾರಂಗಳಂ ತೀರ್ಚುತ್ತುಮಿರೆ

ಮುನಿನಿವಹವಾಱಲಿಕ್ಕಿದ
ತನುತರ ಕಾಷಾಯವಲ್ಕವಸನಂಗಳನಂ
ದೆನಸುಂ ತಾಳ್ದಿದುವೆನೆ ಬೈ
ಗಿನ ಕೆಂಬಿಸಿಲಳುರಲೆಸೆದುವಾಶ್ರಮತರುಗಳ್ ೮೧

ಇನನ ಬೞಿಸಂದ ಸಂಧ್ಯಾ
ವನಿತೆಯ ಪಿಂಗಿದ ವಿರಕ್ತಿ ಪುಟ್ಟಲ್ ಕೃಷ್ಣಾ
ಜಿನಮಂ ತಾಳ್ದಿದಳೊ ನಿಶಾಂ
ಗನೆಯೆಂಬಿನಮುರ್ಬಿ ಮರ್ಬು ಪರ್ಬಿತ್ತಾಗಳ್ ೮೨

ವಳಯಿಾಭೂತ ತಮಸ್ತಮಾಳಗಹನಂ ಸಾಷಾಢ ಸಪ್ತರ್ಷಿಸಂ
ಕುಳ ಸಂಪೂತವರುಂಧತೀಸ್ಥಿತಿಸುತಂ ಮೂಲಾನ್ವಿತಂ ವ್ಯೋಮಮಂ
ಡಳಮಾಯ್ತಾಶ್ರಮಮೆಂದು ಬಂದೆಳಸಿದಂ ವೈರಾಗ್ಯದಿಂ ಧೌತವ
ಲ್ಕಲಶೋಭಾಂಬರನಂದು ಮಿತ್ರವಿರಹೋದ್ವೇಗಾತುರಂ ಚಂದ್ರಮಂ ೮೩

ಅಂದಾ ಬೆಳ್ದಿಂಗಳೊಳಾ
ನಂದದಿನಾಂಜೆರಸು ಮುನಿಸಮಾಜಸಮೇತಂ
ತಂದೆಯ ಕೆಲಕ್ಕೆ ಮೆಲ್ಲನೆ
ಬಂದಂ ಹಾರೀತನುಚಿತವಿನಯೋಪೇತಂ ೮೪

ಆಗಳ್ ಜಾಲಪಾದನೆಂಬ ಶಿಷ್ಯಂ ತಾಳವೃಂತದಿಂ ಬೀಸುತ್ತಿರೆ ಸನ್ನಿಧಿಕೃತವೇತ್ರಾಸನರಾಗಿರ್ದ ಗುರುಗಳನೆಂದಂ ನೀವೀ ವಿಹಂಗಶಿಶುವಿನ ವೃತ್ತಾಂತಮನಿರುಳ್ ಬೆಸಸಿದಪೆವೆಂದುದಱಿಂ ಮುನಿಸಮಾಜಂ ತತ್ಕಥಾಶ್ರವಣತತ್ಪರಮಾಗಿರ್ದುದೆಂಬುದುಂ ಜಾಬಾಲಿಮಹಾಮುನಿಗಳ್ ಪೇೞಲ್ ತಗುಳ್ದರದೆಂತೆನೆ—

## ೨. ಚಂದ್ರಾಪೀಡನ ಜೈತ್ರಯಾತ್ರೆ

ಪ್ರಿಯದಿಂದೆ ಮಹಾಕಾಳಾ
ಹ್ವಯನೀಶಂ ನೆಲಸೆ ನಗರಿಯೊಂದಧಿಕಖ್ಯಾ
ತಿಯಿನೆಸೆದು ತೋರ್ಪುದುಜ್ಜಯಿ
ನಿಯೆಂಬ ಪೆಸರಿಂದವಂತಿವಿಷಯಾಂತರದೊಳ್ ೧

ಸ್ಮರಭಸ್ಮಾಲಂಕೃತಾಂಗಂ ರತಿವಲಯಸಮಭ್ಯರ್ಚಿತಾಂಘ್ರಿದ್ವಯಂ ಭೀ
ಕರಶೂಲೋದ್ದಾರಿತಾಂಧಾಸುರನಗತನಯಾನೂಪುರೋದ್ಘೃಷ್ಟಜೂಟಂ
ಸುರವಂದ್ಯಂ ಸಂದ ಕೈಲಾಸಮುಮನಿಳಿಸಿ ನಿಂದಂ ಮಹಾಕಾಳನಾಮಂ
ಗಿರಿಶಂ ತಾನೆಂದೊಡುಜ್ಜೈನಿಯ ಮಹಿಮೆಯನೇಂ ಬಣ್ಣಿಸಲ್ ಬಲ್ಲನಾವಂ ೨

ಅಂತಾ ನಗರಿಯೊಳ್ ನೃಗ ನಹುಷ ಯಯಾತಿ ದುಂಧುಮಾರ ಭಗೀರಥ ಪ್ರತಿಮನುಂ ನಿಜಭುಜಾರ್ಜಿತ ಭೂಮಂಡಲನುಂ ಫಲಿತಶಕ್ತಿತ್ರಯನುಂ ನೀತಿಶಾಸ್ತ್ರಾಭಿಪ್ರಾಯಬುದ್ಧಿಯುಮಧಿಗತಧರ್ಮಶಾಸ್ತ್ರನುಮನೇಕಸಪ್ತತಂತು ಪೂತಮೂರ್ತಿಯುಮುಪಶಮಿತ ಜಗದುಪಪ್ಲವನುಮೆನಿಸಿದ ಮಹಾನುಭಾವಂ ತಾರಾಪೀಡನಿರ್ಪನಾತನ ಮಹಿಮೆಯಂ ಪೇಳ್ವೊಡೆ

ರಾವಣನೊತ್ತಿ ಕಿತ್ತ ರಜತಾದ್ರಿಯನಶ್ರಮದಿಂದವಾ ಮಹಾ
ದೇವನದೆಂತು ಮುನ್ನಿಳಿಸಿದಂ ಸ್ಥಿರಮಾಗಿರಲಂತಶೇಷ ದೋ
ಷಾವಿಳವಪ್ಪುದೊಂದು ಕಲಿಕಾಲಮದಾದಮೆ ಕಿತ್ತ ಧರ್ಮಮಂ
ಭೂವರನಾವಗಂ ನಿಲಿಸಿದಂ ನಿಖಿಳಾವನಿ ರಕ್ಷಣಕ್ಷಮಂ ೩

ವನನಿಧಿಪರೀತ ವಿಶ್ವಾ
ವನಿಪತಿಯು ಮಹಾಪ್ರತಾಪದಿಂ ಪೀರ್ದಪಳೆಂ
ಬಿನೆಗಂ ಛತ್ರಚ್ಛಾಯೆಯ
ನಿಮಿಷಗಲದೆ ರಾಜ್ಯಲಕ್ಷ್ಮಿ ಸಲೆ ನೆಲಸಿರ್ಪಳ್ ೪

ಆ ತಾರಾಪೀಡ ಭೂಭೃತ್ಪತಿಗೆ ಸಕಳಶಾಸ್ತ್ರಾನ್ವಿತಂ ವಿಪ್ರವಂಶ
ಖ್ಯಾತಂ ನೀತಿಪ್ರಯೋಗಪ್ರಭು ನಿಖಿಳದಯೋದಾರ ಗಾಂಭೀರ್ಯನಾಬಾ
ಲ್ಯಾತಿಪ್ರೇಮಾರ್ದ್ರಚಿತ್ತಂ ನಿಶಿತಮತಿ ಮಹಾಸತ್ತ್ವವೃತ್ತಂ ತ್ರಿವರ್ಗೋ
ಪೇತಂ ಷಾಡ್ಗುಣ್ಯಶೀಲಂ ವರಬುಧನಿವಹ ಸ್ತೋತ್ರಪಾತ್ರಂ ಪ್ರಶಸ್ತಂ ೫

ರಾಮಂಗೆ ಕುಶಿಕತನಯುಂ
ವೈಮಾನಿಕನಾಯಕಂಗೆ ವಾಚಸ್ಪತಿಯಾ
ಭೀಮಂಗೆ ದಮನನೆನೆ ನಿ
ಸ್ಸೀಮಗುಣಂ ಮಂತ್ರಿಯೆನಿಸಿದಂ ಶುಕನಾಸಂ ೬

ಅಂತಾ ಮಂತ್ರಿಯೊಳ್ ಸಕಳರಾಜ್ಯಭಾರಮಂ ತಾರಾಪೀಡಂ ನಿಲಿಸಿ ಸುಖೋನ್ಮುಖನಾಗಿ ಪರಿಮಿತಾಪ್ತಜನದೊಡನತಿರಮಣೀಯಮಭಿಮತಮ ವಿರುದ್ಧಮೆನಿಪ ವಿಷಯಸುಖಾರ್ಣವದೊಳ್ ಮೂಡಿ ಮುಳ್ಕಾಡುತ್ತುಮಿರ್ದು

ಎನಿತೊಳವು ವಿಷಯಸಮುದಯ
ಮನಿತಱೊಳಂದಂದು ಪರಮಸುಖಮಂ ಪಡೆದುಂ
ತನಯ ಮುಖಾಲೋಕನಸುಖ
ಮನದೊಂದನೆ ಪಡೆದನಿಲ್ಲ ತಾರಾಪೀಡಂ ೭

ಅದುಕಾರಣದಿಂ

ಧರಣೀಪಾಲಸಹಸ್ರ ಸಂವೃತನೆನಲ್ ಸಂದಿರ್ದುಮೇಕಾಕಿಯುಂ
ತಿರೆ ಪೃಥ್ವೀವಲಯಾವಲಂಬನೆನೆ ಸಂದಿರ್ದುಂ ನಿರಾಲಂಬನಂ
ತಿರೆ ಕರ್ಣಾಂತವಿಶಾಲ ಲೋಚನನೆನಲ್ ಸಂದಿರ್ದುಮಂದಂಧನಂ
ತಿರೆ ತನ್ನಂ ಬಗೆವಂ ತನೂಜರಹಿತಂ ವಿಶ್ವಂಭರಾವಲ್ಲಭಂ ೮

ಆ ತಾರಾಪೀಡನರೇಂದ್ರನಂತಃಪುರಪ್ರಧಾನೆಯೆನಿಸಿದ ವಿಳಾಸವತಿ ಮಹಾದೇವಿಯುಂ ತನಗೆ ತನಯರಿಲ್ಲಪ್ಪುದಱಿಂ ರಾಜ್ಯವಿಭವದ ಪರಮಸುಖಂ ವಿಫಳಮಾದವೋಲ್ ಮಱುಗುತ್ತಿರ್ದೊಂದು ದಿವಸಂ ಮಹಾಕಾಳದೇವರಂ ಪೂಜಿಸುತ್ತುಮಿರ್ಪಲ್ಲಿ ಭಾರತಕಥಾಶ್ರವಣದೊಳ್ "ಪುನ್ನಾಮ್ನೋ ನರ ಕಾತ್ ತ್ರಾಯತ ಇತಿ ಪುತ್ರಃ, ಅಪುತ್ರಾಣಾಂ ಕಿಲ ಗತಿರ್ನಾಸ್ತಿ ನ ವಾ

ಸಂತಿ ಲೋಕಾಶ್ಶುಭಾಃ" ಎಂಬೀ ವಾಕ್ಯಾರ್ಥಮಂ ಕೇಳ್ದು ಮನೆಗಾಗಳೇ ಬಂದಂತಸ್ಸಂತಾಪಮೊದವೆ ಬಾಷ್ಪಾಂಬುವನೋರಂತೆ ಸುರಿಯುತ್ತುಮಿರ್ದ ಳಂತಾ ಸಮಯದೊಳ್ ತಾರಾಪೀಡನರೇಂದ್ರನಲ್ಲಿಗೆಯ್ತಂದಾಕೆಯು ಶೋಕಕಾರಣಮನಱಿದು ದುಃಖದಿಂ ಬಿಸುಸುಯ್ದು

ನಮಗಿಂತಾದುದು ದೈವಮಾತ್ಮಜ ಪರಿಷ್ವಂಗಾಮೃತಾಸ್ವಾದ ಸೌ<br>
ಖ್ಯಮದೆಂತುಂ ದೊರೆಕೊಂಡಿತಿಲ್ಲ ಹೃದಯಕ್ಕೋರಂತೆ ಮುಂ ಪುಣ್ಯಕ<br>
ರ್ಮಮನಂತಾಗಿರೆ ಮಾಡದೀಗಳಟಲಿಂ ಪೇಟಿಂತಟುತ್ತಿರ್ದಳ<br>
ಕ್ಕುಮೆ ಬೇಡಂಗನೆ ಮಾಣ್ಬುದೆಂದುಸಿರ್ದ ತಾರಾಪೀಡ ಚಕ್ರೇಶ್ವರಂ ೯

ಗುರುಜನದಲ್ಲಿ ಮಾಡಧಿಕಭಕ್ತಿಯನರ್ಚಿಸು ದೇವರಂ ಮುನೀ<br>
ಶ್ವರ ಪರಿಚರ್ಯೆಯೊಳ್ ಪಿರಿದುಮಟ್ಟಿಗೆಯಾಗು ದಿಟಕ್ಕೆ ದಲ್ ಮುನೀ<br>
ಶ್ವರರ್ಗಳೆ ದೈವಮೆಂದವರ ಪಾದಪಯೋರುಹ ಸೇವೆಯಲ್ಲಿ ತ<br>
ತ್ಪರರೆನಿಪರ್ಗೆ ಪೇಟ್ ಪಡೆಯಲಾಱದುದೇಂ ತರಳಾಯತೇಕ್ಷಣೇ ೧೦

ಶರನಿಧಿಯಂದದಿಂದತಿಗಭೀರಗುಣೋನ್ನತಿಯಿಂದೆ ಸಂದ ಮಂ<br>
ದರಧರ ಬಾಹುಗಳ್ ವಸುಮತೀತಳ ರಕ್ಷಣದಕ್ಷರಪ್ಪ ನಾ<br>
ಲ್ವರುಮವನೀಶರಂ ದಶರಥಂ ಪಡೆದಂ ತನುಜಾತರಂ ವಯಃ<br>
ಪರಿಣತಿಯೊಳ್ ವಿಭಾಂಡಕ ಮಹಾಮುನಿಮುಖ್ಯ ವರಪ್ರಸಾದದಿಂ ೧೧

ಎಂದಿವು ಮೊದಲಾಗಿ ಪ್ರಿಯಮಧುರಂಗಳುಂ ಶೋಕಾಪನೋದ ನಿಪುಣಂಗಳುಂ ಧರ್ಮೋಪದೇಶಗರ್ಭಂಗಳುಮಪ್ಪ ವಚನನಿಚಯಂಗಳಿ ನೆಂತಾನುಂ ಸಂತೈಸಿ ಬಿಜಯಂಗೆಯ್ದನಲ್ಲಿಂ ಬಟಿಕ್ಕಂ ವಿಳಾಸವತಿ ಮಹಾದೇವಿಯುಂ ದುಃಖಮಂ ಪತ್ತುವಿಟ್ಟು

ಗುರು ದೇವ ದ್ವಿಜ ಪೂಜಾ<br>
ಪರಿಚರ್ಯೆಯನೆಸಗಿ ಭಕ್ತಿಯಿಂ ಮತ್ತಂ ಪೇ<br>
ಟ್ದರ ಮಾತೆಲ್ಲಂ ಕೇಳ್ದಾ<br>
ದರದಿಂದಂ ಗರ್ಭತೃಷ್ಣೆಯಿಂದೊಡರಿಸಿದಳ್ ೧೨

ಇಂತನೇಕವಿಧದಿಂ ವಿಳಾಸವತಿ ಮಹಾದೇವಿ ಪುತ್ರೋತ್ಪತ್ತಿ ನಿಮಿತ್ತಂ ಪಲವು ದಿವಸಮಾಚರಿಸುತ್ತಿರ್ಪುದುಮೊಂದು ದಿವಸಂ

ಸುರುಚಿರಸೌಧದೊಳ್ ನೆಲಸಿರಲ್ ನಿಜಕಾಂತೆಯ ವಕ್ತ್ರಬಿಂಬದೊಳ್
ಕರಿಣಿಯ ಸೃಕ್ವಮಂ ಪುಗುವ ನೀರಜಕಾಂಡಮೆನಲ್ಕಿಳಾ ಮನೋ
ಹರ ಶಶಿಮಂಡಳಂ ಪುಗುವುದಂ ವಸುಧಾಧಿಪನಂದು ಕಂಡನ
ಚ್ಚರಿಯೆನಿಸಿರ್ದುದಂ ನನಸುವೋಲ್ ಕನಸಂ ಬೆಳಗಪ್ಪ ಜಾವದೊಳ್ ೧೩

ಅರಸನತಿಹರ್ಷವಿಕಸಿತ
ಸುರುಚಿರಲೋಚನನಮಾತ್ಯಮುಖ್ಯನನಾಗಳ್
ಕರೆದುನಿಜಸ್ವಪ್ನಮನಾ
ದರದಿಂ ಪೇಟಲ್ಕೆ ಪುಳಕಿತಾಂಗಂ ಸಚಿವಂ ೧೪

ಪಲಕಾಲಕ್ಕೆ ಮನೋರಥಪ್ರಕರಮಿಂದೆಮ್ಮೊಂದು ಪುಣ್ಯೋದಯಾ
ವಳಿಯಿಂದಂ ದೊರೆಕೊಂಡುದಿಂದು ಭುವನಕ್ಕಾನಂದಮಾದತ್ತು ಮುಂ
ಕೆಲವಾನುಂ ದಿವಸಕ್ಕೆ ದೇವ ಪಡೆವಯ್ ಶ್ರೀಮಂಡನ ಕ್ಷಾತ್ರಮಂ
ಡಲನಾಗೋರ್ಚಿತಗಾತ್ರನಂ ಬಹುಕಳಾಸತ್ಪಾತ್ರನಂ ಪುತ್ರನಂ ೧೫

ಅದಲ್ಲದೆಯುಂ

ಭುವನಾಧೀಶ ನಿಶಾವಸಾನಸಮಯ ಪ್ರಾಗ್ಭಾಗದೊಳ್ ಶಾಂತರೂ
ಪವಿಸುತ್ಯಂ ವಿಲಸದ್ದುಕೂಲವಸನಾಲಂಕಾರನೊರ್ವಂ ದ್ವಿಜ
ಪ್ರವರಂ ಮೌಕ್ತಿಕಮಾಲಿಕಾವಲಯಮುಂ ಪ್ರೋತ್ಫುಲ್ಲಮಂ ಪುಂಡರೀ
ಕವನಂದಲೆತ್ತು ಮನೋರಮಾಂಕತಳದೊಳ್ ತಂದಿಕ್ಕಿದಂ ಸ್ವಪ್ನದೊಳ್ ೧೬

ಆನುಮೀ ಮಾರ್ಗದೊಳ್ ಕಂಡೆನಂತು ನಿಶಾವಸಾನಸಮಯದೊಳ್ ಕಂಡ ಕನಸುಗಳವಿತಥಂಗಳಪ್ಪುವದುಕಾರಣದಿಂ ನಿಖಿಳರಾಜಋಷಿಪ್ರಮೋದಹೇತುಭೂತನುಂ ರಾಜಮಾಂಧಾತನುಮೆನಿಪ ಜಗತ್ಪ್ರಖ್ಯಾತಂ ಜನಿಯಿಸುಗುಮಲ್ಲದೆಯುಂ

ನಿನ್ನಯ ಸಂತಾನಮವಿ
ಚ್ಛಿನ್ನಂ ಕ್ಷಿತಿಭಾರಧಾರಣೋಚಿತಗುಣಸಂ
ಪನ್ನಮೆನಲ್ ನೆಗಟ್ಟಂ ಭೂ
ಪೋನ್ನತ ದಿಙ್ನಾಗದಾನದಂದದಿನೆಂದುಂ ೧೭

ಎಂದು ತಾರಾಪೀಡನರೇಂದ್ರನ ಕಯ್ಯಂ ಪಿಡಿದಂತಃಪುರಕ್ಕೆ ಪೋಗಿ ವಿಳಾಸವತಿ ಮಹಾದೇವಿಗೆ ತಾವಿರ್ವರುಂ ಕಂಡ ಕನಸುಗಳಂ ಪೇಟೆ ಕೇಳ್ದಾನಂದಪರಂಪರೆಯನೆಯ್ದೆ ಕೆಲವಾನುಂ ದಿವಸದೊಳ್

ಒದವಲ್ ನಿಜತೇಜಂ ಘನ
ದೊದವಿಂ ನವಮೇಘಮಾಲೆಗುದಯಿಪ ತೆಱದಿಂ
ಹೃದಯಾನಂದಂ ಭುವನದೊ
ಳೊದವಲ್ಕೆ ವಿಳಾಸವತಿಗೆ ಸುತನುದಯಿಸಿದಂ ೧೮

ಉದಯಿಸೆ ಚಂದ್ರಂ ನೆಲೆವೆ
ರ್ಚಿದರ್ಣವಂ ಘೂರ್ಣಿಪಂತೆ ಭೋರೆಂದೋರಂ
ದದೆ ಭುವನಮೆಯ್ದೆ ಘೂರ್ಣಿಸಿ
ದುದದೆತ್ತಂ ರಾಜಪುತ್ರಜನನೋತ್ಸವದೊಳ್ ೧೯

ಅಂತಾ ಸಮಯದೊಳ್

ಶುಕನಾಸಸಮನ್ವಿತನು
ತ್ಸುಕಹೃದಯಂ ನೃಪತಿ ಸುತಮುಖಾಲೋಕನ ಕೌ
ತುಕದಿಂ ಬಂದಂ ಮೌಹೂ
ರ್ತಿಕೋಪದಿಷ್ಟ ಪ್ರಶಸ್ತಲಗ್ನೋದಯದೊಳ್ ೨೦

ಸಹಜವಿಭೂಷಣದಂತಿರೆ
ಮಹನೀಯಕ್ಷುಣ್ಣಲಕ್ಷಣಂ ಮಿಸುಗೆ ಶುಭಾ
ವಹನೆನಿಸಿದನಂ ಕಂಡಂ
ಮಹಾತ್ಮನಂ ಸುತನನಟ್ಟಱಿಂದಾ ಮಹಿಪಂ ೨೧

ಅಡಿಗಡಿಗಾನಂದಾಶ್ರುಗ
ಳೆಡೆವಿಡದುಣ್ಮುತ್ತಿರಲ್ಕೆ ನಿಡುಗಣ್ಬೊಣರಿಂ
ಪಿಡಿವಂದದೆ ಕುಡಿವಂದದೆ
ನುಡಿವಂದದೆ ಸುತನನಟ್ಟಯಿಂದೀಕ್ಷಿಸಿದಂ ೨೨

ಆಗಳ್ ಶುಕನಾಸಂ ಕುಮಾರನಂಗಪ್ರತ್ಯಂಗಂಗಳಂ ಪ್ರೀತಿವಿಸ್ತಾರಿತ ಲೋಚನನಾಗಿ ನೋಡಿ ನರೇಂದ್ರಂಗಿಂತೆಂದಂ

ದೇವ ಪೆಱತಾವುದವ್ಯ
ಕ್ತಾವಯವದೊಳಂ ಕುಮಾರನುನ್ನತಿಕೆಯನು
ದ್ಭಾವಿಸುತಿರ್ದಪುದಿಂತಿದೆ
ಭಾವಿಸು ನೀಂ ಚಕ್ರವರ್ತಿಚಿಹ್ನೋತ್ಕರಮಂ ೨೩

ಎಂದು ಮಂತ್ರಿ ಪೇೞುತ್ತಿರಲೊರ್ವ ಪುರುಷಂ ಪ್ರಹೃಷ್ಟವದನಂ ತ್ವರಿತಗತಿಯಿಂ ಬಂದು ಪೊಡವಟ್ಟು ಬಿನ್ನಪವೆಂದಿಂತೆಂದಂ

ದೈವವಿದಿರ್ಚಿ ಬಂದುದು ಜಗಜ್ಜಯಮಂ ತಳೆ ದೇವ ರೇಣುಕಾ
ದೇವಿಗೆ ರಾಮನುತ್ಸವದೆ ಪುಟ್ಟಿದವೋಲ್ ಶುಕನಾಸಮಂತ್ರಿ ಸಂ
ಭಾವಿತೆಯಪ್ಪ ಪಾರ್ವತಿ ಮನೋರಮೆಗತ್ತ ಭವತ್ಪ್ರಸಾದದಿಂ
ದೀ ವರಲಗ್ನದೊಳ್ ತನಯನತ್ಯಧಿಕೋತ್ಸವಮಾಗೆ ಪುಟ್ಟಿದಂ ೨೪

ಎಂದು ಬಿನ್ನವಿಸೆ

ಅರಸಂ ಕಲ್ಯಾಣಪರಂ
ಪರೆ ಸಮನಿಸಿತೆಂದು ತೆಗೆದು ತಚ್ಚೈಸುತ್ತುಂ
ಸರಭಸಮೊಲವಿಂ ಸಚಿವೋ
ತ್ತರೀಯಮಂ ಪೂರ್ಣಪಾತ್ರಮೆಂದೆಳೆಕೊಂಡಂ ೨೫

ಅನಂತರಮೊಸಗೆವಾತಂ ಪೇೞ್ದವಂಗೆ ಮಚ್ಚುಗೊಟ್ಟಲ್ಲಿಂದೆೞುಂ ಪೊಱಮಟ್ಟು

ವಿವಿಧವಿಲಾಸಮಂ ತಳೆದು ಮಂಗಳಕೇಳಿಯನಟ್ಟೆವಟ್ಟು ಮಾ
ನವಪತಿ ನೋಡುತುಂ ಸಚಿವಮಂದಿರಮಂ ಪುಗುತಂದು ಸೂತಿಕಾ
ಭವನಮನೆಯ್ದಿ ಪೆರ್ಮೆಗನುರೂಪಮೆನಲ್ ನಿಜಮಂದಿರೋದ್ಗತೋ
ತ್ಸವಕಿದು ನಾಡೆಯುಂ ದ್ವಿಗುಣಮೆಂಬಿನಮುತ್ಸವಮಂ ನೆಗೞ್ಚಿದಂ ೨೬

ಅಂತು ನೆಗೞ್ಚಿ ದಶಮದಿನಪುಣ್ಯಸುಮುಹೂರ್ತದೊಳ್ ಸುವರ್ಣ ಕೋಟಿಗಳಂ ದ್ವಿಜೋತ್ತಮರ್ಗಿತ್ತು ತದನಂತರದೊಳ್

ಮೊದಲೊಳ್ ಬಂದೞ್ಕುಱಿಂದೀತನ ಜನನಿಯ ವಕ್ತ್ರಾಬ್ಜದೊಳ್ ಚಂದ್ರಮಂ ಪೊ
ಕ್ಕುದನಲ್ತೇ ಕಂಡೆನಾಂ ಸ್ವಪ್ನದೊಳೆನುತೆ ಮನಂಗೊಂಡು ತತ್ಸ್ವಪ್ನಸಾದೃ
ಶ್ಯದೆ ಚಂದ್ರಾಪೀಡನೆಂಬೀ ಮೊದಲ ಪೆಸರನಿಟ್ಟಂ ತನೂಜಂಗೆ ಮಾಲೋ
ಕವೊಳಂ ಮಾಂಗಲ್ಯತೂರ್ಯಧ್ವನಿ ಪಸರಿಸಿ ಪರ್ವುತ್ತಿರಲ್ ಸಾರ್ವಭೌಮಂ ೨೭

ಮನುಮಾರ್ಗದೊಳೇಕಾದಶ
ದಿನದೊಳ್ ತನಯಂಗೆ ವಿಪ್ರಜನಸಮುಚಿತಮಾ
ಯ್ತೆನೆ ಸಚಿವಂ ವೈಶಂಪಾ
ಯನನೆಂಬೀ ಪೆಸರನಿಟ್ಟನಧಿಕೋತ್ಸವದಿಂ ೨೮

ಅನಂತರಮೇೞ್ಗೆವಡೆವ ಪಾಡಿವದ ಚಂದ್ರನಂತೆ ಚಂದ್ರಾಪೀಡಂ ಪ್ರತಿದಿನಂ ಪ್ರವರ್ಧಮಾನನಾಗೆ ಚೂಡಾಕರಣಾದಿಕ್ರಿಯಾಕಲಾಪಮುಮಂ ಮಾಡುತ್ತುಮಿರೆ ಶೈಶವಮಂ ಪತ್ತುವಿಡುವುದುಂ ಕ್ರೀಡಾವ್ಯಸನಮಗಲ್ವಂತು ಬಹಿರ್ನಗರದೊಳಮರಮಂದಿರಾನುಕಾರಿಯಪ್ಪ ವಿದ್ಯಾನಿಕೇತನಮಂ ಮಾಡಿಸಿ ನಿಖಿಳ ವಿದ್ಯಾಚಾರ್ಯರುಮಂ ಮಹಾಪ್ರಯತ್ನದಿಂ ನಿಲಿಸಿ ಶುಭದಿನದೊಳ್ ಧವಳಮಂಗಳ ಪ್ರಸಾಧನಾಲಂಕೃತನುಮಾಚಾರ್ಯಕುಲಪರಿವೃತನುಮಪ್ಪ ನಿಜನಂದನನಂ ವೈಶಂಪಾಯನನಂಬೆರಸು ವಿದ್ಯಾಧಿಗಮನದೊಳ್ ಸಮರ್ಪಿಸಿ ಪಂಜರಸ್ಥಿತ ಮದಕೇಸರಿಕಿಶೋರಕದಂತೆಗೆಯ್ದಖಿಳ ವಿದ್ಯಾಭ್ಯಾಸಂಗೆಯ್ಸುತ್ತುಮಿರೆ

ಪೊಳೆದೆಸೆವ ರತ್ನದರ್ಪಣ
ದೊಳಗೆ ತಳತ್ತಳಿಪ ತರಣಿಕಿರಣಾವಳಿವೋಲ್
ತೊಳಗಿ ಬೆಳಗಿದುವು ವಿದ್ಯಾ
ವಳಿ ನಿಜನಂದನನ ವದನಮಣಿದರ್ಪಣದೊಳ್ ೨೯

ಅಂತು ಸಕಳಕಳಾಕಳಾಪಮನಪ್ಪುಕಯ್ದು ಶಸ್ತ್ರಶಾಸ್ತ್ರದೊಳತ್ಯಂತ ಪರಿಣತನಾಗುತ್ತುಮಿರೆಯಿರೆ

ವಿರಳಪರಿವಾರಪರಿವೃತ
ನರಸಂ ಮಾದೇವಿವೆರಸು ನಿಚ್ಚಂ ಬಂದಾ
ದರದಿಂದೆ ನೋಡಿ ಪೋಪಂ
ಗುರುಜನ ಪರಿವೃತನೆನಿಪ್ಪ ನಿಜನಂದನನಂ ೩೦

ಗುಣಮುಂ ರೂಪುಂ ವಿದ್ಯಾ
ಗಣಮುಂ ತಳ್ವೊಯ್ದು ತನ್ನೊಳೆಸೆಯಲ್ ವಿಬುಧಾ
ಗ್ರಣಿಯೆನಿಪ ಕುಮಾರನೊಳಂ
ದೆಣೆಯಾದಂ ಸಚಿವತನಯನಾ ಕ್ರಮದಿಂದಂ ೩೧

ಶುಕನಾಸಾರ್ಯ ಗುರುತ್ವದಿಂದೆ ಸಹಪಾಂಸುಕ್ರೀಡನಾಭ್ಯಾಸದಿಂ
ದೆ ಕಳಾಜ್ಞಾನ ವಿಶೇಷದಿಂದುಚಿತ ಸೇವಾಜಾತಚಾತುರ್ಯದಿಂ
ದೆ ಕರಂ ಚಿತ್ತಮನಪ್ಪುಕಯ್ದಖಿಳ ವಿಸ್ರಂಭಕ್ಕಮಾವಾಸಮಾ
ಗಿ ಕುಮಾರಂಗೆ ಮಹಾಪ್ರಧಾನತನಯಂ ಮಿತ್ರತ್ವಮಂ ತಾಳ್ದಿದಂ ೩೨

ದಿನಪತಿಯುಂ ದಿನಮುಂ ಬಿಡ
ದನುಬಂಧದಿನಗಲದಂತೆವೋಲ್ ಚಂದ್ರಾಪೀ
ಡನುಮಂತಾ ವೈಶಂಪಾ
ಯನನುಂ ಪದಪಿಂದವೊರ್ವರೊರ್ವರನಗಲರ್ ೩೩

ಕಮಲವನಕ್ಕಿನೋದಯವಿರುಳ್ಗಮೃತಾಂಶುಸಮುದ್ಗಮಂ ಸುರ
ದ್ರುಮಕೆ ನವಪ್ರಸೂನವಿಭವಂ ನವಿಲಿಂಗೆ ಕಳಾಪವರ್ಣಮಂ
ತಮರ್ದ ಮುಗಿಲ್ಗೆ ಶಕ್ರಧನುವೋಲ್ ಭುವನತ್ರಯಮಂಗಳಾಭಿರಾ
ಮಮಿದೆನೆ ರಾಜಸೂನುಗೆಸೆದತ್ತನಸುಂ ನವಯೌವನೋದಯಂ ೩೪

ತೊಳತೊಳತೊಳಗುವ ಷೋಡಶ
ಕಳೆಯಿಂ ಕಣ್ಗೊಳಿಪ ಚಂದ್ರನಂದದಿನತ್ಯು
ಜ್ಜ್ವಳತನು ಷೋಡಶವರ್ಷಂ
ಗಳಿಂದೆ ಕಣ್ಗೆಸೆದನಂದು ಚಂದ್ರಾಪೀಡಂ ೩೫

ಅಂತುಪಾರೂಢಯೌವನೋದಯನುಂ ಪರಿಸಮಾಪ್ತ ಸಕಲಕಲಾ ವಿಜ್ಞಾನನುಮಾದ ನಿಜನಂದನನಪ್ಪ ಚಂದ್ರಾಪೀಡನಂ ತಾರಾಪೀಡ ನರೇಂದ್ರಂ ಬರಿಸಲೆಂದು ಬಲಾಧಿಕೃತನಪ್ಪ ಬಲಾಹಕನೆಂಬನಂ ಬೆಸಸೆ ಬಹುತುರಂಗಪದಾತಿಬಲಪರಿವೃತನಾಗಿ ಬಲಾಹಕಂ ಕುಮಾರನಿರ್ದ ವಿದ್ಯಾನಿಕೇತನಕ್ಕೆ ವಂದು ದೌವಾರಿಕನಿವೇದಿತಂ ಪೊಕ್ಕು ವಿಬುಧಚಿಂತಾ ಮಣಿಯಂ ಕಂಡವನಿತಳನಿಹಿತ ಚೂಡಾಮಣಿಯಾಗಿ ಪೊಡವಟ್ಟು ಸಮುಚಿ ತಾಸನದೊಳ್ ಕುಳ್ಳಿರ್ದು ವಿನಯಪುರಸ್ಸರಮಿಂತೆಂದಂ

ಎನ್ನ ಮನೋರಥಕ್ಕೆ ಪರಿಪೂರ್ತಿಯನೆಯ್ದಿಸೆ ಶಸ್ತ್ರಶಾಸ್ತ್ರಸಂ
ಪನ್ನತೆಯಿಂ ವಿರಾಜಿಸೆ ನಿರೀಕ್ಷಿಸಲುತ್ಸುಕೆಯರ್ಕಳಾದಪರ್
ತನ್ನಯ ತಾಯ್ವಿರೆಂದು ಜನಕಂ ಬೞಿಯಟ್ಟಿದನಟ್ಟಿಱಿಂ ಪುರ
ಕ್ಕಿನ್ ನಡೆತಂದು ದೇವ ಪಡೆ ಪೌರಜನಂಗಳ ಕಣ್ಗೆ ಪರ್ವಮಂ ೩೬

ಅದೆ ಪೊಱಗಿಂದ್ರಾಯುಧಮೆಂ
ಬುದೊಂದು ದಿವ್ಯಾಶ್ವಮಟ್ಟಿದಂ ನಿನಗೇೞಿ
ಲ್ಕದನನಿಲ ಗರುಡ ಜವಮೆನಿ
ಸಿದುದಂ ತ್ರಿಜಗಕ್ಕೆ ರತ್ನಮಂ ನಿಜಜನಕಂ ೩೭

ಜಳನಿಧಿ ಜಳದಿಂ ಪೊಱಮ
ಟ್ಟಿಳೆಗವತರಿಸಿದುದಯೋನಿಸಂಭವಮೀ ಮಂ
ಗಳಹಯವೆಂದೋಲೈಸಿದ
ನಿಳಾಧಿನಾಥಂಗೆ ಪಾರಶೀಕಾಧೀಶಂ ೩೮

ಎಂದು ಬಿನ್ನವಿಸುವುದುಂ ನೃಪರೂಪಚಂದ್ರಂ ತಂದೆಯಾಜ್ಞೆಯಂ ತಲೆಯೊಳ್ ತಾಳ್ದು ಪೋಪಮಡಲೆಂದಭಿನವಜಳಧರಧ್ವಾನ ಗಭೀರವಚನದಿ ನಿಂದ್ರಾಯುಧಮಂ ಪುಗಿಸೆಂದು ಬೆಸಸಿದಾಗಳ್

ಎರಡುಂ ಪಕ್ಕಂಗಳೊಳ್ ಕಾಂಚನಕಟಕಖಲೀನಾಗ್ರಸಂಲಗ್ನರಿರ್ವರ್
ಭರದಿಂದಂ ಕೀೞ ನೇಣಂ ತೆಗೆದು ಬರೆ ಮಹೋದಗ್ರದೇಹಪ್ರಮಾಣಂ

ಬರೆ ಪೀರ್ವಂತೆತ್ತಮಾಕಾಶಮನನಿಲಜವೋದ್ರೇಕದಿಂ ಪಾಱಿ ನೀಡುಂ
ಖುರಘಾತೋದ್ಧೂತಧಾತ್ರೀರಜಮತಿರುಚಿರಂ ಬಂದುದಿಂದ್ರಾಯು
ಧಾಶ್ವಂ ೩೯

ಆ ದಿವ್ಯಾಶ್ವಮಂ ನೋಡಿ

ಇದಱ ಮಹಾಪ್ರಾಣತೆಗಿ
ನ್ನಿದಱೊದವಿದ ತೇಜದೇಳ್ಗೆಗಚ್ಚರಿಯಾಗಿ
ರ್ದುದು ದೇವತಾತ್ಮನೋ ಪೇ
ೞಿದು ದಿಟಮೇೞಲ್ಕೆ ಶಂಕೆ ಪುಟ್ಟಿದುದೀಗಳ್ ೪೦

ಇದು ಸಾಮಾನ್ಯದ ವಾಜಿಯಲ್ತು ಪಿರಿದುಂ ನೋಡಲ್ ಮುನೀಂದ್ರೋಗ್ರಶಾ
ಪದಿನೊರ್ವಂ ದಿವಿಜಂ ನಿಜಾಕೃತಿಯನಾದಂ ಬಿಟ್ಟು ದಿವ್ಯಾಶ್ವರೂ
ಪದಿನೀ ಲೋಕದೊಳಿರ್ದನೆಂದು ಬಗೆಯುತ್ತಲ್ಲಿಂದಮೆಟ್ಟಂದನಂ
ದುದಿತಾರ್ಕಪ್ರಭನೇಱಲೆಂದು ಹಯಮಂ ರಾಜಾಧಿರಾಜಾತ್ಮಜಂ ೪೧

ಕ್ಷಮೆಯಂ ಮಾಡಶ್ವ ನೀನಾರಱಿಯೆನದಱನಿಂತೀ ಮದಾರೋಹಣಾತಿ
ಕ್ರಮಕೆಂದಾರೋಹಣಂಗೆಯ್ವುದುಮದು ಬಗೆಗೊಂಡಂತಿರಾಕೇಕರಾಲೋ
ಕಮುಖಂ ನೋಡುತ್ತುಮೇಱಲ್ ಕರೆವ ತೆಱದೆ ಹೇಷಾರವಂ ಪೊಣ್ಮೆ ಭೂಭಾ
ಗಮನುತ್ಸಾಹದಿಂ ದಕ್ಷಿಣಖುರದೆ ಬೆರಂಟಿತ್ತು ದಿವ್ಯಾಶ್ವಮಾಗಳ್ ೪೨

ಆಗಳ್ ಚಂದ್ರಾಪೀಡನಾಯಿಂದ್ರಾಯುಧಾಶ್ವಮನೇಱಿ ಯಥಾ
ಕ್ರಮದಿಂ ತುರಂಗಾರೂಢನಪ್ಪ ವೈಶಂಪಾಯನಂಬೆರಸು ಪುರಾಭಿಮುಖ
ನಾಗಿ ಬಿಜಯಂಗೆಯ್ದು ಪುರವೀಧಿಯೊಳ್ ಲತಾಂಗಿಯರ್ ಸೂಸುವ
ಕುಸುಮಮಿಶ್ರ ಲಾಜಾಂಜಲಿಗಳನಿದಿರ್ಗೊಳುತ್ತೆ ರಾಜಭವನದ್ವಾರದೊ
ಳಿಂದ್ರಾಯುಧದಿಂದವನಿತಳಕ್ಕವತರಿಸಿ ಅರಮನೆಯಂ ಪೊಕ್ಕು ನಿಜ
ಜನಕನಂ ದೂರದೊಳೆ ಕಂಡು ಪೊಡಮಡುವುದುಂ

ಪರಮಾಶೀರ್ವಾದದಿಂದಂ ಪರಸಿ ಮಗನನಾನಂದದಿಂ ಕಂದ ಬಾಯೆಂ
ದಿರದಾನಂದಾಶ್ರುಬಿಂದುಪ್ರತತಿ ಸುರಿಯೆ ರೋಮೋದ್ಗಮಂ ಕೂಡೆ ಪೊಣ್ಮ
ತ್ತಿರೆ ಬಾಹುದ್ವಂದ್ವದಿಂದಂ ಬರೆತೆಗೆದುಱೆ ತಪ್ಪೆ ಸೈಸೆಯುಂ ತಾತಪಾದಾಂ
ಬುರುಹಕ್ಕಾನಮ್ರನಾದಂ ನಿಖಿಳನೃಪಸಭಾಂಭೋಜಿನೀರಾಜಹಂಸಂ ೪೩

ಅಂತು ವಿನಯೋನ್ನತಿವೆತ್ತ ನಿಜನಂದನನನರ್ಧಾಸನದೊಳಾ ನೃಪಂ ಕುಳ್ಳಿರಿಸೆಯುಮೆಂತುಮೊಲ್ಲದಾತ್ಮೀಯ ತಾಂಬೂಲಕರಂಕವಾಹಕ ಪ್ರಸಾರಿ ತಾಂಬರಾಂಚಲಮುಮಂ ಚರಣಾಗ್ರದಿಂ ನೂಂಕಿ ಚಂದ್ರಾಪೀಡಂ ನೆಲದೊಳ್ ಕುಳ್ಳಿರೆ

ವಿನಯದಿನಾ ವೈಶಂಪಾ
ಯನನೆಱಗೆ ನರೇಂದ್ರನಬ್ಬಿಱಿಂದಪ್ಪಲ್ಕಾ
ತನುಮಾಗಳ್ ತಾರಾಪೀ
ಡ ನರೇಂದ್ರಾತ್ಮಜನ ಪಕ್ಕದೊಳ್ ಕುಳ್ಳಿರ್ದಂ ೪೪

ಅಡಿಗಡಿಗಾತ್ಮನಂದನ ಮುಖೇಂದುವನುತ್ಸವದಿಂದೆ ನೋಡುತುಂ
ನುಡಿಯುತುಮಾ ನೃಪಂ ಕರಸರೋರುಹದಿಂ ಚುಬುಕಾಗ್ರಭಾಗಮಂ
ಪಿಡಿದು ನಿಜಾಂಬಿಕಾ ಪದಪಯೋಜಮನೀಕ್ಷಿಸು ಪೋಗು ಸಂತಸಂ
ಬಡಿಸು ವಿಲೋಕನೋತ್ಸುಕೆಯರಂ ವಿನಯಾರ್ಣವ ನಿನ್ನ ತಾಯ್ವಿರಂ ೪೫

ಎಂದು ಬೆಸಸೆಯುಂತೆಗೆಯ್ವೆನೆಂದು ವೈಶಂಪಾಯನದ್ವಿತೀಯನುಂ ಅಂತಃಪುರ ಪ್ರವೇಶಯೋಗ್ಯ ಪರಿಮಿತಪರಿಜನೋಪದಿಶ್ಯಮಾನಮಾರ್ಗನುಮಾಗಿ ಶುದ್ಧಾಂತಕಾಂತಾಪ್ರಧಾನೆಯಪ್ಪ ನಿಜಾಂಬಿಕೆಯ ಮನೆಯಂ ಪೊಕ್ಕು ವಿನಯರತ್ನಾಕರಂ ಸಾಷ್ಟಾಂಗ ಪ್ರಣತನಾಗೆ ವಿಳಾಸವತಿ ಮಹಾದೇವಿ ನಿಜತನಯನಂ ವೈಶಂಪಾಯನನುಮನಬ್ಬಿಱಿಂ ತಬ್ಕೈಸಿ

ವಿನಯದೆ ನಿನ್ನ ತಂದೆಯ ಪ್ರಸಾದದಿನಿಂತು ಸಮಸ್ತ ಸತ್ಕಳಾ
ವನಿತೆಯರೊಳ್ ಮಹೋತ್ಸವದೆ ಕೂಡಿದಿರಿಂತಿರೆ ಬೇಗದಿಂ ವಧೂ
ಜನದೊಡಗೂಡಿಮೆಂದು ಪಿರಿದಬ್ಬಿಱಿನೊಳ್ ಪರಸುತ್ತುಮಾತ್ಮನಂ
ದನ ಶುಕನಾಸನಂದನರನಾ ಸತಿ ಕಣ್ಮಲರಾರೆ ನೋಡಿದಳ್ ೪೬

ತದನಂತರಂ ಸಮಸ್ತ ಜನನಿಯರುಮಂ ಯಥಾಕ್ರಮದಿನಭಿವಂದಿಸಿ ರಾಜಮಂದಿರಮಂ ಪೊಱಮಟ್ಟು ಬರ್ಪಾಗಳ್

ತನಗೆಂದು ಬೇಱೆ ಮುನ್ನಮೆ
ಜನಕಂ ಮಾಡಿಸಿದ ನೆಲೆಯ ಕರುಮಾಡಂ ಕಾಂ
ಚನ ಕಲಶತತಿಯಿನೆಸೆದುದು
ಕನಕಾದ್ರಿಯನಲ್ಲಿ ಕಡೆದು ಕಂಡರಿಸಿದವೋಲ್ ೪೭

ಆ ಮಂದಿರಮಂ ಪೊಕ್ಕು ಮಜ್ಜನಭೋಜನಾದಿ ದಿವಸವ್ಯಾಪಾರಮಂ ತೀರ್ಚಿ

ಭುವನ ತ್ರಯಮುಂ ಕೈಸಾ
ರ್ಗುಮಿದಱಿನೆಂಬಂತೆ ತನ್ನ ಮಣಿಮಯ ಶಯ್ಯಾ
ಭವನಾಂತರಾಳದೊಳ್ ಕ
ಟ್ಟವೇಟ್ಟನಿಂದ್ರಾಯುಧಾಶ್ವಮಂ ನೃಪತನಯಂ ೪೮

ಅಂತು ತುರಂಗರತ್ನಮನೆ ನೋಡಿ ಪೊೞ್ತುಗಳೆಯುತ್ತುಮಿರ್ಪುದುಂ ದಿನಲಕ್ಷ್ಮೀಕಾಂತೆ ಮೆಯ್ವೆಟ್ಟಿಟಿದು ಗಗನರಂಗಾಗ್ರದಿಂ ವಾರುಣೀ ಸೇವನೆಗೆಯ್ವುತ್ತಿರ್ಪಲ್ಲಿ ಕಾಲಿಂ ನವಮಣಿಮಯ ಮಂಜೀರಕಂ ನುಣ್ಚುತುಂ ತೀವಿ ನಿಜಪ್ರದ್ಯೋತದಿಂ ಪಶ್ಚಿಮಶಿಖರಿ ಶಿರೋಭಾಗದೊಳ್ ಬಿೞ್ದುದೆಂಬಂತಿನಬಿಂಬಂ ರಂಜಿಸಿತ್ತಸ್ತಮಯ ಸಮಯದೊಳ್ ಮುಕ್ತಪಾದಾವಲಂಬಂ ೪೯

ಆ ನಿಶಾಸಮಯದೊಳ್ ನೃಪರೂಪಚಂದ್ರಂ ಸಂಧ್ಯಾಸಮಯೋಚಿತ ನಿಯಮಮಂ ನಿರ್ವರ್ತಿಸಿ ಮಣಿಮಯ ಮಂಟಪದೊಳ್ ವೈಶಂಪಾಯನ ದ್ವಿತೀಯನೋಲಗದೊಳಿರೆ

ಉದಿತೇಂದುಪ್ರಭೆ ರಾಹುವಿಂಗಗಿದು ಕಾಂತಾರೂಪಮಂ ತಾಳ್ದಿ ಬಂದುದೊ ಮೇಣ್ ರಾಜಕುಲಾಧಿದೇವತೆಯೊ ಬಂದಳ್ ಮೂರ್ತಿಗೊಂಡೆಂಬಿನಂ ಸುದತೀರತ್ನಮದೊರ್ವಳೆಯ್ತರುತುಮಿರ್ದಳ್ ಸುತ್ತಲುಂ ನಾಡೆ ಪೊಣ್ಮಿದ ಲಾವಣ್ಯದೆ ಕಾಂಚನಾಕರ ರಜೋವಿಸ್ತಾರಮಂ ಮಾೞ್ಪವೋಲ್ ೫೦

ಮಿಸುಗುವ ಬೆಳ್ದಿಂಗಳ್ ದೆಸೆ
ದೆಸೆಯೊಳ್ ಪಸರಿಸುವ ತೆಱದೆ ಹಾರಮರೀಚಿ
ಪ್ರಸರಂ ಬಳಸುತ್ತಿರೆ ಬ
ರ್ಪಸಿಯಳ್ ಪಾಲ್ಗಡಲೊಳೆಸೆವ ಸಿರಿಯಂ ಪೋಲ್ತಳ್ ೫೧

ಗಿರಿರಾಜಂ ಗೌರಿಯನಾ
ಹರಂಗೆ ಶುಶ್ರೂಷೆಗೆಯಿಸಲೊಡಗೊಂಡುಯ್ವಂ
ತಿರೆ ಸತಿಯು ಪೆಱಗೆ ಕಿಱಿದಂ
ತರದೊಳ್ ಕೈಲಾಸನೆಂಬ ಕಂಚುಕಿ ಬಂದಂ ೫೨

ಅಂತಾ ಕಾಂತೆವೆರಸು ಕಂಚುಕಿ ಬಂದು ಪೊಡವಟ್ಟು ಕಯ್ಗಳಂ ಮುಗಿದು ದೇವಾ ಬಿನ್ನಪವೆಂದಿಂತೆಂದಂ

ಮುನಿಸಿಂ ತ್ವಜ್ಜನಕಂ ಕುಳೂತಪುರಮಂ ನಿರ್ಮೂಲಿಪಂದಾ ಕುಳೂ
ತನರೇಂದ್ರಂ ಭಯದಿಂ ಕಳತ್ರಸಹಿತಂ ಪೋಗಲ್ ಕುಳೂತೇಶನಂ
ದನೆಯಂ ಮತ್ತಮನೇಕರಂ ಸೆಱೆಗೆ ತಂದಿಟ್ಟಲ್ಲಿ ತದ್ರಾಜನಂ
ದನೆಯಂ ಕನ್ನೆಯನಕ್ಕಱಿಂ ನಡಪಿದಳ್ ಮಾದೇವಿ ಕಾರುಣ್ಯದಿಂ ೫೩

ಅಂತು ನಡಪುತುಮಿರ್ದು

ಪಿರಿದುಂ ಮನ್ನಿಸಿ ನಡಪು
ತ್ತಿರೆ ಪರಮರಹಸ್ಯಭೂಮಿಯೆನಿಸಿದಳಿಂತೀ
ಪರಿಚಾರಿಕೆ ತನಗೆಂದಾ
ದರದಿಂ ನಿಜಜನನಿ ಬೆಸಸಿಯುಟ್ಟಿದಳೀಗಳ್ ೫೪

ಧರೆಯೊಳ್ ನೆಗಟ್ದ ಕುಳೂತೇ
ಶ್ವರನ ಮಗಳ್ ಪತ್ರಲೇಖೆಯೆಂಬುದು ಪೆಸರಿಂ
ಪರಿಜನಸಾಮಾನ್ಯದೆ ನೀಂ
ಪರೀಕ್ಷಿಸಲ್ವೇಡ ಸತಿಯನೀ ಗುಣವತಿಯಂ ೫೫

ಎಂದು ಪೊಡವಡಿಸೆ ಪತ್ರಲೇಖೆಯು ವಿಚಿತ್ರರೂಪನಾ ಕ್ಷತ್ರಿಯಪುತ್ರಂ ವಿಸ್ಮಯಾಕ್ಷಿಪ್ತಚಿತ್ತನಾಗಿ ನೋಡುತಿರ್ದು ದೇವಿಯರ್ ಬೆಸಸಿದಂತೆ ನೆಗಪ್ವೆನೆಂದು ಕಂಚುಕಿಯಂ ಕಳಿಪಲಿತ್ತ ಪತ್ರಲೇಖೆಯುಭಿನವಸಮುಪಜಾತ ಸೇವಾರಸದಿನೊಂದುಪೊಟ್ತಗಲದೋಲಗಿಸುತ್ತಿರಲೆಕೆಯ ಶೀಲಾಚಾರವಿನಯಮಂ ಕಂಡು ತಾಂಬೂಲಕರಂಕವಾಹಿನಿಯಂ ಮಾಡಿ ನೃಪರೂಪಚಂದ್ರಂ ನಿಜಜನನೀ ಜನಕರನೋಲಗಿಸುತಿರ್ದನನ್ನೆಗಮತ್ತಂ

ಯುವರಾಜಪಟ್ಟಬಂಧೋ
ತ್ಸವಮಂ ಮಾಡಲ್ಕೆವೇಟ್ಕುಮಿನ್ನಿರದೆ ವಿಲಾ
ಸವತೀಸುತಂಗೆನುತ್ತಂ
ದವನೀಶಂ ಸಚಿವನೊಳ್ ಸಮಾಲೋಚಿಸಿದಂ ೫೬

ನವರತ್ನವ್ರಾತ ಸರ್ವೌಷಧಿಫಲಮಿಳಿತಾಂಭೋಧಿತೀರ್ಥಾಪಗಾ ವಾ
ರಿ ವಿರಾಜಚ್ಚಂದ್ರಕಾಂತೋಪಲಕಲಶಮನಂದೆತ್ತಿ ಭೂಪಾಲಕಂರೀ
ರವನಾನಂದಾಶ್ರುಧಾರಾತತಿ ನಿಮಿರ್ಪಿನೆಗಂ ಯೌವರಾಜ್ಯಾಭಿಷೇಕೋ
ತ್ಸವಮಂ ಪುತ್ರಂಗಮಾತ್ಯಪ್ರಕರಪರಿವೃತಂ ಮಾಡಿದಂ ಸಾರ್ವಭೌಮಂ ೫೭

ಮರದಿಂ ಮರಕ್ಕೆ ದಾಂಗುಡಿ
ವರಿವೆಳಲತೆಯಂತೆ ನೀತಿಮಾಂಧಾತನೊಳಾ
ವರಿಸಿರ್ದು ರಾಜವಿದ್ಯಾ
ಧರನಲ್ಲಿಗೆ ರಾಜ್ಯಲಕ್ಷ್ಮಿ ನಿಳ್ಕಿದಳಾಗಳ್ ೫೮

ಅಂತು ಕಿಱಿದು ಬೇಗಮಿರ್ಪುದುಂ ಯುವರಾಜಂ ದಿಗ್ವಿಜಯ ಪ್ರಯಾಣಮನೆತ್ತಿಕೊಂಡು

ತುರಗಮಯಂ ನೆಲಂ ಚಮರಜಾಲಮಯಂ ದಿನಮಾತಪತ್ರಪಾಂ
ಡುರಮಯಮಂತರಿಕ್ಷಮಿಭಯೂಥಮಯಂ ದೆಸೆ ಸೃಷ್ಟಿ ಭೂತಳೇ
ಶ್ವರಮಯಮಾತಪಂ ಮಣಿಕಿರೀಟಮಯಂ ಭುವನತ್ರಯಂ ಜಯ
ಸ್ವರಮಯಮಂಬರಂ ಧ್ವಜಮಯಂ ಮದಗಂಧಮಯಂ ಸಮೀರಣಂ ೫೯

ಎಂಬಿನಂ ನಡೆದಖಿಳ ಧಾತ್ರೀನಾಥರಂ ಗೆಲ್ದು ಕೈಲಾಸಶೈಲಾಂತರ ಸ್ಥಳದೊಳ್ ಶೋಭಿಸುತಿರ್ಪ ಸುವರ್ಣಪುರಮಂ ಕೈಕೊಂಡು

ಜಲನಿಧಿಪರಿವೃತ ಧಾತ್ರೀ
ತಲಮಂ ಬಲವಂದು ಪಿರಿದುವಾಸತ್ತ ಬಲಂ
ನಿಲವೇಟ್ಕುಮೆಂದು ನೃಪಕುಲ
ಲಲಾಮನಂತಲ್ಲಿ ಪಲವು ದಿವಸಮನಿರ್ದಂ ೬೦

## ೩. ಮಹಾಶ್ವೇತೆಯ ಸಂದರ್ಶನ

ಅಂತಿರುತ್ತುಮೊಂದು ದಿವಸಂ ಯುವರಾಜನಿಂದ್ರಾಯುಧಮನೇಱಿ ಬೇಂಟೆಯ ವಿನೋದದಿಂ ತೊಳಲುತ್ತುಮಿರೆಯಿರೆ

ಪಿರಿದಪ್ಪಾಶ್ಚರ್ಯ ಪರಂ
ಪರೆ ಸಮನಿಸಲದ್ರಿಶಿಖರದಿಂದಿೞಿದಾಡು
ತ್ತಿರೆಯಿರೆ ನಿಜೇಚ್ಛೆಯಿಂ ಕಿ
ನ್ನರಮಿಥುನಮನವನಿಪಾಲತನಯಂ ಕಂಡಂ ೧

ಜಗದೊಳಗಪೂರ್ವವೆಂಬೀ
ಬಗೆಯಿಂ ತಾಂ ಪಿಡಿವ ತವಕದಿಂ ಭೋಂಕನೆ ಬಂ
ದಗಣಿತಜವಮಂ ಕಿನ್ನರ
ಯುಗದ ಸಮೀಪಕ್ಕೆ ಬಿಟ್ಟನಿಂದ್ರಾಯುಧಮಂ ೨

ಆಗಳ್ ತಮ್ಮೆಡೆಗೆಯ್ತರ್ಪುದಂ ಕಂಡದೃಷ್ಟಪೂರ್ವಮಪ್ಪುದಱಿಂ ಕಿನ್ನರ ದ್ವಯಮತಿಭೀತಿಯಿಂ ಪರಿಯೆ

ಪಿಡಿದಪನೀಗಳಾ ಪಿಡಿಯಲೆಯ್ದಿದನಾ ಪಿಡಿದಪ್ಪನೀಗಳಾ
ಪಿಡಿದನೆ ಕಿನ್ನರದ್ವಯಮನೆಂಬಿನೆಗಂ ಬೞಿಸಂದು ತನ್ನ ಸಂ
ಗಡದವರುಂ ಪರಿಗ್ರಹಮುಮೆಯ್ತರಲಾಱದೆ ಪಿಂದೆ ನಿಲ್ವಿನಂ
ಕಡುಪಿನೊಳಂದು ಬಿಟ್ಟನತಿಶೀಘ್ರದೆ ವಾಜಿಯನಾ ನೃಪೋತ್ತಮಂ ೩

ಛಲದಿಂದರಸಂ ತಾಂ ಬೆ
ನ್ನೊಳೆ ಪರಿದೆಟ್ಟಿಬಿಟ್ಟಿ ಪಿಡಿಯಲನುಗೆಯ್ವುದುಮು
ಸ್ಖಲಿತಂ ಮುಂದಣ ತಾರಾ
ಚಲಶಿಖರಮನೇಱಿದತ್ತು ಕಿನ್ನರಮಿಥುನಂ ೪

ಏಕೆ ನಿರರ್ಥಕಂ ಮಗುವಿನಂದದೆ ಕೋಟಲೆಗೊಂಡೆನಕ್ಕಟಿಂ
ತೇಕೆಯೊ ಕಿನ್ನರದ್ವಯದ ಬೆಂಬಟಿಯುಂ ತಗುಳುತ್ತೆ ಬಂದೆನಿಂ
ತೇಕೆಯೊ ಮೂರ್ಖನಂತೆ ಮತಿಗೆಟ್ಟೆನಿದಂ ಪಿಡಿದಲ್ಲಿ ಬರ್ಪುದೇಂ
ವ್ಯಾಕುಲನಾಗುತುಂ ಪಿಡಿಯದಿರ್ದೊಡೆ ಪೇಟ್ ಕಿಡುವೊಂದು ವಸ್ತುವೇಂ ೫

ಏನಾನೊಂದನೆ ಮಾಡಿದೆಂ ಮಗುವಿನಂತೇನಾನುಮೊಂದರ್ಕೆ ಪೇ
ಡೇನೋ ಕೌತುಕದಿಂದೆ ಬಂದೆನೆನಗೀ ದುರ್ಮೋಹದುದ್ಯೋಗಮಿಂ
ತೇನಾನೊಂದನೊಡರ್ಚತಿಂತಿದೆನುತುಂ ತದ್ವೇಗದಿಂ ವಿಸ್ಮಯ
ಧ್ಯಾನಾಧೀನಮನಸ್ಕನೊಂದಿನಿಸು ಬೇಗಂ ನಿಂದನುರ್ವೀಶ್ವರಂ ೬

ಅಂತು ನಿಂದು

ಪಿರಿದು ಜವಮುಳ್ಳುದಱನೀ
ಹರಿ ನಿಮಿಷಕೆ ಪಿರಿದುವರಿಗುಮನಿತಱೊಳೆನಿತಂ
ತರಮನೆಡೆವರಿಗುಮೋ ಚೆ
ಚ್ಚರದಿಂ ಬಟಸಂದು ಮಱುಗಿ ಬರ್ಪೆನ್ನ ಬಲಂ ೭

ಎಂದು ಚಿಂತಿಸುತುಮಿರ್ಪುದುಂ

ವಸುಧೆಯ ಬಡಗಣ ದೇಶ
ಕ್ಕೆ ಸೀಮೆಯೆನಿಪುದು ಸುವರ್ಣಪುರಮತ್ತಲ್ ಮಾ
ನಿಸರಿಲ್ಲದಡವಿ ಬಟಿಕ
ತ್ತೆಸೆವುದು ಕೈಲಾಸಮೆಂಬುದಾ ನಗಮಿದಿರೊಳ್ ೮

ಅದಱಿಂದೊರ್ವನೆ ತೆಂಕಲಾವುದೆನುತುಂ ನೋಡುತ್ತುಮಿನ್ ಪೋಗವೇ
ಡಿದುದಂತಲ್ಲದೆ ಬೇಱುಪಾಯಮಣಮಿಲ್ಲಂತಲ್ತೆ ತಂತಮ್ಮ ಮಾ
ಡಿದುದಂ ತಾಮುಣವೇಟ್ಕುಮೆಂದು ಪಿರಿದೊಂದುದ್ವೇಗದಿಂದಂ ಮಗು
ಟ್ಚಿದನಿಂದ್ರಾಯುಧಮಂ ನೃಪಾಲತನುಜಂ ರಾಜಾಧಿರಾಜಾತ್ಮಕಂ ೯

ಅಂತು ಕುದುರೆಯಂ ಮಗುಟ್ಚಿ ಮತ್ತಮಿಂತೆಂದಂ

ದಿನಲಕ್ಷ್ಮೀರಶನೈಕಮಧ್ಯಮಣಿಯಾದಂ ಭಾಸ್ಕರಂ ಶ್ರಾಂತಿಯುಂ
ಘನಮಾದತ್ತು ತುರಂಗಮಕ್ಕದಱನಾಂ ನೀರ್ದಾಣಮಂ ನೋಡಿ ಮೆ

ಳ್ಳನೆ ಸಾರ್ದಲ್ಲಿ ಬಟಿಲ್ಕೆಯುಂ ಕಳೆದು ನಾಂ ಪೋಪೆಂ ಬಟಿಕ್ಕೆಂದು ವಾ
ರಿವಾಸಂಗಳನಲ್ಲಿ ನಾಲ್ದೆಸೆಗಳೊಳ್ ನೋೞ್ಕುಂ ಮಹೀವಲ್ಲಭಂ ೧೦

ಅಂತು ನಿರೀಕ್ಷಿಸುತ್ತುಂ ಪೋಗೆವೋಗೆ

ಕುಮುದರಜಂಗಳೊಳ್ ಪೊರೆದು ವಾಃಕಣಜಾಲಮನಾಂತು ಕೂಡೆ ವಿ
ಶ್ರಮಿಸಿ ತರಂಗಮಾಲಿಕೆಗಳೊಳ್ ಕಲಹಂಸನಿನಾದ ಬಂಭ್ರಮ
ದ್ಭ್ರಮರರವಂಗಳೊಳ್ ಬೆರಸಿ ಮಾರುತನೊಯ್ಯನೆ ಬಂದು ತೀಡಿದ
ತ್ತ್ರಮದೋರ್ಸೆದಪ್ಪಿಕೊಂಡು ಕರೆವಂತೆವೊಲಾ ಮನುಜೇಂದ್ರಚಂದ್ರನಂ ೧೧

ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು ರುದ್ರಾಟ್ಟಹಾಸಂ
ಜಲಮಾದತ್ತಲ್ತು ಚಂದ್ರಾತಪಮಮೃತರಸಾಕಾರಮಾಯ್ತಲ್ತು ಹೈಮಾ
ಚಲಮಂಭೋರೂಪದಿಂದಂ ಪರಿಣಮಿಸಿದುದಂತಲ್ತು ನೈರ್ಮಲ್ಯಶೋಭಾ
ಕಲಿತಂ ತ್ರೈಲೋಕ್ಯಲಕ್ಷ್ಮೀಮಣಿಮುಕುರಮೆನಲ್ ಚೆಲ್ವದಾಯ್ತಬ್ಜಷಂಡಂ
೧೨

ಆವುವುಟಿದೆಡೆಗಳೆಂದು ಸ
ರೋವರಮಂ ನೋಡುತಿರ್ಪ ಬಗೆಯಿಂ ಕೈಲಾ
ಸಾವಾಸಮಂ ಬಿಡಂ ಗೌ
ರೀವಲ್ಲಭನೆಂದೊಡಾರಿದಂ ನೆಱೆ ಪೊಗೞ್ವರ್ ೧೩

ಅಳವಱಿಯದೆ ತುರಗಮುಖ
ರ್ಕಳ ಬಟಿವಟಿಯನೆ ತಗುಳ್ದು ಬಂದುದುವಿಾಗಳ್
ಫಳಮಾದತ್ತೊಂದಱೊಳೀ
ಕೊಳನಂ ಕಂಡುದಱೊಳೆನುತೆ ಮತ್ತಂ ಭೂಪಂ ೧೪

ಲಲಿತನಿಜಕನಕಮಯ ಶೃಂ
ಖಲೆಯಿಂ ಹರಿಚರಣಯುಗಳಮಂ ನಿಯಮಿಸಿ ಶಾ
ದ್ವಲತೃಣತತಿಯಂ ಖಡ್ಗದಿ
ನಿಳಾಧಿಪಂ ಕೊಯ್ದು ಮುಂದೆ ಸಾರ್ಚಿದನಾಗಳ್ ೧೫

ಅನಂತರಮಾ ವಿಬುಧಕಮಳಾಕರರಾಜಹಂಸನಾ ಕಮಳಾಕರದೊಳ್
ಕರ ಚರಣ ವದನ ಪ್ರಕ್ಷಾಲನಂಗೆಯ್ದು ಚಾತಕನಂತೆ ಕೃತಜಲಾಹಾರನಾಗಿ

ಚಕ್ರಾಹ್ವಯದಂತೆ ಮೃಣಾಳನಾಳಂಗಳಂ ಮೆಲ್ದು ವಿಯೋಗಿಯಂತೆ ನಳಿನ ದಳಂಗಳನುರದೊಳೊತ್ತಿಕೊಂಡು ತನ್ನೊಳಿಂತೆಂದಂ

ಅಂಚೆಗಳಿಂಚರದಿಂ ತ
ಣ್ಪಿಂ ಚೆಲ್ವಿಂ ಸವಿಯಿನಬ್ಜಘನಸೌರಭದಿಂ
ಕಾಂಚನಕಮಳಾಕರಮಿದು
ಪಂಚೇಂದ್ರಿಯಸುಖಮನೆನಗೆ ಪಡೆದಪುದೀಗಳ್ ೧೬

ಎನುತುಮಲ್ಲಿಂ ಪೊಱಮಟ್ಟು

ಲಲಿತ ಲತಾಗೃಹದಿಂದೂ
ಪಲಮಂ ಸಾರ್ದುಂಡೆಸುತ್ತಿ ಮೇಲುದನಾಗಳ್
ತಲೆಗಿಂಬುಮಾಡಿ ನೃಪಕುಲ
ತಿಲಕಂ ಪಟ್ಟಿರ್ದನಿರ್ಪುದುಂ ತತ್‌ಕ್ಷಣದೊಳ್ ೧೭

ಮುರಿದ ಕೊರಲ್ ಬಱಲ್ದೆ ಳಪಲಾಟಿಪ ಮೆಯ್ ಕಡೆವಾಯ ಲೋಳೆಯೊಳ್ ಪೊರೆದುಗುತರ್ಪ ಪಚ್ಚಪಸಿಯಚ್ಚಗಱುಂಕೆ ಪುರಲ್ದ ದಿಟ್ಟಿ ಕ ತ್ತರಿವೊನೆಗೊಂಡೆಟಲ್ವ ಕಿವಿ ಸೂಚಿಸಿದಪ್ಪುದು ಸೋಲ್ತ ಭಾವಮಂ ತುರಗಮಿದೇನನಾಲಿಸುತುಮಿರ್ದಪುದೆಂದು ನರೇಂದ್ರಚಂದ್ರಮಂ ೧೮

ಅಂದದನಱಿರಿವಟ್ಟು ವೀಣಾವಿದ್ಯಾಧರಂ ಭಾವಿಸಿನೋಡುತ್ತುಮಿರ್ದ ನನ್ನೆಗಂ

ಎಲೆ ಪೆಣ್ದುಂಬಿಯ ಗಾವರ್ದಂಬೊರೆದು ಪೊಣ್ಮುತ್ತಿರ್ದ ಪುಷ್ಪಾಸ್ತ್ರ ಚಾ ಪಲತಾ ಜ್ಯಾರವದಂತಮಾನುಷಮೆನಿಪ್ಪೊಂದೊಪ್ಪಿಯೊಳ್ ಸಂದ ಕಾ ಕಲಿಯಿಂದಂ ಪುದಿದೊಯ್ಯನೊಯ್ಯನೆ ವಿಪಂಚೀನಾದಮಿಂತೀ ಪಳಂ ಚಲೆಯುತ್ತಿರ್ದಪುದಲ್ತೆ (ಸಾಲ್ವುದಿದೆ ತದ್ಗಂಧರ್ವರಂ ಸೋಲಿಸಲ್) ೧೯

ಇದು ಮನುಜರ್ಗಗೋಚರಮೆನಿಪ್ಪ ಹರಾದ್ರಿಯ ತಟ್ಟಲಿಲ್ಲಿ ಗೇ ಯದ ದನಿ ನುಣ್ಪುವೆತ್ತೆಸೆಯುತಿರ್ದಪುದೀಗಳೆ ಪೋಗಿ ನೋಳ್ಪೆನಾ

ನಿದನೆನುತುಂ ಕುತೂಹಲಿತ ಮಾನಸನೆಂದು ನರೇಂದ್ರನಂದನಂ
ಕುದುರೆಯ ಬೆನ್ನ ವಂದು ನಡೆದಂ ಮೃಗಸೂಚಿತ ಗೇಯಮಾರ್ಗದಿಂ ೨೦

ಅಂತು ಪೋಗೆವೋಗೆ

ಇದು ಸಿದ್ಧಾಯತನಂ ಮನಂಗೊಳಿಸಿ ತೋಱುತ್ತಿರ್ಪುದಿಲ್ಲಿಂದೆ ಬಂ
ದುದು ವೀಣಾಧ್ವನಿ ತಪ್ಪದೀ ಯೆಡೆಯೊಳಿರ್ದಾರ್ ಬಾಜಿಸುತ್ತಿರ್ದರೆಂ
ಬುದನಾಂ ನೋಡುವೆನೀಗಳೆಂದು ಮನದೊಳ್ ನಿಶ್ಚೈಸುತುಂ ಮೆಲ್ಲನೆ
ಯ್ದಿದನಾ ಸ್ಥಾನಮನಂದನಂತಮಹಿಮಂ ಭೂಪಾಲವಿದ್ಯಾಧರಂ ೨೧

ಅಂತದನೆಯ್ದಿ ನೋೞ್ಪನ್ನೆಗಮಲ್ಲಿ

ಹರಹಾಸಾವಯವಂಗಳಂತಿರಲನಂತಾನಂತಭೋಗಂಗಳಂ
ತಿರೆ ಪೂರ್ಣೇಂದುಕಲಾಳಿಯಂತಿರೆ ಸಿತಾಬ್ಜಾನೀಕಮೊಪ್ಪಲ್ ಶಿಖಾಂ
ತರದೊಳ್ ನಿರ್ಮಲದಿವ್ಯಮೌಕ್ತಿಕಶಿಲಾಲಿಂಗಂ ಚತುರ್ವಕ್ತ್ರ ಸುಂ
ದರಮಲ್ಲಿರ್ದುದು ರತ್ನಪೀಠಘಟಿತಂ ದೇದೀಪ್ಯಮಾನಪ್ರಭಂ ೨೨

ಅಂತಿರ್ದ ಚರಾಚರಗುರುವಪ್ಪ ಶೂಲಪಾಣಿದೇವರಂ ಕಾಣ್ಬುದುಮಾ ಪರಮೇಶ್ವರನ ಸಕಳಜಗದಭೀಷ್ಟಫಲದಾಯಕಮಪ್ಪ ದಕ್ಷಿಣಾಮೂರ್ತಿಯನಾಶ್ರೈಸಿ

ಅಮೃತಾಂಭೋರಾಶಿಪೂರಪ್ರತಿಮ ನಿಜತಪಸ್ಸಂಚಯಂ ಪರ್ವಿತೋ ಲೋ
ಕಮನೆಂಬಂತಿರ್ದ ದೇಹಾಂಶುಗಳ ಬಳಗದಿಂ ಕಾನನಾನೀಕಮುಂ ದಂ
ತಮಯಂಮಾೞ್ಪಂತೆ ತಾರಾಚಳಮನಸದಳಂ ಸುಣ್ಣಿಪಂತೊರ್ವಳತ್ಯು
ತ್ತಮದಿವ್ಯಾಕಾರೆ ಕುಳ್ಳಿರ್ದ ತನುಹರನನಾರಾಧಿಸುತ್ತಿರ್ದಳಾಗಳ್ ೨೩

ಅಂತುಮಲ್ಲದೆಯುಂ

ಕಡೆದರೊ ಶಂಖದಿಂ ತೆಗೆದರೋ ನವಮೌಕ್ತಿಕದಿಂ ಮೃಣಾಳದಿಂ
ಪಡೆದರೊ ದಂತದಿಂದೆಸೆಯೆ ಮಾಡಿದರೋ ರುಚಿರೋಜ್ಜ್ವಲಾಂಗಮಂ
ಪಿಡಿದರೊ ಕಾಂತಿರಶ್ಮಿಗಳ ಕುಂಚಿಗೆಯಿಂದಮೆ ಕೀರ್ತಿಪೂರದಿಂ
ಮಿಡಿದರೊ ಪೇಳೆನಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ ೨೪

ಪೊಳೆವೆಳನೇಸಱುಂ ತೆಗೆದ ರಶ್ಮಿಗಳಂತೆ ಮಡಲ್ತು ಕಾಂತಿಯುಂ
ತಳೆದೆಳಮಿಂಚಿನೊಳ್ದಳಿರ್ಗಳಂತೆ ಕವಲ್ತು ಮೃಗಾಂಕಮೌಳಿ ನಿ
ರ್ಮಳಪದ ಭಸ್ಮರೇಣುಗಳೆನಲ್ ನವಮಜ್ಜನವಾಃಕಣಂಗಳಂ
ತಳೆದು ಪೆಗಲ್ಪರಂ ಬಳೆದು ರಂಜಿಸುಗುಂ ಜಡೆಗಳ್ ಮೃಗಾಕ್ಷಿಯಾ ೧೫

ಶಿವನಾಮಾಂಕಿತಮಂ ರ
ತ್ನ ವಿರಚಿತಮನುತ್ತಮಾಂಗದೊಳ್ ಪಾದಯು
ಗ್ಮವನೆಸೆಯೆ ತಳೆದು ಭಕ್ತಿಯೆ
ಭವಸನ್ನಿಧಿಯಲ್ಲಿ ರೂಪುಗೊಂಡಂತಿರ್ದಳ್ ೧೬

ವನರುಹನಾಭಸನ್ನಿಭ ನೇತ್ರಪಂಕಜಬೀಜಮೊ ಪದ್ಮಗರ್ಭನಾ
ನನದೆ ಪೊರ್ದಿದ ವೇದವಿಮಳಾಕ್ಷರಮಾಲೆಯೊ ಕಣ್ಣು ಸೋಂಕು ಪಾ
ವನತರಮೆಂದು ಸಪ್ತಮುನಿಮಂಡಲಮಿರ್ಪುದೊ ಬಂದು ಪೇೞೆನಲ್
ವನಿತೆಯ ಮೌಕ್ತಿಕಾಕ್ಷವಲಯಂ ಕೊರಲ್ಗೊಳ್ ಕರಮೊಪ್ಪಿ ತೋಱುಗುಂ ೧೭

ಎಳವೆಱೆಯೊಳದಿರ್ಗಳ್ ಬಂ
ದೆಳಸಿದುವೀಶ್ವರನ ಸನ್ನಿಧಾನದೊಳೆಸೆವೀ
ಲಲಿತಾಂಗಿಯನೆಂಬಿನೆಗಂ
ಪೊಳೆಯುತ್ತುಂ ಬ್ರಹ್ಮಸೂತ್ರಮೇನೊಪ್ಪಿದುದೋ ೧೮

ದಿವಿಜತೆಯಿಂ ದಿವಸಂಗಳ
ಪವಣಱಿಯಲ್ಬಾರದಾದೊಡಂ ಸೊಗಯಿಸಿ ತೋ
ರ್ಪವಯವದಿಂದಂ ಪದಿನೆಂ
ಟು ವರಿಸದಾಕೃತಿಯನಬ್ಜಮುಖಿ ಕಣ್ಗೆಸೆದಳ್ ೧೯

ಒದವಿದ ಭಕ್ತಿಯಿನೀಶನ
ಹೃದಯದೊಳಿರ್ದಪಳೆನಲ್ಕೆ ನವಮೌಕ್ತಿಕಲಿಂ
ಗದ ನಡುವೆ ರೂಪು ಪೂರ್ತೊಳ
ಗಿದುದೆತ್ತಂ ವಿಮಲಕಮಲದಳಲೋಚನೆಯಾ ೨೦

ರಸಮೊಸರ್ವಂತು ಪಾಡುತಿರೆ ಶುದ್ಧಮನೋಮಣಿದೀಪ್ತಿ ಪೊಣ್ಮಿ ರಾ
ಜಿಸಿದಪುದೋ ಸ್ತುತಿಪ್ರಕರನಿರ್ಮಳವರ್ಣಸಮೂಹಮೊತ್ತುಗೊಂ

ಪೆಸೆವುದೊ ಪೇಡೆನಲ್ ಪ್ಪೊಳೆವ ದಂತಮರೀಚಿಗಳಿಂದಮೀಶ್ವರಂ
ಗೊಸೆದಭಿಷೇಕಮಂ ಮಗುಳೆ ಮಾಡುವಪೊಲ್ ಬಗೆಗೊಪ್ಪಿ ತೋಱಿದಳ್ ೩೧

ಅಂತು ವಿರೂಪಾಕ್ಷದೇವರನಾರಾಧಿಸುತ್ತುಮಿರ್ದ

ಅತಿಗಂಭೀರೆಯನೂರ್ಜಿತ
ಮತಿಯಂ ನಿರ್ಮಳೆಯನಮಳಧೈರ್ಯಾದಿ ಗುಣಾ
ನ್ವಿತೆಯಂ ದೃಢಪಾಶುಪತ ಶಿವ
ವ್ರತೆಯಂ ಕನ್ಯಕೆಯನಂದು ಕಂಡಂ ಕ್ಷಿತಿಪಂ ೩೨

ಅಂತು ಕಂಡವನಿತಳಕ್ಕವತರಿಸಿ ತುರಂಗಮನೊಂದು ತರುಶಾಖೆಯೊಳ್ ಕಟ್ಟಿ ಭಗವದಿಂದುಮೌಳಿಯ ಪುರೋಭಾಗದೊಳ್ ನಿಂದು ಪ್ರೊಡಮಟ್ಟು ದಿವ್ಯ ಕಾಂತೆಯ ರೂಪಸಂಪತ್ತಿಗಂ ಕಾಂತಿಗಮುಪಶಾಂತಿಗಂ ವಿಸ್ಮಯಂಬಟ್ಟು ನೋಡುತ್ತುಮಿರ್ದು

ಕಿನ್ನರಯುಗ್ಮಮೆತ್ತ ವನಮೆತ್ತ ಸರೋರುಹಷಂಡಮೆತ್ತ ಗೀ
ತಂ ನಯದಿಂದೆ ಬಂದೆಸೆವುದೆತ್ತ ಭವಾಲಯಮೆತ್ತ ಭೋಂಕನೀ
ಕನ್ನೆಯ ಕಾಣ್ಕೆಯೆತ್ತ ಮನುಜಂಗೆನಗೆಂದು ನರೇಂದ್ರನಂದನಂ
ತನ್ನೊಳೆ ತಾನೆ ವಿಸ್ಮಯದೆ ಭಾವಿಸುತಿರ್ದನದೊಂದು ಜಾವಮಂ ೩೩

ಅಂತು ಭಾವಿಸುತ್ತುಮಿರ್ದು

ಮನುಜನನೆನ್ನನೀಕ್ಷಿಸಿ ಭವಾದ್ರಿಯನೇಱದೆ ನಾಡೆ ನೋಡಿ ತೊ
ಟ್ಟನೆ ಕೊಳೆ ಮಾಯವಾಗದೆ ನಭಕ್ಕೊಗೆದಾಗಳೆ ಪೋಗದಿರ್ದೊಡೊ
ಯ್ಯನೆ ಬೆಸಗೊಳ್ವೆನಾರ್ಗೆ ಸತಿ ನೀಂ ಪೆಸರೇಂ ನಿನಗಿಂತು ತೋರ್ಪ ಜ
ವ್ವನದೊಳಗೀ ತಪಕ್ಕೆ ಗುಱುಮಾಡಿಸಿದುಬ್ಬೆಗಮಾವುದೆಂಬುದಂ ೩೪

ಎಂದು ಭಾವಿಸುತ್ತುಮಾ ರಮಣೀಯದೇವಾಯತನ ಸ್ತಂಭಮಂ ನೆಮ್ಮಿ ನಿಂದಿರ್ದು ತದಂಗನಾ ಗೀತಾವಸಾನಸಮಯಮಂ ಪಾರುತ್ತುಮಿರ್ಪುದುಂ

ಮೃದುಮಧುರ ವಲ್ಲಕೀಗೇ
ಯದ ದನಿ ಮಾಣಲ್ಕೆ ಗೀತದವಸಾನದೊಳು
ನ್ಮದಮಧುಕರಧ್ವನಂ ಪೋ
ಣ್ಮದ ಕುಮುದಿನಿಯಂತೆ ಕಾಂತೆ ಕಣ್ಗೆಸೆದಿರ್ದಳ್ ೩೫

ಅನಂತರಮಾಕೆ ತ್ರೈಲೋಕ್ಯರಕ್ಷಾಮಣಿಯಂ ಪ್ರದಕ್ಷಿಣೀಕರಣ ಪೂರ್ವಕಂ ನಮಸ್ಕರಿಸಿ

ಒಸೆದಾಶ್ವಾಸಿಸುವಂತೆ ಪುಣ್ಯತತಿಯಿಂದಂ ಮುಟ್ಟುವಂತಚ್ಛತೀ
ರ್ಥಸಮೂಹಾಂಬುಗಳಿಂದಮಂದಭಿಷವಂ ಮಾಳ್ಪಂತೆ ಪೂತತ್ವಮಂ
ಪಸರಿಪ್ಪಂತೆ ಬರಂಗಳಂ ಪದಪಿನಿಂದೀವಂತೆ ದೃಕ್ತೃಪ್ತಿ ರಾ
ಜಿಸೆ ದಿವ್ಯಾಂಗನೆ ನೋಡಿದಳ್ ತೆಗುಳ್ದು ಚಂದ್ರಾಪೀಡಭೂಪಾಲನಂ ೩೬

ಸ್ವಾಗತಮೇ ನಿನಗ್ಗೆ ಮಹಾ
ಭಾಗನೆ ಮೆದ್ದೋ ಮಿಗೆಂತು ಬಂದಯ್ ನೀನ
ಭ್ಯಾಗತನಾಗಲ್ವೇಡ್ಕೆಂ
ದಾಗಳ್ ನೃಪಸುತನನೆಟ್ಟಱಿಂ ಸತಿ ನುಡಿದಳ್ ೩೭

ಅಂತು ನುಡಿದನಿತಱೊಳೆ ಕೃತಾರ್ಥನಾದೆನೆಂದು ಬಗೆಯುತ್ತುಂ ದೇವಿಯರ್ ಬೆಸಸಿದಂತೆ ಗೆಯ್ವೆನೆಂದಾ ಕಾಂತೆಯ ಬೆಂಬಿಡಿದು ನಡೆವ ಶಿಷ್ಯನಂತೆ ಪೋಗೆಪೋಗೆ ಕಿಱಿದಂತರದೊಳ್

ಕಾಲದ ಮರ್ವು ಪರ್ವಿದವೊಲಿರ್ದ ತಮಾಲವನಂಗಳಿಂದೆ ಭೃಂ
ಗಾಳಿಯ ಗಾವರಂ ಪುದಿದ ಪುಷ್ಪಲತಾಗೃಹದಿಂದೆ ಚಂದ್ರಿಕಾ
ಜಾಲದವೋಲ್ ಕೆಲಂಬಿಡಿದು ಭೋರ್ಗರೆಯಲ್ ಸುರಿತರ್ಪ ನಿರ್ಝರಾ
ಸ್ಫಾಲನ ಶೀಕರಪ್ರಸರದಿಂದೆಸೆದತ್ತು ಬೃಹದ್ಗುಹಾಂಗಣಂ ೩೮

ಅಂತಾ ಗುಹಾಂಗಣದ ಮುಂದೆ ನಿಂದು ನೋಳ್ಪಲ್ಲಿ

ಅದು ಸುರಭೂಜವಲ್ಕವಸನದ್ವಯಮಂತದು ದಂಡಮಲ್ಲಿ ನೇ
ಱಿದುದದು ಜೋಗವಟ್ಟಿಗೆ ಕಮಂಡಲವಂತದು ಭಸ್ಮಶಯ್ಯೆಯಂ
ತದು ಶಶಿಮಂಡಲಾಕೃತಿವೊಲಿರ್ದುದು ಶಂಖದ ಪಾತ್ರೆಯೆಂದು ನೋ
ಡಿದನತಿವಿಸ್ಮಯಂಬೆರಸು ತದ್ಗುಹೆಯಂ ನೃಪರೂಪಚಂದ್ರಮಂ ೩೯

ಅನಂತರಮಾ ದಿವ್ಯತಪಸ್ವಿನಿ ಮಾಟ್ಪ ತಿಥಿಪೂಜೆಯಂ ವಿನಯ ಪುರಸ್ಸರಂ ಕಯ್ಕೊಂಡು ದರ್ಭಾಸನದೊಳ್ ಕುಳ್ಳಿರಲಾ ನಿತಂಬಿನಿ

ರಕ್ಷಾಂಕಿತ ತನು ಮೆಲ್ಲನೆ
ವೃಕ್ಷಂಗಳ ಕೆಟಗೆ ಪೋಗಿ ನಿಂದಿರ್ದಾಗಳ್
ಭಿಕ್ಷಾಂ ದೇಹಿಯೆನಲ್ಕಂ
ತ ಕ್ಷಣದೊಳ್ ತೀವಿದತ್ತು ಭಿಕ್ಷಾಪಾತ್ರಂ ೪೦

ಅಂತು ತೀವಿದ ಭಿಕ್ಷಾಪಾತ್ರದ ಪಣ್ಫಲಂಗಳಂ ತಂದು ಕುಡೆ ನಿರ್ಝರ ಜಲಂಗಳೊಳ್ ಮಿಂದು ಅವ ತರಸಸ್ವಾದುಗಳಪ್ಪ ತತ್ಫಲಂಗಳಂ ಮೆಲ್ದು ನೀರಂ ಕುಡಿದೊಂದುದೆಸೆ ತೊಲಗಿರ್ಪುದುಮಾ ಕನ್ನಿಕೆಯುಂ ಕೃತ ಫಲಜಲಾಹಾರೆಯಾಗಿ ಬಂದೊಂದು ಶಿಲಾತಳದೊಳ್ ಕುಳ್ಳಿರ್ದು ನೋಡುತ್ತುಮಿರ್ಪುದುಮಾ ಗಾಂಭೀರ್ಯರತ್ನಾಕರನುಮನತಿದೂರಮಪ್ಪ ಶಿಲಾತಲದೊಳ್ ವಿಶ್ರಮಿಸಿ ತನ್ನ ಬಂದ ವೃತ್ತಾಂತಮನೆಲ್ಲಮಂ ನೆಱೆಯೆ ಪೇೞ್ದು ಮತ್ತಮಾ ದಿವ್ಯಕಾಂತೆಯನಿಂತೆಂದಂ

ಪಿರಿದೆನಿಸಿರ್ದ ನಿಮ್ಮಯ ಪ್ರಸಾದಮನಾಂ ಪಡೆದೊಂದು ಗರ್ವದಿಂ
ಪರಿಚಿತನಂತೆ ಬಿನ್ನವಿಸಲುಂ ಬಗೆದಂದಪೆನೆಂತುಟಲ್ತೆ ಬಿ
ತ್ತರಿಪೊಡಧೀರರಪ್ಪ ಮನುಜರ್ ಪ್ರಭುಗಳ್ ದಯೆಯಿಂದೆ ತಮ್ಮನಾ
ದರಿಸಿದೊಡಾಗಳಂತೆ ಗಟಪಲ್ ಬಗೆದಪ್ಪುದಿದಾವ ವಿಸ್ಮಯಂ ೪೧

ಆದೊಡಂ

ಮನುಜಂಗೆ ಕೌತುಕಾವಹ
ಮಿನಿತೊಂದಾಶ್ಚರ್ಯಮದಱಿನಿನ್ ಬೆಸಗೊಳ
ಲ್ಕನುಗೆಯ್ಯುತ್ತಿರ್ದಪುದೀ
ಮನಮನನುಗ್ರಹಿಸಿ ದೇವಿ ಪೇೞಲ್ವೇೞ್ಕುಂ ೪೨

ಸುರಮುನಿಸಿದ್ಧಖೇಚರರೊಳಾವ ಕುಲಂ ನಿಜಜನ್ಮದಿಂದಲಂ
ಕರಿಸಿತೊ ಪಂಚಭೂತಮಯಮಾಗಿಯುಮೀ ತನುವಿಂದುಕಾಂತಿಯಂ
ತಿರೆ ಪೊಳೆಯುತ್ತುಮಿರ್ದಪುದಿದೇಂ ಪೊಸಜವ್ವನವೇಳ್ಗೆಯೊಳ್ ತಪ
ಶ್ಚರಣಮಿದೇಂ ಪೊದಳ್ದಿಡಿದ ಕಾನನದೊಳ್ ಬಡದೊರ್ಬಳಿರ್ಪುದೇಂ ೪೩

ಎಂದು ಬೆಸಗೊಳ್ವುದಂ ಕಿಱಿದು ಬೇಗಂ ತನ್ನೊಳ್ ತಾನೆ ಭಾವಿಸಿ

ಪೊಳೆವಲರ್ಗಣ್ಗಳಿಂ ಪಿಳಿರ್ವ ಬೆಳ್ಪು ರಸಾತ್ಮಕವಾಗಿ ಗಂಡಮಂ
ಡಳತಳದಿಂದಮುಂದಿಟಿಯುತಿರ್ದುದೆನಲ್ ನೆಯನ್ನಾಂಬು ಲೋಚನಂ
ಗಳಿನಿರದುಣ್ಮೆ ಶಬ್ದಮಣಮಿಲ್ಲದೆ ತೊಟ್ಟನೆ ಕಣ್ಮುಗುಟ್ಟಿಳ
ಗ್ಗಳಿಪಬಲಿಂದೆ ಮಾನಿನಿ ಮನಕ್ಕತಿವಿಸ್ಮಯವಾಗೆ ಭೂಪನಾ ೪೪

ಅಂತಾ ಕಾಂತೆ ಶೋಕಾಕ್ರಾಂತೆಯಾಗಿ

ರಸೆಯಂ ತಾಂ ತಾಂಕಿ ಕಲ್ಪಾಂತದ ಬಜಸಿಡಿಲೆಯ್ತಂದು ಪೊಯ್ಯಲ್ ನೆಲಂ ಕಂ
ಪಿಸುವಂತತ್ಯಂತಶೋಕಾಕುಲತೆಯಿನೆಬುತಿರ್ದಪ್ಪಳೋರಂದದಿಂ ಮು
ಟ್ಟಿಸಲಿನ್ನಾರಾರ್ಪರೀ ಶೋಕಮನೆನ್ನುತೆ ಭಯಂಗೊಂಡದೆತ್ತೆತ್ತಲೀಗಳ್
ಬೆಸಗೊಂಡೆಂ ಕೆಮ್ಮನೆಂದುಮ್ಮಳಿಸಿ ಪಿರಿದುಮಂದಾ ನೃಪಂ ವ್ಯಗ್ರನಾದಂ
೪೫

ಅಂತು ನೃಪನತಿವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡ
ವಿಯೊಳಂಜುಳಿಯಿಂ ಜಲಮಂ ತಂದು ದೇವಿಯರವಧಾರಿಸುವುದೆಂದು
ಭೂಪನಿಳಿಂಪನುಪರೋಧಿಸುತ್ತುಮಿಜಿಯೆ

ಅಳವಿಲ್ಲದಬುತ್ತಿರೆ ಕೆಂ
ಪೆಳಸಿದ ಬಾಷ್ಪಾಂಬುಪೂರ್ಣಲೋಚನಮಂ ತ
ಜ್ಜಳದಿಂದೆ ಕರ್ಚಿ ವಲ್ಕಾಂ
ಚಲದಿಂ ನಿಜವದನಬಿಂಬಮಂ ಸತಿ ತೊಡೆದಳ್ ೪೬

ಅಂತಾ ಕಾಂತೆ ಶೋಕಾಕ್ರಾಂತೆಯಾಗಿರ್ಪುದಂ ಕಂಡಿಂತಪ್ಪವರು
ಮಬುವಂದಮದ್ಭುತಮೆಂದು ಮನದೊಳ್ ಭಾವಿಸುತ್ತುಮಿರೆ

ಉರಗಮುಖೋಗ್ರದಂಷ್ಟ್ರ ಸಹಜಾತೆಯನೂರ್ಜಿತಕಾಲಪಾಶ ನಿ
ಷ್ಠುರತರರೂಪೆಯಂ ಸಹಜಶಾಕಿನಿಯಂ ವಿಷಕನ್ಯಕಾ ಸಹೋ
ದರಿಯನಪಾರಘೋರ ದುರಿತಾರ್ಣವ ಜಾತೆಯನಾತ್ಮವಲ್ಲಭಾಂ
ತರಿತೆಯನೆನ್ನನಣ್ಣ ಬೆಸಗೊಳ್ವುದೆ ಪೇಳ್ವೆನೆ ತತ್ಪ್ರಪಂಚಮಂ ೪೭

ಗತಭಾಗ್ಯೆಯೆನಿಪ ಪಾಪಾ
ನ್ವಿತೆಯಂ ಪತಿದುಃಖಭಾಜನೆಯ ವೃತ್ತಾಂತ
ಸ್ಥಿತಿಯನದೇಂ ಕೇಳ್ದಪೆ ನೃಪ
ಸುತ ಕೌತುಕಮೆಂಬೆಯಪ್ಪೊಡುಸಿರ್ದಪೆನೀಗಳ್ ೪೮

## ೪. ಮಹಾಶ್ವೇತೆಯ ವೃತ್ತಾಂತ

ಅದೆಂತೆಂದೊಡೆ—ತ್ರಿದಿವದೊಳಚ್ಚರಸಿಯರಿರ್ಪುದು ನಿಮಗೆ ವಿದಿತಮವರೊಳ್ ಸೋಮಮಯೂಖಸಂಭವೆಯುರಪ್ಪಚ್ಚರಸಿಯರೊಳಗಮೃತಾಂಶುನಿಭಾಸ್ಯೆ ಗೌರಿಯೆಂಬಳ್ ಪುಟ್ಟಿದಳ್ ಮತ್ತಂ ದಕ್ಷಪ್ರಜಾಪತಿಯ ಕನ್ನೆಯರಿಂದುದಯಿಸಿದ ಗಂಧರ್ವಕುಲದೊಳ್ ಪುರಂದರ ಪರಮಪ್ರಿಯಮಿತ್ರಂ ಹಂಸನೆಂಬನೊರ್ವಂ ನೆಗೞ್ದಂ

ಇಂಗಡಲಿಂಗಮರನದೀ
ಸಂಗಂ ಸಂಘಟಿಪ ತೆಱದೆ ಗಂಧರ್ವಕುಲೋ
ತ್ತುಂಗನೆನಲ್ ನೆಗೞ್ದಾ ಹಂ
ಸಂಗಾದುದು ಗೌರಿಯೊಳ್ ವಿವಾಹೋತ್ಸಾಹಂ ೧

ಸಮವಂಶದೆ ಸಮರೂಪದೆ
ಸಮವಿಭವದೆ ಸಮವಯೋವಿಲಾಸದೆ ಸಮಸ
ತ್ತ್ವಮನದೆ ಸಮಾನುರಾಗದೆ
ಸಮಸಂದತ್ತವರ್ಗೆ ಸಮವಯೋಯೋಗಸುಖಂ ೨

ನಿನಗೇಂ ಪೇೞ್ವೆನಾಂ ಮಹಾತ್ಮರೆನಿಸಿರ್ದರ್ ತಂದೆಗಂ ತಾಯ್ಗಂ ಪೊರ್ನೆ ನಿರ್ಭಾಗ್ಯನಿವಾಸೆಯೆಂ ನಿಖಿಲಪಾಪಾಕಾರೆಯೆಂ ದುಃಖಭಾಜನೆಯೆಂ ಪುಟ್ಟಿದೆನೆನ್ನನೀಕ್ಷಿಸಲೊಡಂ ತಾತಂ ಮಹಾಶ್ವೇತೆಯೆಂದನುರಾಗಂಬೆರಸಿಟ್ಟನೆನ್ನ ಪೆಸರಂ ಗಂಧರ್ವಚಕ್ರೇಶ್ವರಂ

ಅಂತು ನಿಜಜನನೀಜನಕರ್ ಪಲಕಾಲಮನಪತ್ಯರಪ್ಪುದಱಿಂ ಪುತ್ರನಿಂದಗ್ಗಳಮಪ್ಪ ಪರಮಪ್ರೀತಿಯಿಂ ನಡಪುತ್ತುಮಿರೆ ಕೆಲವು ದಿವಸದೊಳ್ ವಿದಿತಸ್ನೇಹಶೋಕಾಯಾಸಮಪ್ಪ ಶೈಶವಂ ಪತ್ತುವಿಡುವುದುಂ

ಎಸೆವ ವಸಂತಮಾಸದೆ ವಸಂತಮನಾಂತ ಕುಜಾತಪಲ್ಲವ
ಪ್ರಸರದಿನಾ ವಸಂತಸಮಯಂ ಕುಸುಮಾವಳಿಯಿಂದೆ ಪಲ್ಲವಂ
ಮಿಸುಪಳಿಮಾಲೆಯಿಂ ಕುಸುಮಮಂಜರಿ ರಂಜಿಸುವಂತಿರಲ್ ವಿಜೃಂ
ಭಿಸಿದುದು ಯೌವನೋದಯ ವಿಲಾಸಮನುಕ್ರಮದಿಂ ಮದಂಗದೊಳ್ ೪

ಆಗಳೊರ್ಮೆ ವಸಂತದೊಳುಳ್ಳಲರ್ದ ನವನಳಿನ ಕುಮುದ ಕುವ ಲಯ ಕಲ್ಹಾರಂಗಳಿಂ ಕಣ್ಗೊಳಿಪಚ್ಛೋದಸರಸಿಗೆ ಜನನಿವೆರಸು ಮಜ್ಜನ ಕ್ಕೆಂದು ನಡೆತಂದು ನೋಟ್ಪಲ್ಲಿ ಮುಂದೆ ಮುನಿಕುಮಾರನೊರ್ವನೆಯ್ತ ರುತಿರೆ

ಕರತಳಮೊಂದಱೊಳ್ ಮಣಿಕಮಂಡಲು ನಾಳಸಮೇತಮಪ್ಪ ಕೇ
ಸರಫಲದಂತಿರಿರ್ದುದು ಮನೋಜವಿನಾಶದಿನಟ್ಟ ತನ್ಮನೋ
ಹರಿಯ ಪೊದಳ್ದ ಕಣ್ಬನಿಗಳಂತೆಮಲಸ್ಫಟಿಕಾಕ್ಷಮಾಲೆ ಸುಂ
ದರತರಮಾದುದೊಂದು ಕರಪಲ್ಲವದೊಳ್ ಮುನಿಪಾಗ್ರಗಣ್ಯನಾ ೫

ತನಗನುರೂಪಮೆಂಬಿನೆಗಮೊರ್ವ ಕುಮಾರ ತಪಸ್ವಿ ದೇವತಾ
ರ್ಚನೆಗೆ ವನಕ್ಕೆ ಬಂದು ಪೊಸವೂಗಳನಟ್ಟಯೊಳಾಯ್ದು ಕೊಯ್ದು ಬೆ
ನ್ನನೆ ಬರಲೀ ವನಾಂತರಸರೋವರದಲ್ಲಿಗೆ ಮಿಾಯಲೆಂದು ಮೆ
ಲ್ಲನೆ ಬರುತಿರ್ದ ತನ್ಮುನಿಕುಮಾರನನಾಂ ಬಿಡೆ ನೋಡಿದೆಂ ನೃಪಾ ೬

ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋ
ತ್ಕರಮುಮನಿಂದುಮಂಡಲಮುಮಂ ಮೊದಲೊಳ್ ಸಮೆದಬ್ಜಜಂ ಮನೋ
ಹರಮೆನೆ ಮಾಡಿದೀ ಮೊಗದ ಪೋಲ್ವೆಗೆ ಮುನ್ ನೆಗಟಿಲ್ ತಗುಳ್ಚಿ ಬಿ
ತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ ೭

ಎಂದು ಭಾವಿಸಿ

ನವಯೌವನದೊಳ್ ಗುಣದೋ
ಷವಿಚಾರಮನಿಂತು ಮಾಡಲೀಯದ ಭಾವೋ
ದ್ಭವನಿಂ ಪರವಶೆಯಾದೆಂ
ನವಕುಸುಮಾಸವದೆ ಸೊರ್ಕಿದಳಿನಿಯು ತೆಱದಿಂ ೮

ನಿಯತೇಂದ್ರಿಯನೊಳ್ ತೇಜೋ
ಮಯನೊಳ್ ರೂಪೈಕಪಕ್ಷಪಾತದೆ ನೆಱೆ ನೀ
ತಿಯನುಳಿದು ಮುನಿಪನೊಳ್ ನಿ
ರ್ಭಯನಂಗಜನೆನ್ನನಿಂತಿರಲ್ ಸೋಲಿಕುಮೇ ೯

ಪಲಬರ್ ಕಾಂತೆಯರೊಲ್ದು ಪೋದರೊಳರೆಂತುಂ ಕಾಂತರೊಳ್ ಬೇಟವ
ಗ್ಗಲಿಸಲ್ ಕಾಣದೆ ಲಜ್ಜೆಗೆಟ್ಟರೊಳರಿಂತೀ ಲೋಕದೊಳ್ ರೂಪುಗಾ
ಣಲೊಡಂ ತೊಟ್ಟನೆ ಲಜ್ಜೆಗೆಟ್ಟುಱಿವುಗೆಟ್ಟೆನ್ನಂತೆ ಕಣ್ಗೆಟ್ಟು ಪೇ
ಡೊಲವಿಂದೆಂತೆರ್ದೆಗೆಟ್ಟರಾರೆನುತುಮತ್ಯೌತ್ಸುಕ್ಯಮಂ ತಾಳ್ದಿದೆಂ ೧೦

ಅಂತಾಶ್ಚರ್ಯಮುಂ ತಳೆದು ಸನ್ನಸಾನೆ ಸಂತೈಸಿ

ಎನ್ನೆವರಂ ಸಚೇತನೆಯೆನೆನ್ನೆವರಂ ಲಘುವಾಗದಿರ್ಪೆನೋ
ಅನ್ನೆಗಮೀಗಳೀ ಯೆಡೆಯಿನಾಂ ತೊಲಗಿರ್ಪುದು ಕಜ್ಜಮಲ್ಲದಂ
ದೆನ್ನಯ ಮನ್ಮಥೋಚಿತವಿಕಾರಮನೀಕ್ಷಿಸಿ ಸೋಲ್ತಳಕ್ಕಟಾ
ಎನ್ನದೆ ಶಾಪಮಂ ಕುಡುವನೆಂತುಟೆ ಕೋಪಿಗಳಲ್ತೆ ತಾಪಸರ್ ೧೧

ಎಂದು ಪೋಗಲುದ್ಯೋಗಂಗೆಯ್ದು ನಿಖಿಳಜನಪೂಜಾರ್ಹರನವಜ್ಞೆ
ಗೆಯ್ಯಲಾಗದೆಂದು

ತೊಳಗುವ ಚಿನ್ನಪೂಗಳಲಕಾವಳಿಯೊಳ್ ಮಿಱುಗಲ್ ಕಪೋಲಮಂ
ಡಳತಲದೊಳ್ ತೆಜಂಬೊಳೆಯೆ ಕೋಮಲಪಲ್ಲವಕರ್ಣಪೂರಮಂ
ಜುಳಮಣಿಕುಂಡಲಂ ಪೆಗಲೊಳಾಡೆ ಮರಳ್ದೆಱಿಕ್ಕದಾಂ ಮುನಂ
ಗೊಳಿಪ ಮುನೀಂದ್ರಸೂನನಮನೀಕ್ಷಿಸುತುಂ ಪೊಡವಟ್ಟೆನೆಟ್ಟಱಿಂ ೧೨

ತದನಂತರಂ

ಮದನಂ ದುರ್ಜಯನಿಂದ್ರಿಯಂಗಳನಿವಾರ್ಯಂಗಳ್ ವಸಂತಂ ಮದ
ಪ್ರದನಾ ಸ್ಥಾನವತೀವರಮ್ಯಮೆನಗಂ ದುಃಖಂಬರಲ್ವೇಳ್ಕುಮೆ
ಪ್ಪುದಱಿಂ ಭಾವಿಸಿ ಮದ್ವಿಕಾರಮನೆ ನೋಡುತ್ತಿರ್ಪುದುಂ ಗಾಳಿಗೊ
ಡ್ಡಿದ ದೀಪಾಂಕುರದಂತೆ ತನ್ನ ನಿಯಮಮಂ ಕಾಮಂ ಚಲಂ ಮಾಡಿದಂ ೧೩

ಅಂತು ಮಾಡೆ

ಪೆಸರೇನಾರ್ಗೀತನೀ ಜಪ್ಪಸಿಗ ತವಸಿ ತೊಟ್ಟಿರ್ಪ ಕರ್ಣಾವತಂಸಂ
ಪೊಸತೀ ಲೋಕಕ್ಕಿದಾವಂಘ್ರಿಪದ ಪೊಳೆವಪೂಗೊಂಚಲಿಂದಾದುದೋ ನೀಂ
ಬೆಸಸಲ್ವೇಳ್ಕಿಂತಿದಂ ಕೌತುಕಮೆನಗೆನುತುಂ ನಮಸ್ಕಾರಪೂರ್ವಂ
ಬೆಸಗೊಂಡೆಂ ತನ್ಮುನೀಂದ್ರಾನುಚರಮುನಿಯನಾನಂದತಿಪ್ರೀತಿಯಿಂದಂ [೧೪

ಅಂತು ಬೆಸಗೊಳೆ

ಬೆಸಗೊಳ್ವುದಱಿಂದಿದನು
ದ್ದೆಸವಾವುದು ತರುಣಿ ನಿನಗೆ ಕೌತುಕಮೆನೆ ಕೇ
ಳಿಸಿರ್ದಪೆನೆಂದಾ ಮುನಿಪಂ
ನಸುನಗುತುಂ ಪೇೞಲಾಗಳುದ್ಧೃತಸಾದಂ ೧೫

ಅದೆಂತೆನೆ ಶ್ವೇತಕೇತು ಮಹಾಮುನಿಗಂ ಲಕ್ಷ್ಮಿಗಂ ಕುಮಾರಂ ಪುಂಡರೀಕನೆಂಬೊನೀತಂಗೆ ಶೈಶವಂ ಪತ್ತು ವಿಡಲೊಡಮಖಿಳವಿದ್ಯಾಕಲಾಪ ದೊಳ್ ಪರಿಣತನಂ ಮಾಡಿ ಯತಿತ್ವಮಂ ಕಯ್ಕೊಳಿಸೆ ತದನುಷ್ಠಾನಪರಾ ಯಣನಾದ ಮಹಾನುಭಾವನೀತಂಗೀ ವ್ರತವಿರುದ್ಧಮಪ್ಪ ಕುಸುಮಮಂಜ ರಿಯೆಂತು ಬಂದುದೆಂಬೆಯಪ್ಪೊಡೆ

ಇಂದು ಚತುರ್ದಶಿಯಪ್ಪುದ
ಱಿಂದಂ ಕೈಲಾಸವಾಸಿಯುಂ ಕಾಣಲ್ಕಾ
ನಂದದೆ ದಿವದಿಂದಿರ್ಬರು
ಮೊಂದಾಗಿ ಬರುತ್ತುಮಿರ್ಪುದುಂ ತತ್‌ಕ್ಷಣದೊಳ್ ೧೬

ವನದೇವತೆಯೊರ್ವಳ್ ಬಂದು ಪೊಡವಟ್ಟು ಭುವನತ್ರಯಾಭಿರಾಮ ಮಪ್ಪ ನಿನ್ನ ಸೌಕುಮಾರ್ಯಕ್ಕೆ ತಕ್ಕಲಂಕಾರಮೀ ದಿವ್ಯಕುಸುಮಮಂಜರಿಯ ನವತಂಸಂ ಮಾಡಿ ಪಾರಿಜಾತಜನ್ಮಮಂ ಸಫಲಂಮಾಳ್ಪುದೆಂದು ಬಿನ್ನವಿಸೆ ನಿಜರೂಪ ಸ್ತುತಿಗೆ ಲಜ್ಜಿಸಿ ಕೇಳದಂತೆ ಪೋಗೆ ಮತ್ತಂ ಬೆನ್ನನೆ ಪತ್ತಿ ಬರುತಿರ್ಪುದುಮಾಂ ಕಂಡು ಕಾರುಣ್ಯದಿಂದೀ ಕ್ರಾಂತೆಗೆ ಸಂತೋಷಂಮಾಡಿ ಮೆನಲಿದೇಕೆ ಬೇಡವೇಪೆನೆಯುಂ ಕಿವಿಯೊಳ್ ತೊಡರ್ಚಿ ಪೋದಲ್ಲೀ ಕುಸು ಮಮಂಜರಿಯನೆಂದು ಸಹಚರಮುನಿ ಪೇೞೆ ಪುಂಡರೀಕಂ ದರಹಸಿತಾಧರ ಕಪೋಲ ತಲನಾಗಿ

ಎಳ್ಳಿಸುತ್ತಿರ್ದಪೆ ಪುಷ್ಪಮಂಜರಿಗೆ ಕೊಳ್ಳೀ ಸುತ್ತಿದೇಕೆಂದು ಸಂ
ಚಳಿಸುತ್ತುಂ ನಿಜಕರ್ಣದಿಂ ತೆಗೆದು ಸೋಲ್ತಂ ಕೂಡು ನೀನೆನ್ನೊಳಿಂ
ದಳಿಮಾಲಾರವದಿಂದೆ ಪೇೞ್ವ ತೆಱದಿಂ ಮತ್ಕರ್ಣದೊಳ್ ತಾರಕೋ
ಜ್ಜ್ವಲಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ ೧೭

ಇಂ ಪೇೞ್ವುದೇನನೆನ್ನ ಕ
ದಂಪಿನ ನಸುಪೋಂಕಿನೊಂದು ಸುಖದಿಂದಾದಂ
ಕಂಪಿಸುತಿರೆ ಕರತಳದಿಂ
ದಂ ಪೋದತ್ತಕ್ಷಮಾಲೆ ನಾಣ್ಬೆರಸಾಗಳ್ ೧೮

ಅಂತು ಪೋದೊಡಮೆಱಿಯದಿರಲಾನಾ ಅಕ್ಷಾವಳಿಯಂ ನೆಲಕೆ ಬೀೞ್ವನಂ ಪಿಡಿದು ತೊಳಗುವ ಹಾರಮಂ ತಳೆವಂತೆ ಕೊರಲೊಳ್ ತಳೆದು ಸುಖಮಂ ತಳೆಯಲಿಂತಾ ಪ್ರೈತಿಕರ್ರಮೊಳೆನ್ನಂ ಛತ್ರಧಾರಿಣಿ ನೋಡಿ

ತಡೆದಿರಲಾಗದಿಂತು ಮೊಗಮಜ್ಜನಮಂ ನೆಱೆ ಮಾಡಿ ದೇವಿಯರ್
ನಡೆಗೊಳಲೆರ್ದಪರ್ ಮನೆಗೆ ಮಜ್ಜನಕೀಗಳೆ ರಾಜಪುತ್ರಿ ನೀಂ
ನಡೆವುದೆನುತ್ತುಮಿಚ್ಚೆಯುಣಮಿಲ್ಲದೊಡಂ ತೆಗೆದಳ್ ಕರಂ ಮನಂ
ಕಿಡೆ ಪೊಸತಪ್ಪದೊಂದು ಪಿಡಿಗಂಕುಶಮಿಟ್ಟು ಮರಳ್ಚುವಂದದಿಂ ೧೯

ಅಂತವಳೆನ್ನನೆಂತಾನುಂ ತೆಗೆಯಲೊಡನೆಯೆ ಕುಮಾರನಾತನ ಧೈರ್ಯಸ್ಖಲನೆಯಂ ನೋಡಿ

ಎನಗನುರೂಪಮಲ್ತಿದು ನಿಕೃಷ್ಟಜನೋಚಿತಮಾರ್ಗಮೆಂಬಿದಂ
ಮನದೊಳಣಂ ವಿಚಾರಿಸದೆ ಸ್ವೈರಣೆಗೆಟ್ಟು ಜಿಪೆತ್ತ ಪೋದುದೆಂ
ಬಿನಮೆರ್ದೆಗೆಟ್ಟು ಮೆಯ್ಯುಱಿಯದಂತಿರಲಕ್ಕುಮೆ ಪುಂಡರೀಕ ಭೋಂ
ಕನೆ ನಿನಗೀಗಳೆಂದ್ರಿಯದ ಡಾವರವೆತ್ತಣಿನೆತ್ತ ಬಂದುದೊ ೨೦

ಎಲ್ಲಿತ್ತೊ ಧೈರ್ಯಮುಪಶಮ
ಮೆಲ್ಲಿತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ
ಎಲ್ಲಿತ್ತೊ ನಿನ್ನ ಶೌರ್ಯಮ
ದೆಲ್ಲಿತ್ತುಪಭೋಗ ರಾಗವಿಷಯ ದ್ವೇಷಂ ೨೧

ಅತಿಶಯದಿಂ ವಿಷಯಾಸ
ಕ್ತತೆ ನಿನ್ನನ್ನರುಮನಿಂತು ಮಾಡಿತ್ತೆನಲೇಂ
ಮತಿ ನಿಷ್ಫಲಮಾಗಮನಂ
ತತಿ ನಿರ್ಗುಣಮಱಿವು ನಿಷ್ಪ್ರಯೋಜನಮಲ್ತೇ

ಎಂತು ಗಡ ನಿನ್ನ ಕಯ್ಯಿಂ
ದಂ ತೊಟ್ಟನೆ ಬಿಟ್ಟ ಜಪದ ಮಣಿಯುಮನೆಲೆ ಮುಂ
ದೆಂತುಯ್ಯಲಱಿಯೆಯೆನಲಿ
ನ್ನೆಂತಿರೆ ನಿನ್ನಂತೆ ವಿಗತಚಿತ್ತರುಮೊಳರೇ ೨೩

ಅದಱಿನಿನ್ನಾದೊಡಂ ನಿನ್ನ ಮನಮಂ ನೀಂ ನಿಲಿಸಿಕೊಳ್ಳೆಂದು ನುಡಿಯೆ ಲಜ್ಜಿತನಾದಂತೆ ಗೆಯ್ದು

ಬೆಸೆದು ಕಪಿಂಜಲ ನೀಂ ಭಾ
ವಿಸದಿರ್ ಬೇಱೊಂದು ತೆಱನನವಳೆನ್ನಂ ವಂ
ಚಿಸಿದಪರಾಧಮನಾಂ ಸೈ
ರಿಸುವೆನೆ ನೋಡೆನುತುಮೆಟ್ಟಿ ಪುಸಿಮುಳಿಸಿಂದಂ ೨೪

ಕುಡು ಚಪಳೆ ಜಪದ ಮಣಿಯಂ
ಕುಡದಿನ್ನೊಂದಡಿಯನಪ್ಪೊಡಂ ಪೋಗದಿರೆಂ
ದೊಡೆ ಕೇಳ್ದು ಜಪದ ಮಣಿಗೆ
ತ್ತೊಡನೆಯೆ ಹಾರಮನೆ ತೆಗೆದೆನೆನ್ನಯ ಕೊರಲಿಂ ೨೫

ಅಂತು ತೆಗೆದು ಕುಡುವುದುಮಾತನುಂ ಮನ್ಮುಖಾಸಕ್ತ ದೃಷ್ಟಿಯಿಂ ಮೆಯ್ಯಱಿಯದಕ್ಷಾವಳಿಗೆತ್ತು ಕಳೆದುಕೊಳ್ವುದುಮಾನಾಗಳಲ್ಲಿಂ ತಳರ್ದು

ಕಳವಳಿಸಿ ಬೆಮರ್ತಾಗಳ್
ಕೊಳದೊಳ್ ಮಿಾಯಲ್ಕತಿಪ್ರಯತ್ನದಿನುಯ್ದರ್
ಕೆಳದಿಯರೆಂತಾನುಂ ತೆಗೆ
ದಳವಿಲ್ಲದೆ ಬಂದ ನದಿಯನಿದಿರೇಱುವಪ್ರೊಲ್ ೨೬

ಅಂತುಯ್ಯಲ್ ನಿಜಜನನಿಯೊಡನೆಂತಾನುಮರಮನೆಗೆ ಬಂದು ಮದೀಯ ಮಂದಿರಮಂ ಪೊಕ್ಕು ತದ್ವಿಯೋಗದೊಳ್ ಮೆಯ್ಯಱಿಯದೆ

ಮನೆಗೇಂ ಬಂದೆನೊ ಬಾರೆನೋ ಸಖಿಯರೊಳ್ ಕೂಡಿರ್ದೆನೋ ಕೂಡದಿ
ರ್ದೆನೊ ಮೇಣ್ ನಿದ್ರೆಯೊಳಿರ್ದೆನೋ ಪಿರಿದುವೆಚ್ಚತ್ತಿರ್ದೆನೋ ಮೌನಮಿ
ರ್ದೆನೊ ಮಾತಾಡುತುಮಿರ್ದೆನೋ ವ್ಯಸನದೊಳ್ ಸಂದಿರ್ದೆನೋ ರಾಗಮಿ
ರ್ದೆನೊ ಪೇೞಾಂ ನಗುತಿರ್ದೆನೋ ಮನದೊಳಂದಾಸತ್ತಬತ್ತಿರ್ದೆನೋ ೨೭

ಇದು ದಿವವೊ ರಾತ್ರಿಯೋ ಮೇ
ಣಿದು ದುಃಖವೊ ರುಜೆಯ ಕಳವಳವೊ ಪೇಳಿದು ಪೊ
ಲ್ಲದೊ ತಾನಿದೊಳ್ಳಿತೋ ಮೇ
ಣಿದೆಂಬುದಂ ಬಗೆಯಲಾರ್ತೆನಿಲ್ಲಾ ಕ್ಷಣದೊಳ್ ೨೮

ಅನಂತರಂ ಸಖೀಜನಮುಮನಶೇಷಪರಿಜನಮುಮಂ ಬಾಗಿಲೊಳ್ ನಿಲಿಸಿ ಕನ್ಯಾಂತಃಪುರಪ್ರಾಸಾದಮನೇಱಿ ತದೀಯಮಣಿಗವಾಕ್ಷನಿಕ್ಷಿಪ್ತಮುಖಿಯೆನಾಗಿ

ಅದು ಪೀಯೂಷಪಯೋಧಿ ಪೂರಲಹರೀಸಂತಾನದಿಂ ಚೆಲ್ವುವೆ
ತ್ತುದೊ ಮಾಣಿಕ್ಯನಿಧಾನದಿಂ ಸಮೆದು ತೋಱುತ್ತಿರ್ದುದೋ ಚಂದ್ರಬಿಂ
ಬದಿನೊಪ್ಪಂಬಡೆದತ್ತೊ ಮೇಣ್ ಪಸದನಂಗೊಂಡಿರ್ದುದೋ ಪೇಳೆನಲ್
ಪದೆದಾಂ ನೋಡಿದೆನಾತನಿರ್ದ ದೆಸೆಯಂ ನಟ್ಟಾಲಿಬೀಳ್ವನ್ನೆಗಂ ೨೯

ಆ ದೆಸೆಯಿಂ ಬರ್ಪೆಲರುಮ
ನಾ ದೆಸೆಯಿಂದೆಸೆವ ಕುಸುಮ ಪರಿಮಳಮುಮನಂ
ತಾ ದೆಸೆಯಿನೆಸೆವ ವಿಹಗನಿ
ನಾದಮುಮಂ ವಾರ್ತೆಗೇಳಲಾನೊಡರಿಸಿದೆಂ ೩೦

ಅನ್ನೆಗವೆನ್ನ ತಾಂಬೂಲಕರಂಕವಾಹಿನಿ ಮಕರಿಕೆಯೆಂಬಳ್ ಪೆಱಗೆ ಕಿಱಿದು ಬೇಗಂ ಮಿಾಯಲೆಂದು ನಿಂದನಂತರಂ ಮತ್ಸಮಿಾಪಕ್ಕೆ ಬಂದು ಮೆಲ್ಲನಿಂತೆಂದಳ್

ತುಡಿಸಿದನಾವನೀ ಕುಸುಮಮಂಜರಿಯಂ ನಿನಗಾತನಕ್ಕ ತ
ನ್ನೊಡವರುತಿರ್ದ ತಾಪಸಕುಮಾರನನಾಗಳೆ ವಂಚಿಸಲ್ಕೆ ತ
ಳ್ತುಡಿದ ಲತಾಪ್ರತಾನದೊಳಪೊಕ್ಕು ಳಿದೊಯ್ಯನೆ ಸಾರ್ದು ಮೆಲ್ಪೊಡಂ
ಬಡೆ ಜೆಸಗೊಂಡನೆನ್ನನನುರಾಗದಿನೆಯ್ದೆ ಭವತ್ಪ್ರಪಂಚಮಂ ೩೧

ಈ ಕನ್ನೆಯಾರ್ಗೆ ಪೆಸರೇ
ನೇಕಿಲ್ಲಿಗೆ ಬಂದಳಾರ ಮಗಳೆಸೆವೆಲರ್ದ
ಬ್ಜಾಕರದಿನೆತ್ತವೋದಪ
ಳೀಕೆಯೆನಲ್ ಮುನಿಕುಮಾರಕಂಗಿಂತೆಂದೆಂ ೩೨

ಅದೆಂತೆಂದೊಡೆ ದಿನಕರಮರೀಚಿಯಿಂದಾದಪ್ಸರಸೆಯೊಳುದಿಸಿದ ಗೌರಿಗಂ ಗಂಧರ್ವಲೋಕಾಧಿಪತಿಯಪ್ಪ ಹಂಸಂಗಂ ಮಗಳಾಗಿ ಮಹಾಶ್ವೇತೆಯೆಂಬ ಪೆಸರಿಂ ನೆಗಬ್ತೆವೆತ್ತಳದಲ್ಲದೆಯುಂ ಇಂದು ಜನನಿಯೊಡನೀ ಸರೋವರವಂ ಮಿಾಯಲೆಂದು ಬಂದಾತ್ಮನಿವಾಸಮಪ್ಪ ಹೇಮಕೂಟಾಚಲಕ್ಕೆ ಪೋಗುತ್ತಿರ್ದಪಳೆಂಬುದುಂ ಕಿಱಿದು ಬೇಗಮೇನಾನುಮಂ ತನ್ನೊಳೆ ಬಗೆಯುತ್ತುಮಿರ್ದನಂತರಮೆನ್ನನಿಂತೆಂದಂ

ಎಳವೆಯೊಳಂ ಗಾಂಭೀರ್ಯಮ |
ನೊಳಕೊಂಡ ಭವತ್ಸ್ವರೂಪಮಂ ಕಂಡೀ ಕೋ
ಮಳೆಯಂ ಪ್ರಾರ್ಥಿಸಿದೊಡೆ ನಿ
ಷ್ಫಳಮಾಗದೆನುತ್ತೆ ಬಂದೆನಾನಿಂದುಮುಖೀ ೩೩

ಎಂದು ನುಡಿಯಲಾನಾಗಳಾದರಂ ಬೆರಸು ಕಯ್ಗಳಂ ಮುಗಿದು

ಬೆಸಸುವುದಂತದಿರ್ಕೆಮ ಭವದ್ವಿಧರಪ್ರತಿಮಪ್ರಭಾವರೀ
ಕ್ಷಿಸುವರೆ ಮುನ್ನ ಮದ್ವಿಧರನೆನ್ನಪೊಲಾದಮ ನೋಂತಳಾವಳಿ
ನ್ನಸಿರ್ಪುದು ನನ್ನಿಯಂ ನುಡಿಯೆ ಕಾರ್ಯವನೆನ್ನವಳೀಕೆಯೆಂದು ಭಾ
ವಿಸಿ ಕೃತಕೃತ್ಯೆಯಪ್ಪೆನೆನಲಾಗಳೆ ಸಂತಸದಂತಮೆಯ್ದಿದಂ ೩೪

ಅಂತುಮಲ್ಲದೆಯುಂ

ಕೆಲದೊಳಳುರ್ತು ಕಾರ್ಮುಗಿಲೆ ಪರ್ವಿದುದೆಂಬಿನೆಗಂ ಕಱಂಗಿ ಕ
ಬ್ತಲಿಪ ತಮಾಲಪಾದಪದ ಪಲ್ಲವಮಂ ಪಿಡಿದೊಂದು ನಿರ್ಮಲೋ
ಪಲತಲದಲ್ಲಿ ತದ್ರಸದಿನಾಗಳೆ ನೋಡಿ ನಿಜೋತ್ತರೀಯ ವ
ಲ್ಕಲವಸನೈಕದೇಶಮನೆ ಸೀಳ್ದದಱೊಳ್ ಬರೆದಂ ತಳೋದರೀ ೩೫

ಅನಂತರಂ

ಏಕಾಂತದೊಳೀ ಲೇಖಮ
ನಾ ಕನ್ನೆಗೆ ಪೋಗಿ ಕುಡುವುದೆಂದಟ್ಟಿದನೆಂ
ದಾಕೆ ನುಡಿಯುತ್ತುಮಂದ
ಪ್ರಾಕಟವದನಡಪದೊಳಗಣಿಂ ತೆಗೆದಾಗಳ್ ೩೬

ಆ ಲೇಖನಮಂ ಕಳೆದುಕೊಂಡು ನಿಮಿರ್ಚಿ ನೋೞ್ಪನ್ನೆಗಮಲ್ಲಿ

" ದೂರಂ ಮುಕ್ತಾಲತಯಾ
ಬಿಸಸಿತಯಾ ವಿಪ್ರಲೋಭ್ಯಮಾನೋ ಮೇ।
ಹಂಸ ಇವ ದರ್ಶಿತಾಶೋ
ಮಾನಸಜನ್ಮಾ ತ್ವಯಾ ನೀತಃ " ೩೭

ಎನಗಾಸೆದೋಱಿ ಬಿಸಸಿತ
ಮೆನಿಸುವ ನಿಜತಾರಹಾರಲತೆಯಿಂದಂ ಹಂ
ಸನವೋಲ್ ಮಾನಸಸಂಭವ
ಮೆನಿಪ ಮದೀಯಾಭಿಮಾನಮಂ ಕಟ್ಟುಯ್ದಾ ೩೮

ಎಂಬೀ ಆರ್ಯೆಯಂ ಭಾವಿಸಿ ನೋಡಿ

ಮೊದಲೊಳ್ ಸೊರ್ಕಿದವಂಗೆ ಕಳ್ ವಿಷದಿನಳ್ಕಿರ್ದಂಗೆ ದುರ್ನಿದ್ರೆ ಕಾ
ಣದವಂಗುರ್ವಿದ ಮೊರ್ಪು ದಿಗ್ಭ್ರಮೆ ಪ್ರದಂಗೆಟ್ಟಂಗೆ ಪೈಶಾಚಿಕಂ
ಗೆ ದುರಾವೇಶಮಧಾರ್ಮಿಕಂಗೆ ಕುಮತಂ ತತ್ತ್ವಪ್ರಮೂಢಂಗೆ ಬೀ
ಸಿದ ಕಣ್ಮಾಯದ ಕುಂಚದಂತಿರೆನಗಾದತ್ತಾಗಳೇನೆಂಬುದೋ ೩೯

ತದನಂತರಂ

ಅಮರ್ದಂ ಪೀರ್ದಳೊ ಮೇಣ್ ವರಂಬಡೆದಳೋ ಪುಣ್ಯೋದಯಂ ತನ್ನೊಳೇಂ
ಸಮಸಂದಿರ್ದುದೊ ನಾಕಲೋಕಸುಖಮಂ ಕಯ್ಕೊಂಡಳೋ ದೈವವೀ
ರಮಣೀರತ್ನಮ ಮೇಲೆ ಮೇಣ್ ನೆಲಸಿತೋ ತ್ರೈಲೋಕ್ಯರಾಜ್ಯಾಭಿಷೇ
ಕಮೆ ಕೈಸಾರ್ದುದಿವಳ್ಗೆನುತ್ತ ಪವಪಿಂವಾ ನಾಕೆಯುಂ ನೋಡಿದಂ ೪೦

ಅಂತು ನೋಡಿ ಪಿರಿದುಮಕ್ಕಱಿಂ ಕೆಲಕ್ಕೆ ಕರೆದು ಕುಳ್ಳಿರಿಸಿ

ಪರೆದಿರ್ದ ಕುರುಳ್ಗಳನೋ
ಸರಿಸಿ ಕದಂಪುಗಳನೊಯ್ಯನೆಟವುತ್ತಂದಾ
ಳರಸೆಂಬ ಭೇದಮೆಮ್ಮಿ
ರ್ಬರೊಳಂ ಪಲ್ಲಟಿಸಿತೆಂಬಿನಂ ಮನ್ನಿಸಿದಂ ೪೧

ಅಂತಾದರಿಸುತ್ತುಮಿರ್ದು

ಎಂತೆಂತು ಕಂಡೆ ಕಣ್ಬರಿ
ವೆಂತೆಂತೇನೆಂದು ನುಡಿದನಾತನ ಕೆಲದೊಳ್
ನೀಂ ತಡೆದ ಬೇಗವೆನಿತೆನಿ
ತಂತರಮಂ ಬರುತುಮಿರ್ದನೆಮ್ಮಯ ಬಟಿಯಂ ೪೨

ಎಂದು

ಒಡನೆಯವರೆಲ್ಲರುಮನುಟಿ
ದಡಪದವಳುವಾನುಪ್ಪೊಂದು ಮಾಡದ ಮೇಲಿ
ರ್ದಡಿಗಡಿಗೆ ಮುಗುಟ್ಟು ಮುಗುಪ್ಪಾ
ನುಡಿಯನೆ ಕೇಳುತ್ತೆ ಕಳೆದೆನಂತಾ ಪಗಲಂ ೪೩

ಅನ್ನೆಗಂ

ಮದನಾತುರೆಯಪ್ಪೆನ್ನೀ
ಹೃದಯದ ರಾಗವನೆ ಪಟ್ಟುಗೊಂಡಂತಿರೆ ಕೆಂ
ಪೊದವಿದ ಪಡುವಣ ದೆಸೆಗೆ
ಯ್ದಿದನರುಣರುಚಿಪ್ರಕಾಶನಪ್ಪ ದಿನೇಶಂ ೪೪

ಕೆಂದಾವರೆಗಳ್ ಮಧುಕರ
ವೃಂದಮನೊಳಕೊಂಡು ಮುಗಿಯೆ ರವಿವಿರಹದ ನೋ
ವಿಂದರವಿಂದಿನಿ ಮೂರ್ಛೆಗೆ
ಸಂದೆರ್ದೆ ಕಟ್ತಲಿಸಿದಂದಮಂ ಪ್ರಕಟಿಸುಗಂ ೪೫

ಆಗಳೆನ್ನ ಕೊಡೆವಿಡಿದವಳ್ ಬಾಗಿಲಿಂ ಪರಿತಂದು ಕೊಳನ ತಡಿಯಲ್ಲಿ ಕಂಡ ಮುನಿಕುಮಾರರಿರ್ವರೊಳೊರ್ವನರಮನೆಯ ಬಾಗಿಲೊಳಕ್ಷಾವಳಿಯಂ ಬೇಡಲ್ಕೆ ಬಂದು ನಿಂದಿರ್ದಪನೆಂದು ಪೇಟ್ವುದುಂ

ನಿನಗೇವೇಟ್ದಪೆನಾಂ ಭೋಂ
ಕೆನಲಾ ತಾಪಸಕುಮಾರವೆಸರ್ಗೊಳ್ವುದುಮಾ
ತನೆಗೆತ್ತು ಬಾಗಿಲೊಳ್ ತೊ
ಟ್ಟನೆ ಬಂದಿರ್ದಂತಿರಾದೆನಿರ್ದಂತಿರ್ದುಂ ೪೬

ಆಗಳೊರ್ವ ಕಂಚುಕಿಯುಮಂ ಕರೆದು ಬೇಗವೊಡಗೊಂಡು ಬಾಯೆಂದು ಪೇೞಲೊಡನೆ ಎಳಪಿಸಿಲ್ ಬೆಳ್ದಿಂಗಳ ಬೞಿಯುಂ ಬರುತಿರ್ದುದೆಂಬಂತಾ ಕಂಚುಕಿಯೊಡವರುತಿರ್ದ ಕಪಿಂಜಳನಂ ಕಂಡು

ಇದಿರೆೞ್ದು ಪೊಡವಡುತ್ತೇ
ೞಿದ ಕನಕಾಸನಮನಿತ್ತು ಜೇಡೆಸೆಯೆನೆ ತ
ತ್ಪದಯುಗಮಂ ಕರ್ಚಿ ಪದಾ
ಬ್ಜದಿರ್ಪನಾಂ ತೊಡೆದೆನುತ್ತರೀಯಾಂಶುಕದಿಂ ೪೭

ನುಡಿಯಲ್ ಮುನಿಪಂ ಬಗೆದೆ
ನ್ನಡಪಡವಳ್ ಕೆಲದೊಳಿರ್ದೊಡಾಕೆಯ ದೆಸೆಯಂ
ಕಡೆಗಣ್ಣಿಂ ನೋೞ್ಪುದುಮಾ
ಗಡೆ ಲಜ್ಜಿಸಿದಪ್ಪನೆಂದು ನೋಟದಿನಱಿದೆಂ ೪೮

ಆಗಳಱಿದವಳೆನ್ನ ಶರೀರದಿಂ ಬೇೞಿಲ್ಲಳ್ ಮುನಿಶಂಕರಾ ನೀಂ ಬೆಸಸಿಮೆಂಬುದುಂ

ನುಡಿವೊಡೆ ಲಜ್ಜಿಸಿ ನಾಲಗೆ
ಪೊಡರ್ದಪುದಿಲ್ಲಕ್ಕ ಬಿಟ್ಕೆಯುಂ ಬೇರುಮನುಂ
ಡಡವಿಯೊಳಗಿರ್ಪ ಮುನಿಗಳ
ನಡೆವಳಿಯೆತ್ತೆತ್ತ ಯುವತಿಜನದನುರಾಗಂ ೪೯

ಅದಲ್ಲದೆಯುಂ

ನಗೆಗೆಡೆಯಾಗೆ ದೈವವಶನಗೇನನೊಡರ್ಚಿಸಿತೀಗಳಕ್ಕ ರಾ
ಗಿಗಳ ನಿಕೃಷ್ಟಚೇಷ್ಟೆಗನುಗೆಯ್ವುವೆನೆಂತಿದೆ ನಿನ್ನ ಮುಂದೆ ಪೇೞ್
ಬಗೆವೊಡೆ ಕಷ್ಟದೀ ಜಡೆಗೆ ತಕ್ಕುದೊ ಮೇಣ್ ಪೊವೆವಿರ್ದ ನಾರ ಸೀ
ರೆಗೆ ದೊರೆಯೋ ತಪಕ್ಕಿದನುರೂಪಮೊ ಮೇಣ್ ಸುಕೃತಕ್ಕುಪಾಯಮೋ ೫೦

ಆದೊಡಂ

ಪೇೞಲೆವೇೞದಪ್ಪುದು ಶರಣ್ ಪಜತಾಪಮುಮಿಲ್ಲ ಕೇವಲಂ
ಪೇೞದಿರಲ್ಕನರ್ದಮದಱಿಂದನುಪಂ ನೆಜಮೆ ಬಿಟ್ಟುಬಿಡಾಗಳಿಂ

ಪಾಲಿಸವೇಟ್ಟುದೆನ್ನಯ ಸಹಾಯನ ಜೀವಮನೊಂದು ಲಜ್ಜೆಯುಂ
ಪಾಲಿಸವೆಯ್ದೆ ಪೇೞಲನುಗೆಯ್ದುದೆನುತ್ಪಲಲೋಲಲೋಚನೇ ೫೧

ಅದೆಂತೆನೆ

ಒದವಿದ ಮುನಿಸಿಂದಂ ನಿ
ನ್ನಿದಿರೊಳ್ ಬಿಡೆ ನುಡಿದು ಬಿಟ್ಟು ಮುನಿಪನ ಪೋಗೊ
ಯ್ವುದುಮಂ ಪಿಸುಟ್ಟು ನಿಲಲಾ
ಱದೆ ಮತ್ತೊಂದೆಡೆಗೆ ಪೋದೆನುದ್ವೇಗದಿಂದಂ ೫೨

ಅನ್ನೆಗಂ ನೀಮುಂ ನಿಜಾವಾಸಕ್ಕೆ ವಂದಿರಾಗಳಾನೇಕಾಕಿಯಾ
ಗಿರ್ದುಮೇಗೆಯ್ಯುತ್ತಿರ್ದಪನೆಂದು ಕುತೂಹಲಂಬೆರಸು ಮುನ್ನಿನೆಡೆಗೆ
ಬಂದು ನೋಡಿ ಕಾಣದೆ ವ್ಯಗ್ರಮನನಾಗಿ

ತರುಣಿಯ ಪೆನ್ನೊಳಂಗಭವನಾಡಿಸಿದಂದಮೊಳಾಡಿ ಗೋರಿಗೊಂ
ಡೆರಳೆವೋಲಾಗಿ ಪೋದನೊ ಛಯಂಬೆರಸೆನ್ನ ಮೊಗಕ್ಕೆ ನಾಣ್ಚಿ ಮ
ಯ್ಗರೆದನೊ ಕೋಪದಾಗ್ರಹದಿನೆನ್ನನೆಗಲ್ದನೊ ಕಾಣವೆನ್ನನೆ
ಲ್ಲಿರದಱಸುತ್ತುಮಿರ್ದಪನೊ ಜಾಲತಮಾಲವನಾಂತರಾಳದೊಳ್ ೫೩

ಎಂದು ವಿಕಲ್ಪಿಸುತ್ತುಮಿರ್ದು

ಕಿೞಿಯಂದುತೊಟ್ಟಗಲ್ದಾ
ನಱಿಯದನಂ ಕ್ಷಣಮಗಲ್ದು ನಿಲಲಾಱದೆ ಮೆ
ಯ್ಮಱುಗಿ ಮದೀಯ ವಯಸ್ಯನ
ನೞಸುತ್ತುಂ ಮಗುೞೆ ಮನದೊಳಾಂ ಚಿಂತಿಸಿದೆಂ ೫೪

ಮದನಮದೋದ್ರೇಕದಿನೆ
ನ್ನಿದಿರೊಳ್ ಧೃತಿಗೆಟ್ಟ ಸಿಗ್ಗಿನಿಂ ತನ್ನೊಳ್ ಪೊ
ಲ್ಲದನೆತ್ತಾತ್ತಚರಿಸುಗುಮೋ
ಒದವಿದ ಸಿಗ್ಗಿಂದಮಾರುಮೇನನೊಡರ್ಚರ್ ೫೫

ಎಂದಱಸಿ ನೋಡುತ್ತುಮೆಂತೆಂತು ಕಾಣದಿರ್ಪೆನಂತಂತೇನಾ
ನುಮಂ ಮನದೊಳ್ ಭಾವಿಸುತ್ತುಮಿರ್ದು

ಇರಿಪ್ಪುದಯುಕ್ತಮಿನ್ನೆನಗರಣ್ಯದೊಳೊರ್ವನನೆಂದು ಶಂಕೆಯಿಂ
ತರುತಳದೊಳ್ ತಮಾಲವನದೊಳ್ ಘನಚಂದನವೀಥಿಯೊಳ್ ನಿರಂ
ತರ ಲತಿಕಾಗೃಹಂಗಳೊಳನೇಕ ಲತಾಭವನಂಗಳೊಳ್ ಸರೋ
ವರತಟದೊಳ್ ತೊಳಲ್ದುಱಿಸಿ ನೋಡಿದೆನುತ್ಪಲಲೋಲಲೋಚನೇ ೫೬

ಅಂತು ನೋಡುತಿರ್ಪನ್ನೆಗಮೊಂದು ಸರಸ್ಸಮೀಪದೊಳ್ ವನ ನಿರಂತರತೆಯಿಂ ಕುಸುಮಮಯಮುಂ ಪರಭೃತಮಯಮುಂ ಮಯೂರಮಯಮುಮಾಗಿ ವಸಂತಜನ್ಮಭೂಮಿಯುಮಾದಂತಿರಲ್ತಿಮನೋಹರಮಾದ ಲತಾಗಹನದೊಳ್ ಉತ್ಸೃಷ್ಟಸಕಲವ್ಯಾಪಾರನುಂ ವಿಗತನಿಮೇಷನುಮೆನಿಸಿ ಬರೆದನಂತೆಯುಂ ಕಂಡರಿಸಿದನಂತೆಯುಂ ಮರವಟ್ಟನಂತೆಯುಂ ಯೋಗಸಮಾಧಿಸ್ಥಿತನಂತೆಯುಮುಪರತವಶನಾದಂತೆಯುಮಿರ್ದನಲ್ಲದೆಯುಂ

ಒಳಗೊಳಗೆಳರ್ವ ಮನೋಜಾ
ನಳಧೂಮಸ್ತೋಮಮೆಯ್ದೆ ಸುತ್ತಿರ್ದುದೊ ಕ
ಣ್ಗಳನೆನೆ ತಳ್ತೆಮೆದುಱುಗಲಿ
ನಿಟಿದುವು ಮಿಗೆ ಬಾಷ್ಪವಾರಿ ಧಾರಾಪೂರಂ ೫೭

ಏನಂ ವಿಧಿ ಮಾಡಿದನೋ
ತಾನಿಲ್ಲಿಗುಪಾಯಮೆಂತು ಘೋಂಕನೆ ಬಱಿದೇ
ಜ್ಞಾನನಿಧಿ ಸೂಱೆವೋದಪು
ದಾನಿನ್ನೇಗೆಯ್ವೆನೆಂದು ತಳವೆಳಗಾದೆಂ ೫೮

ಅದಲ್ಲದೆಯುಂ

ಗುಣಿಯೆನಿಸಿದ ಚಾತುರ್ಯದ
ಕಣಿಯೆನಿಸಿದ ಮುನಿಕುಮಾರಕ ಪ್ರತತಿಯೊಳ್
ಗ್ರಣಿಯೆನಿಸಿದ ಮತ್ಸಖನಂ
ಕ್ಷಣಮಾತ್ರದಿನಿಂತಿರೆಜೆದು ಪೋಸೆಗುಮೆ ಮದನಂ ೫೯

[illegible]ಂದಾತನಿರ್ಪ ಲತಾಮಂಟಪದೊಳಗಣ ಚಂದ್ರಕಾಂತಶಿಲಾತಳಕ್ಕೆ
ಬಂದು

ಪೊರೆಯೊಳ್ ಕುಳ್ಳಿರ್ದೊರ್ವ್ವನೆ
ಕರತಳದಿಂದೆಱಪಿ ತನುವನೀಗಳ್ ನೀನಿ
ಪೆಱರವಿನ ಪರಿಯೇನೆಂದಾಂ
ಸರೋಜಮುಖಿ ಮುಕುಳಿತಾಕ್ಷನಂ ಬೆಸಗೊಂಡೆಂ ೬೦

ಅಂತು ಬೆಸಗೊಳ್ವುದುಮಾಗಳೆಡೆವಿಡದೆ ಮುಚ್ಚಿ ಬೆಚ್ಚಂತಿರ್ದ ಕಣ್ಗಳನೆಂತಾನುಂ ತೆಱೆದು

ಬಸವಲ್ಲದಟ್ಟು ಕೆಂಪೇಱ
ರಿಸೆ ತೀವಿರೆ ಬಾಷ್ಪಸಲಿಲಮುಚ್ಚಂಬುಗಳಿಂ
ಮುಸುಕಿದ ರಕ್ತಾಂಭೋರುಹ
ದೆಸಱಿಂ ಪೋಲ್ತೆಸೆವ ಕಣ್ಗಳಿಂದೀಕ್ಷಿಸಿದಂ ೬೧

ಅಂತು ಕಿಱಿದು ಬೇಗಮೆನ್ನಂ ಭಾವಿಸಿ ನೋಡಿ

ನೀಂ ತಿಳಿದಿರ್ದುಂ ಮದ್ವೃ
ತ್ತಾಂತಮನೇನೆಂದು ಕೆಳೆಯ ಬೆಸಗೊಂಡಪೆಯೆಂ
ದಿಂತಿದನುಸಿರ್ದಂ ಲಜ್ಜೆಯಿ
ನೆಂತಾನುಂ ತೀಯರ್ವಾಣ ವಿರಳಾಕ್ಷರದಿಂ ೬೨

ಎಂಬುದುಮದು ನೀನೆಂದಂತೆ ನಿಶ್ಚಯಮಪ್ಪುದಾದೊಡಂ

ಇನಿತನೆ ಪುಂಡರೀಕ ಬೆಸಗೊಂಡಪೆನಿಂತಿದು ಧರ್ಮಶಾಸ್ತ್ರಸಂ
ಜನಿತರಹಸ್ಯಮೋ ಯಮಮೊ ಪೇೞ್ ಪೆಱತೇನಪವರ್ಗಮಾರ್ಗಮೋ
ಮನದೊಳಣಂ ವಿಚಾರಿಸದೆ ಸ್ವೈರಣೆಗೆಟ್ಟೆಱವೆತ್ತಮೋದುದೀ
ಮನಸಿಜನೆಂಬ ಪಾತಕನಿನಿಂತಪಹಾಸ್ಯಮನೆಯ್ದಲಕ್ಕುಮೇ ೬೩

ಅದಲ್ಲದೆಯುಂ

ಅಗರುವ ಧೂಪಧೂಮಲತೆಯೆಂದಸಿತಾಹಿಗೆ ಸಾರ್ವ ನೆಯ್ದಿಲೊ
ಳ್ಮುಗುಳಿನ ಮಾಲೆಯೆಂದಸಿಯನಪ್ಪುವ ಮಾಣಿಕಮೆಂದುಕೆಂಡಮಂ
ನೆಗೆಪುವ ಪುಣ್ಯಮೆಂದು ವಿಷವಲ್ಲಿಗೆ ನೀರೆಱೆವೆಗ್ಗನಂತೆ ಕೇ
ಮ್ಮಗೆ ಸುಖಮೆಂದೆಸೆದ್ವಿಷಯ ಸೌಖ್ಯದೊಳೆಂತೆಱಗಲ್ಕೆ ತಕ್ಕುದೇ ೬೪

ಅದಲ್ಲದೆಯುಮತಿಬಹುಳರಜದೊಳ್ ಪೊರೆದಪ್ರೊಸಲ್ಲಳಂತುಸ್ವಾರ್ಗ ದಿಂ ಪರಿಪೇಂದ್ರಿಯಂಗಳಂ ನಿವಾರಿಸದೆಯುಂ ಕಿಡಿಡಿದ ಮನಮಂ ನಿಯಾ ಮಿಸದೆಯುಮಿಂತಿರ್ಪುದುಚಿತಮಲ್ಲಮನಂಗನೆಂಬ ದುರ್ರಾಚಾರನಂ ನಿರ್ವರ್ತಿ ಸಲ್ವೇೞ್ಕುಮೆಂಬುದುವಾಕ್ಷೇಪಂಗೆಯ್ದು ಮೆದುಱುಗಲಿನಿಱಿವ ತೋರಕಣ್ಬನಿ ಗಳಂ ಬಸಿಯುತ್ತು ಮೆನ್ನನಿಂತೆಂದಂ

ಅಪರಿಮಿತೋಕ್ತಿಯೊಳೇಂ ಸ
ತ್ವಪರೀತನೆ ಮದನ ದಾವದಹನಂ ತಳ್ತಿ
ರ್ದಪುದಿಲ್ಲ ನಿನ್ನನದಱಿಂ
(ದುಪದೇಶಂಗೆಯ್ಯುತಿರ್ಪುದಿದು ಸುಖಮಲ್ತೇ) ೬೬

ಆವಂಗೆಂದ್ರಿಯವರ್ಗಮುಂಟು ಮನಮುಂಟಾವಂ ದಿಟಂ ಕಾಣ್ಬನಿ
ನ್ನಾವಂ ಕೇಳ್ವನದಂತೆ ಕೇಳ್ದ ನುಡಿಯಂ ಕಯ್ಕೊಳ್ವನೆಂತಲ್ಲದಿ
ನ್ನಾವಂ ಪೊಲ್ಲದಿದೊಳ್ಳಿತೆಂದಱಿವನಾತಂ ಕೇಳ್ದಪಂ ನಿನ್ನ ಸ
ದ್ಭಾವಂಬೆತ್ತುಪದೇಶಮಂ ಕೆಳೆಯ ಪೇಡೆನ್ನೊಂದಿಗಂ ಕೇಳ್ವನೇ ೬೬

ಅಡುವಂತಾದಪುವೇವೆನೆನ್ನವಯವಂಗಳ್ ಕೂಡೆ ಕಣ್ಬಾಲಿಗಳ್
ಸುಡುವಂತಾದಪುದೇವೆನೆಯ್ದೆ ಹೃದಯಂ ಬೇವಂತುಟಾದಪ್ಪುದೀ
ಪ್ಪೊಡಲೋರಂತುರಿವಂದವಾದಪುದಿದಂ ನೀಂ ಮಾಣಿಸಲ್ಕಾರ್ಪೆಯ
ಪ್ಪೊಡೆ ದಲ್ ಮಾಣಿಪುದೆಂಬಿದಂ ನುಡಿದು ಮಾತಂ ಮಾಣ್ದನಬ್ಜಾನನೇ ೬೭

ಅಂತುಸಿರದಿರೆ ಮತ್ತಮಾಸಾತನಂ ಸಂಬೋಧಿಸಲೆಂದು

ಎನಿತು ಪುರಾಣೋಕ್ತಿಗಳಿಂ
ದೆನಿತಾಗಮವಿಷಯವಚನದಿಂದೆನಿತು ನಿದ
ರ್ಶನದಿನನುನಯದೆ ಪೇೞ್ದನ
(ದನಿತುಂ ಕಿವಿಪೊಕ್ಕುದಿಲ್ಲ ತನ್ಮನಿವರನಾ) ೬೮

ಅಂತು ಮುಯ್ಯುಱಿಯದಿರ್ದನಂ ಕಂಡು ಭಯಂಗೊಂಡುಪದೇಶ ಕ್ಕಂದೆಡೆಯಿಲ್ಲದೆ

ದೆಸೆಗೆಟ್ಟೇನನಾನುಮಂ ಚಿಂತಿಸುತಿರೆ ಫಲಮೇಂ ಪೊಲ್ಲದಿನ್ನೊಳ್ಳಿತೆಂಬು
ದ್ದೆಸಮಂ ಮಾಣ್ಬೀಗಳೆಲ್ಲಂದಮೊಳವನಗೆ ಮಾತ್ರೇಂ ಸುಹೃತ್ಪ್ರಾಣಮಂ ರ
ಕ್ಷಿಸವೇಳ್ಕುಂ ಬೇಗವಾಂ ರಕ್ಷಿಸುವ ತೆಱನುಮಂತೆಂದೊಡಂ ನಿಶ್ಚಯಂ ಭಾ
ವಿಸಿ ನೋಲ್ಪಂದಾನೆಯುಂ ತರ್ಪುದನಾಡಿಯೆ ಬಟಿಕ್ಕಿಲ್ಲ ಬೇಱೊಂದುಪಾಯಂ ೬೯

ಅದಱಿಂದಿನ್ನಾಕೆಯಲ್ಲಿಗೆಂತಾದೊಡಂ ಪೋಗೀತನವಸ್ಥಾಂತರಮಂ ಪೇೞಲ್ವೇಡಿದಪ್ಪುದೆಂದು ಮತ್ತಂ

ಎನಗಂ ಕೃತ್ಯಮಿದಲ್ಲದಿರ್ದೊಡಮವಶ್ಯಂ ಪೋಪೆನೆಂತಾನುಮೆ
ನ್ನನಿವಂ ಕುತ್ಸಿತವೃತ್ತಿ ಕಷ್ಟಮಿದು ಪೇೞೆಂದೆಂಗುಮೋ ಲಬ್ಧಚೇ
ತನನೆಂದಾತನ ಪಕ್ಕದಿಂದುಸಿರದಿರ್ದಾನಾಗಳೇನಾನುಮೊಂ
ದು ನೆವಂ ಮಾಡಿ ಮಹೋತ್ಕಟತ್ವದೆ ದಿಟಂ ಬಂದೆಂ ಚಕೋರೇಕ್ಷಣೇ ೭೦

ಇದು ಮಸ್ಮಿತ್ರನವಸ್ಥೆ ತದ್ವಿರಹಸಂತಾಪಾನುರಾಗಕ್ಕೆ ತ
ಕ್ಕುದನಾಂ ಬಂದೆಡೆಗಂ ಮೃಗಾಕ್ಷಿ ನಿನಗಂ ಪೋಲ್ವಂತುಟಂ ನೀನೆ ಬ
ಲ್ಲೆ ದಲಿಂತೆಂದಿವಳೇನನೆಂದಪಳೊ ಕೇಳ್ವೆಂ ಮಾತನೆಂದೇನುಮೆ
ನ್ನದೆ ಮದ್ವಕ್ತ್ರಮನಾ ಕಪಿಂಜಳಕನಾಗಳ್ ನೋಡುತಿರ್ದಂ ನೃಪಾ ೭೧

ಕನಸಿನೊಳಮಿಾ ಕಪಿಂಜಲ
ಮುನಿವದನದೊಳನೃತಭಾಷೆ ಪೊಱಮಡದದಱಿಂ
ದೆನಗಾವುದಿಲ್ಲಗುತ್ತರ
ಮೆನುತುಂ ಬಗೆಯುತ್ತುಮಿರ್ದೆನಿರ್ಪನ್ನೆವರಂ ೭೨

ಆಗಳೊರ್ವಳತಿಸಂಭ್ರಮಂಬೆರಸು ದೌವಾರಿಕೆ ಬಂದು ಪೊಡವಟ್ಟು ರಾಜಪುತ್ರಿ ನೀನಸ್ವಸ್ಥಶರೀರಿಣಿಯಾಗಿರ್ದುದಂ ಪರಿಜನದಿಂ ಕೇಳ್ದು ಮಹಾದೇವಿಯರ್ ನಿನ್ನಲ್ಲಿಗೆ ಬಿಜಯಂಗೆಯ್ದಪರೆಂಬುದುಂ ಕಪಿಂಜಲಂ ಕೇಳ್ದು ನೆರವಿ ಕವಿತರ್ಪುದೆಂದಂಜಿ ಬೇಗಮೆೞ್ದು

ತಡೆದಿರಬಾರದು ನೇಸಱ್
ಪಡುತಂದುದು ಪೊೞ್ತು ಪೋಯ್ತು ಪೋದಪೆನೆಂತಾ
ದೊಡಮೆನ್ನ ಕೆಳೆಯನಸುವಂ
ಪಿಡಿವುದು ಸೆಱಿಗೊಡ್ಡಿ ಬೇಡಿದೆಂ ಮೃಗನಯನೇ ೭೩

ಎಂದು ನುಡಿದು ಮಱುವಾತುಗುಡಲವಸರಮಿಲ್ಲದಿರೆ ಮದೀಯಾಂಬಿಕೆಯ ಮುಂದೆ ಪರಿತರ್ಪ ದೌವಾರಿಕೆಯರಿಂ ಸಾಹಸಿಗಳಿಂ ಚಾಮರದಡಪದ ಕನ್ನಡಿಯ ಪರಿಚಾರಕಿಯರಿಂ ಕೂಡೆ ಸಂದಣಿಸಿದ ಬಾಗಿಲೊಳಂ ತಾನುಂ ನುಸುಳ್ದು ಪೋದನನ್ನೆಗಮಿತ್ತಲ್

ದೀನಾಸ್ಯೆ ಜನನಿ ಬಂದೆಸಿ
ತಾನುಂ ಪೊೞ್ತಿರ್ದು ಮನೆಗೆ ಪೋದಳ್ ಗಡ ತಾ
ನೇನೆಂದಳದೇಗೆಯ್ದಳ
ದೇನಾಯ್ತೆಂಬಱಿಯೆನಾಗಳೆರ್ದೆಗೆಟ್ಟವಳೆಂ ೭೪

ಅನ್ನೆಗಮಿತ್ತಲಂಭೋಜಿನೀಜೀವಿತೇಶ್ವರನಸ್ತಂಗತನಪ್ಪುದುಂ ಪಾತಾಳ ಪಂಕಕಲುಷಿತ ಮಹಾಪ್ರಳಯಜಲಧಿಗಳ್ ಮೇರೆದಪ್ಪಿ ಕವಿದು ಭುವನಂಗಳೆಲ್ಲಮನೊಳಕಯ್ಯಲುಕ್ಕಿದುವೆಂಬಂತಿಡಿದಡರೆಗೊಂಡು ಕೞ್ತಲೆ ಕವಿಯೆ ಕಿಂಕರ್ತವ್ಯತಾಮೂಢೆಯೆನಾಗಿ ತರಳಿಕೆಯನಿಂತೆಂದೆಂ

ಮನವುಮಖಿಳೇಂದ್ರಿಯಂಗಳು
ಮಿನಿಸಪ್ಪೊಡಮೆನ್ನವಲ್ಲಮೇಗೆಯ್ವೆನೊ ಪೇ
ೞೆನಗೀಗಳಾ ಕಪಿಂಜಲ
ಮುನಿ ನಿನ್ನಯ ಮುಂದೆ ನುಡಿದು ಪೋದುದನಱಿಯಾ ೭೫

ಮನೆಗೆ ಬರಲ್ ಕಪಿಂಜಲಮಹಾಮುನಿಗಂ ಮಱುವಾತನಿತ್ತೆನಿ
ಲ್ಲೆನಗದಱಿಂದಮಿನ್ ಪ್ರಣಯಭಂಗಮದಾವುದೊ ಕೆಟ್ಟೆನತ್ತಲೋ
ಪನುಮಿದನಿಂತೆ ಕೇಳ್ದೊಡೆ ನಿರಾಶೆಯೊಳಕ್ಕಟ ಸಾಗುಮಂತಱಿಂ
ಮುನಿವಧದೋಷಮಾಪ ತೆಱದಿಂ ಕಳೆಗುಂ ಕಮಲಾಯತೇಕ್ಷಣೇ ೭೬

ಎಂದು ನುಡಿಯುತ್ತುಮಿರ್ಪನ್ನೆಗಂ

ಇಳೆಯಂ ನೋಡಲ್ಕೆ ರಸಾ
ತಳದಿಂ ಪೊಱಮಡುವ ನಾಗರಾಜನ ಪೆಡೆಯೊಳ್
ಪೊಳೆವರುಣಕಿರಣಮಣಿಮಂ
ಡಳದಂದದಿನೆಸೆದುದಿಂದುಮಂಡಳವಾಗಳ್ ೭೭

ಇತ್ತ ವಸಂತನಿತ್ತ ಮಲಯಾನಿಲನಿತ್ತ ಮಧುವ್ರತಾಳಿ ಮ
ತ್ತಿತ್ತ ಮದೋತ್ಕಕೋಕಿಲಕದಂಬಕವೆಯ್ದೆ ವಿಜೃಂಭಿಸಿತ್ತು ತಾ
ನಿತ್ತಲಡರ್ದು ಚಂದ್ರಹತಕಂ ತಲೆದೋಱಿದನೋವೊ ಕೆಟ್ಟೆನೀ
ಚಿತ್ತಜತಾಪವಗ್ಗಲಿಸಿದಪ್ಪುದು ಮದ್ಧೃದಯಾಂತರಾಳದೊಳ್ ೭೮

ಉದಯಿಸಲಿಂದು ಚಂದ್ರಹತಕಂ ವಿಷಮಜ್ವರಿತಂಗೆ ಮತ್ತೆ ಕೆಂ
ಡದ ಮೞೆ ಕೊಂಡುದಗ್ಗಲಿಸಿದೈಕಿಲವಂಗೆ ಹಿಮಪ್ರಪಾತಮಾ
ದುದು ಪಿರಿದಪ್ಪ ನಂಜುಪುಗುಳುರ್ಬಿದವಂಗಸಿತಾಹಿದಂಶಮಾ
ದುದು ದಿಟಮೆಂದು ತಲ್ಲಣದಿನಾಗಳೆ ಘೋಂಕನೆ ಮೂರ್ಛೆವೋಪುದುಂ ೭೯

ಆಗಳತಿಸಂಭ್ರಮಂಬೆರಸು ತರಳಿಕೆ ತಂದ ಚಂದನದ ಚರ್ಚೆಗಳಿಂ ಮತ್ತ
ಮನೇಕ ಶಿಶಿರೋಪಚಾರಂಗಳಿಂದುಪಚರಿಸಲಡಱಿನೆಂತಾನುಂ ಮೂರ್ಛೆ
ಯಿಂದೆಚ್ಚತ್ತು ನೋೞ್ಪುದುಂ ಚಂದನಪಂಕಾರ್ದ್ರಂಗಳಪ್ಪ ಕರಕಮಲಂಗಳಂ
ಮುಗಿದು

ಇನಿತಂ ಪ್ರಾರ್ಥಿಪೆನಕ್ಕ ನಿನ್ನನುಱೆ ನೀಂ ಲಜ್ಜಾಭರಾವೇಶಮಂ
ನಿನಗೀ ತಂದೆಯು ತಾಯೊಳಪ್ಪ ಭಯಮೇಕೇೞ್ ಪೋಪಮಾನಾಱಿನಿ
ನ್ನಿನಿತಂ ನೋಡುತುಮಿರ್ಪೆ ನೀನಕರುಣಂ ಮೇಣ್ ಪೋಗು ನೀನೆಂದು
ಪೇೞ್ ಮನದಿಂ ಮುನ್ನಮೆ ಪೋಗಿ ನಿನ್ನಿನಿಯನಂ ತಂದಪ್ಪೆನಬ್ಜಾನನೇ ೮೦

ಎಂದು ತರಳಿಕೆ ನುಡಿಯೆ

ಇದನೇನೆಂದಪ್ಪ ನಾಣೇಂ ಗುರುಗಳುಮೆನಗಿನ್ನೇಕೆ ಪೇೞ ಮೃತ್ಯುವೊಲ್ ಮೂ
ಡಿದನಿತ್ತೀ ಚಂದ್ರನುಂ ತಾನಿರದೆ ಕರುಣದಿಂದುಯ್ವುದೇೞ್ ಪೋಪಮೀ ದೇ
ಹದೊಳಿಂದೀ ಪ್ರಾಣಮುಳ್ಳನ್ನೆಗಮು ತಡೆಯದಾತ್ಮೇಶನಂ ಕಾಣ್ಬೆನೋ ಪು
ಣ್ಯದಿನೆಂದಾಂ ಚೇಷ್ಟೆಗೆಟ್ಟಂದವಳನೆ ಪಿಡಿದಲ್ಲಿಂದಮೆಂತಾನುಮೆೞ್ದೆಂ ೮೧

ಅಂತೇೞಲೊಡನೆ

ಬಿದಿ ಮತ್ತೇನನಿದಂ ತೋ
ಱಿದಪನೊ ಪಾತಕಿಗೆನುತ್ತೆ ಭಯಮಂ ಚಿತ್ತ
ಕ್ಕೊದವಿಸಿ ಬಲಗಣ್ ಕೆತ್ತಲ್
ಮೊದಲಿಕ್ಕಿತು ದುರ್ನಿಮಿತ್ತಸೂಚಕಮಾಗಳ್ ೮೨

ಅವನೇವೇಳ್ವೆನನಂತರಂ ತ್ರಿಭುವನಪ್ರಾಸಾದರಮ್ಯ ಪ್ರಣಾ
ಳದವೋಲ್ ಕಣ್ಸೆವೆಂದುಮುಂಡಲ್ಲದಿನೇಂ ಗಂಗಾಪ್ರವಾಹಂಗಳೆ
ಣ್ಮದುವೋ ಚಂದನವಾರಿಪೂರಮಿಟಿದತ್ತೋ ಕ್ಷೀರವಾರಾಶಿ ಪೊ
ಣ್ಮದುದೋ ಪೇಳೆನೆ ಲೋಕದೋಳ್ಕವಿದು ಪರ್ಬಿತ್ತಂದು ಚಂದ್ರಾತಪಂ ೮೩

ಅಂತು ಪರ್ಬಿದ ಬೆಳ್ದಿಂಗಳೊಳ್ ಗೃಹೀತವಿವಿಧಕುಸುಮತಾಂಬೂಲ ರಾಶಿಯಪ್ಪ ತರಳಿಕೆವೆರಸು ಮದೀಯಪರಿಚಿತಪರಿಜನಮುಮರಿಯದಂತು ಕರುವಪಾಡದಿಂದವನಿತಳಕ್ಕವತರಿಸಿ ಪ್ರಮದವನಪಕ್ಷದ್ವಾರದಿಂ ಪೊರಮಟ್ಟು ಪೋಗುತ್ತುಮಾ ಪ್ರದೇಶಮನೆಯ್ದುವಪ್ಪಾಗಳ್

ಮೊದಲೊಳೆ ಕೆತ್ತಿದತ್ತು ಬಲಗಣ್ಣೆನಗೇನನೊಡರ್ಚಲಿರ್ದುದೋ
ಬಿದಿಯೆನುತುಂ ಭಯಂಬೆರಸು ಮುನ್ನಮೆ ಶಂಕಿಸುತಿರ್ದೆನೋವೊ ಮ
ತ್ತಿದು ಪೆಜತೇನೆನುತ್ತುಮಿರ್ದೆ ಪವ್ವನೆ ಪಾಜಲದೊಂದು ಕೇಳಲಾ
ದುದು ಪುರುಷಪ್ರಲಾಪರುದಿತಸ್ವನಮಾ ಗಹನಾಂತರಾಳದೊಳ್ ೮೪

ಅದೆಂತೆಂದೊಡೆ

ಉರಿದಂ ಬೆಂದಪೆಸಿದೇನನಿಂತು ನೆಗಟ್ದಯ್ ನಿಸ್ತ್ರಿಂಶ ಪುಷ್ಪಾಸ್ತ್ರ ನಿ
ಷ್ಠುರ ಪೇಟ್ ಪೊಲ್ಲದನೇನನಾಚರಿಸಿದಳ್ ನಿನ್ನೊಳ್ ಮಹಾಶ್ವೇತೆ •ಭೀ
ಕರ ದೋಷಾಕರ ಕೂಡಿತೇ ಬಗೆದುದುಂ ಚಂಡಾಲ ತೆಂಗಾಳಿ ಪೇಟ್
ಪಿರಿದೊಂದುತ್ಸವಮಾಯ್ತೆ ಕೇಡನಱಿದಯ್ ಹಾ ಶ್ವೇತಕೇತುಪ್ರತೀ ೮೫

ಪರಿಚಯಮಿಲ್ಲ ಕಂಡಱಿಯೆಯೋ ಸಖ ತೊಟ್ಟನಲಿಂತು ಬಿಟ್ಟು ಪೋ
ಪರೆ ಕಠಿನಾತ್ಮ ನಾಡೆ ನಿರವಾರ್ಗಿರ್ದಪರೆತ್ತವೋಪೆನೊ
ರ್ಬರುಮೆನಗಾಸೆಯಿಲ್ಲ ಪೆಸ್ತೆ ಪಾಟ್ಮಸಗಿರ್ದಪುದಂಧನಾದೆನಾರ್
ಶರಣೆನಗೆನ್ನ ಬಾಷ್ಕೆಯುಂ ನಿರರ್ಥಕಮೆಂದೆನುತುಂ ಪಲುಂಬುತುಂ ೮೬

ಉಜಿರವೆ ನೀನಿರಲ್ ನುಡಿವೆನಾರೊಡನಾಟಮನಾಡುತಿರ್ಪೆನೇ
ಪ್ರಸಿಮುಳಿಸೇಕೆ ಪೇಟ್ ಕೆಳೆಯ ನಿನ್ನಯ ಕೂರ್ಮೆಯದೆತ್ತವೋಯ್ತು ನೋ
ಯಿಸದಿನಿಸೆಯ್ದೆ ನೋಟ ನುಡಿಯೆಂದೆನಿತುಂ ತೆಜದಿಂ ಕಪಿಂಜಲಂ
ಪಿಸಿಪಿಸಿಗೊಂಡು ಪಾಯ್ದುಡುತುಮಿರ್ದುದನಾಲಿಸಿದೆಂ ಮಹೀಪತೀ ೮೭

ಅದನಾಂ ಕೇಳ್ದೆರ್ದೆಗೆಟ್ಟು ಮೆಯ್ಮಱುಗಿ ಸತ್ರಾಂತಾಗಿ ಕಣ್ಣೀರ ಪೂ
ರದಗುರ್ವಿಂ ದೆಸೆಗಾಣದಂದೆಡಪ್ಪುತುಂ ತಾಗುತ್ತುಮೋರಂತೆ ಪೋ
ಱುದಜೆಯೊಳ್ ಗುಲ್ಮ[illegible]ಳಗ[illegible]ದರಲೊರ್ವಂನೊಂಕಿಕೊಂಡುಯ್ವಮಾ
ರ್ಗದೆ ಪೋಪಂ ಬಳಿಕಾತನಿರ್ದೆಡೆಗೆ ಹಾಹಾಕ್ರಂದನಂಗೆಯ್ಯುತುಂ

ಅನ್ನೆಗಂ ೮೮

ಘುಟಿಲನೆ ಬರ್ದನ್ನಂ ಕಂ
ಡಟಲೆರ್ಮಡಿಯಾಗೆ ಪತ್ತಿ ಕೆಳೆಯನ ಕೊರಲಂ
ಪಟವಿಸಿ ಕಪಿಂಜಲಂ ಬಾ
ಯಟಿದಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್ ೮೯

ಆಗಳ್ ತತ್ಕ್ಷಣವಿಗತಜೀವಿತನಾಗಿರ್ದ ನಿಷ್ಪಾಪನೆನಿಪ ಮಹಾನುಭಾವನಂ ಮಹಾಪತಕಿಯೆನಿಪ್ಪ ಮಂದಭಾಗ್ಯೆಯೆಂ ಭೋಂಕನೆ ಕಂಡು ಮೂರ್ಛೆವೋಗಿ ಬಿಟ್ಟು ಪಾತಾಳತಲವಿವರಮಂ ಪೊಕ್ಕಂತೆ ಮಹಾಂಧಕಾರಂ ಕವಿಯೆ

ಏನಾದೆನೆಲ್ಲಿ ಬಿಟ್ದೆನ
ದೇನಂ ಬಾಯಟಿದು ಪಟಪಿಸುತ್ತಿರ್ದೆನೊ ಪೇ
ಡೇನನೊಡರ್ಚಿದೆನೆತ್ತಣಿ
ನೇನಾರ್ಗೆಂದೇನುಮಱಿಯೆನಂತಾ ಕ್ಷಣದೊಳ್ ೯೦

ಪಲವು ಭವಂಗಳೊಳ್ ನೆರಪಿದೆನ್ನಯ ಪಾಪಮೊ ಮೇರೆಗೆಟ್ಟು ಕೋ
ಟಲೆಗಳನುಣ್ಬೆನೆಂಬಟಿಲ ಸ್ವೈರಣೆಯೋ ಕಡುಪಿಂ ತಗುಳ್ದು ನ
ಟ್ಟಲೆವಸಮಾಸ್ತ್ರವಕ್ರತೆಯೊ ದೈವಿಕಮೋ ನಿನಗೇನನೆಂಜಿನ
ಗ್ಗಲಿಸಿಯು ನಿಂದುದೆಂತುಮಸು ಪೋಗದೆ ಕಲ್ಲೆರ್ದೆಯೆಂ ಮಹೀಪತೀ ೯೧

ಇನಿಸಂ ಮೂರ್ಛೆಯಿನೆೞ್ಚ
ತ್ತನಂತರಂ ದೀರ್ಘಶೋಕವುಂ ಬಿಡೆ ಸುಡೆ ಕಿ
ರ್ಚಿನ ಕೀಡಿಯುಂ [ಬೆ] ನೆಲದೊಳ
ಗೆನಿಸುಂ ಪಿಡುಪಿಡನೆ ಮಿಡುಕುವೆನ್ನಂ ಕಂಡಂ ೯೨

ಅಂತೆನ್ನ ಸಾವಿಲ್ಲದುದುಮಾತನ ಸಾವುಮೊದವಿಬಲನೊದವಿಸೆ ಬಾಯ
ಬಿದು ಮೊಯ್ಯಬಿಯದವಳೆಂ

ಪರಿಹರಿಸಿ ಪೋಗಲಕ್ಕುಮೆ
ಕರುಣಿಸದೊರ್ವಳನನಾಥೆಯಂ ಭಕ್ತೆಯನಾ
ತುರೆಯಂ ದುಃಖಿತೆಯಂ ಸ್ಮರ
ಪರಿಭೂತೆಯನನ್ಯಗತಿಕೆಯಂ ಬಾಲಕಿಯಂ ೯೩

ತರಳಿಕೆ ಸಕ್ಕಿಯಲ್ತೆ ಬೆಸಗೊಳ್ ಯುಗಕೋಟಿಪ್ರಾಯಮಾದುದಾಗಳಾ
ವಿರಹದೆ ಬೆಂದವಳ್ಗೆ ಪಗಲೆಂಬುದನೇ ಮುಳಿಸೇಕೆ ನಿನ್ನ ತೂ
ಚಿತ್ತರೊಳಿನಿತೇಕೆ ಭಕ್ತಜನವತ್ಸಲ ನಿರ್ದಯನಾದೆ ನಾಥ ನೀಂ
ಕರುಣದಿನೊರ್ಮೆ ಕಣ್ದೆಱೆದು ತೀರ್ಚು ಮದೀಯಮನೋರಥಂಗಳಂ ೯೪

ಕರುಣಿಸು ದೈವಮೆ ಪಾಲಿಸು
ಹರಾದ್ರಿ ರಕ್ಷಿಸಲೆ ರಾತ್ರಿ ಶರಣಾಗು ಸರೋ
ವರಮೆ ವನದೇವಿಯರಿರಾ
ನಿರವೆಲ್ಲರುಮೆನಗೆ ಪುರುಷಭಿಕ್ಷಮನಿಕ್ಕಿಂ ೯೫

ಆವ ತೆಱದಿಂದಮಾರುಂ
ಕಾವರುಮಂ ಕಂಡೆನಿಲ್ಲ ನಾಂ ಬರ್ದಿನಮೆ
ಕ್ಕಾವಳಿ ನೀನುಂ ವಲ್ಲಭ
ಜೀವಮನಿನಿಸಿನಿಸು ಪಿಡಿಯಲಾರ್ತೆಯುಮಿಲ್ಲಂ

ಎಂದು ಮಱುಗಿ ಮತ್ತಮಾತನನೆತ್ತಮೇೞ್ಕುಮೆಂದು ಕಪಿಂಜಲ
ಮಹಾಮುನಿಯಡಿಯೊಳಡಿಗಡಿಗೆ ಪೊರಳ್ದು ಮಱುಗುವಬಲೆಯೊಡನೆ ತರಳಿಕೆಯ
ನಿಟ್ಟೆ ಪಱಿಂತಪೆ ಪಱಿಸಿ ಪಲುಂಬಿ ಪಂಬಲಿಸಿಯುಮಾ ಮನೋಹರನ
ಮುಂದೈನಿಂದ ಚಂದನದೊಣ್ಪಿನಿಂ ಪಗಿಲ್ತು ಪತ್ತಿ ಬೆಳ್ಕಱಿಸಿ ರಂಜಿಸುವ
ಕೆಂಬಱೆಯ ಮೊದಲಿಂ ಬೆಸಂಗುವಡೆದು ಮಿಱುಪ ಪೆಱನೊಸಲೊಳಂ
ಕವಿವ ಬಡೆಗ ತೊಂಗಲಿಂ ಸಂಗಳಿಸಿ ಬೆಡಂಗನೊಳಕೊಂಡ ಗಂಡಮಂಡ
ಲಂಗಳೊಳಂ ಕೋಮಲಮೃಣಾಲೋತ್ತಂಸಿತಂಗಳಪ್ಪಂಸದೇಶಂಗಳೊಳಂ

ಮಲಯಜರಸಲುಳಿತ ನಳಿನೀದಳಾವಕುಂಠಿತವಾದ ಮೆಲ್ಲೆರ್ದೆಯೊಳವೋ
ರೊರ್ಮೆ ಕಳವಳಿಸಿ ಕರತಳದಿನೆಟಿಪಿಯುಂ ಪುಂಡರೀಕನ ಪಕ್ಕದಿಂ ತೆರಳ
ದೆಯುಂ ನಿಷ್ಕರುಣೆಯಾದೆಯೆಂದೋರೊರ್ಮೆ ಸಂಭ್ರಮದಿನುಪಾಲಂ
ಭನಂ ಮಾಡಿಯುಂ ಕೊರಲಂ ತಬ್ಬಿ ಕ್ರೈಸಿಯುಂ ಬಿಡದಳವಿಲ್ಲದೆಡೆಯುಡುಗ
ದೆಬ್ಬುತ್ತುಮೆಂದುಮನುಪದಿಷ್ಟಂಗಳುಮದೃಷ್ಟಪೂರ್ವಂಗಳುಮತಿ ಕೃಪಣಂಗಳು
ಮಪ್ಪ ಚಾಟುಸಹಸ್ರಂಗಳೊದವೆ ಕಣ್ಣೀರ ಪೂರದಿಂ ತೇಂಕಾಡುತ್ತುಮಶ್ರು
ಪ್ರವಾಹಜನ್ಮಭೂಮಿಯುಂ ಪ್ರಲಾಪಶಿಖರಸಹಸ್ರಸಂಭೂತೆಯುಂ ದುಸ್ಸಹ
ದುಃಖಪ್ರಸೂತೆಯುಮಾದವನೆಂದಾತ್ಮೀಯ ವೃತ್ತಾಂತಮನಾತಂಗೆ ನಿವೇ
ದಿಸುತ್ತುಮಿರ್ಪುದುಂ

ಪಿಂತಾದ ದುಸ್ಸಹಾವ
ಸ್ಥಾಂತರ ಸಂತತಿಯನಾಗಳನುಭವಿಸುತುಮಿ
ರ್ಪಂತಿರ್ದಳ ಚೈತನ್ಯಮ
ನಂತಾಗಳೆ ಹರಿಯಿಸಿತ್ತು ಮೂರ್ಛಾವೇಗಂ ೯೭

ಅಂತು ಮೂರ್ಛೆವೋಗಿ ಬೀಳ್ವುದುಂ

ಒದವಿದ ತಲ್ಲಣಂಜೆರಸು ಚೆಚ್ಚರದಿಂ ಪಿಡಿದೆತ್ತಿ ಶಂಕೆಯಿಂ
ಸುದತಿಯ ಪಾಂಗಿದೇನೆನುತುಮಾಕೆಯ ಕಣ್ಮಲರಿಂದಮುಣ್ಮಿ ಮಾ
ಣದೆ ಸುರಿಯುತ್ತುಮಿರ್ಪ ಜಲಧಾರೆಗಳಿಂದಮೆ ನಾಂದದೊಂದು ಮೇ
ಲುದಱ ಸೆಱಂಗಿನಿಂ ನಯದೆ ಬೀಸಿದನಾ ಮನುಜೇಂದ್ರಚಂದ್ರಮಂ ೯೮

ಅಂತು ಬೀಸಿ ಮೂರ್ಛೆಯಿಂದೆಚ್ಚಱಿಸಿ

ಇನಿಪಿರಿದೊಂದವಸ್ಥೆಯುಮನೆಯ್ದಿಸಿದೆಂ ಜೆಸಗೊಂಡ ಪಾಪಕ
ರ್ಮನೆನದಱಿಂದಮಿಾ ಕಥೆಯ ಮಾಣ್ದುದು ಕೇಳಲಸಹ್ಯಮೆಂಬುದೇಂ
ಮನಕಠಿಮುಸ್ಸಹಂಗಳೆನಿಸಿರ್ದ ಸುಹೃಜ್ಜನದುಃಖಸಂಕುಲಂ
ನೆನೆದೊಡಮಂತೆ ಕೇಳ್ದೊಡೆ ನವವ್ಯಥೆಯುಂ ನೆಱೆ ಮಾಡದಿರ್ಕುಮೇ ೯೯

ಎಂತಾನುಂ ನಿಲೆ ಪಿಡಿಯಸು
ಸಂತತಿಯಂ ಸ್ಮರಣಶೋಕಶಿಖಿಗಿಂಧನವ
ಪ್ಪಂತೆಸಗಲಾಗದಿವನೆಂ
ದಿಂತುಸಿರ್ದಂ ಕರುಣದಿಂದಮುಗೆ ಕಣ್ಬನಿಗಳ್ ೧೦೦

ಎನುತ್ತುಂ ನುಡಿಯೆ ನಿಡಿಸುಯ್ದುಂ ಗುಡಗುಡನೆ ಸುರಿವ ಕಣ್ಬನಿ
ಗಳಂ ಮಿಡಿಯುತ್ತುಂ ಮತ್ತಮಿಂತೆಂದಳ್

ಇದನೇನೆಂದಪ್ಪೆಂ ಲಜ್ಜಾಕರಮನೆರಸ ಪೋದಾ ಮಹಾರಾತ್ರಿಯೊಳ್ ಪೋ
ಗದ ಪಾಪಪ್ರಾಣಂಗಳಿನ್ ಪೋದಪುವೆ ಕೇಳುತುಮಿರ್ಪಂತಕಂ ನೋಡಲುಂ ಪೇ
ಸಿದನೆನ್ನಂ ಕಷ್ಟೆಯಂ ಕಲ್ಲೆರ್ದೆಯವಳುಮನೆಂದೆಂದು ಪೇಳ್ ಸಾವುಮೆಲ್ಲಿ
ಪೊರ್ದದು ಮತ್ತಂ ನಿಸ್ತ್ರಪಾಗ್ರೇಸರೆಯೊಡನುಡಿವಲ್ಲಿಂದವೇಂ ಕಷ್ಟಮುಂಟೇ ೧೦೧

ಆ ವಜ್ರಪಾತದಿಂ ಮೇ
ಲೇವೇಟ್ದಪೆನರಿದು ಪೇಟಲುಂ ಕೇಳಲುಮಿ
ನ್ನಾವಂಗಮೆನಲ್ಕಾಶ್ಚ
ರ್ಯಾವಹಮೊಂದಾದುದಾಗಳದನುಸಿರ್ದಪ್ಪೆಂ ೧೦೨

ಅದೆಂತೆಂದೊಡಂತೀ ಯವಸ್ಥಾಂತರದೊಳೆಡೆವಿಡದಟುತ್ತಿರ್ದಡ
ಪದವಳ ಮೊಗಮಂ ನೋಡಿ

ತರಳಿಕೆ ಪ್ರಾಣದಿನ್ನೆನಿಸನಟ್ಟಿಪೆ ಸಂಗಡಿಸಿಂಧನಂಗಳಂ
ವಿರಚಿಸು ಬೇಗಮಿನ್ ಚಿತಿಯನೇಂ ತಡವೀ ಕ್ಷಣಮೆನ್ನ ಜೀವಿತೇ
ಶ್ವರನೊಡಪೋಗವೇಟ್ಟು ಮನಗೆಂಬುದುಮೊರ್ಮೆಯೆ ಚಂದ್ರಮಂಡಲಾಂ
ತರದೊಳದೊರ್ವನಂದು ಪೊಜಮುಟ್ಟಿ ಬಿತ್ತಂದನಮರ್ತ್ಯಮಾರ್ಗದಿಂ ೧೦೩

ಧವಳಾಂಗಪ್ರಭೆ ದೆಸೆಯಂ
ಧವಳಿಸೆ ತನಿಗಂಪನಾಳ್ದು ಕಡುದಣ್ಪಿನಸುಂ
ಕವಿತರೆ ನೀಡಿದನಾಗಳ್
ದಿವಿಜೇಭಕರಾನುಕಾರಿ ನಿಜಕರಯುಗಮಂ ೧೦೪

ಅಂತತಿಶೀತಲಸ್ಪರ್ಶಂಗಳಪ್ಪ ಮೃಣಾಳಕೋಮಲಂಗಳೆನಿಪ ಕರಾಂ
ಗುಳಿಗಳಿನೆನ್ನ ಮೊಂದುಪರತನಾದ ಪುಂಡರೀಕನನೆತ್ತಿಕೊಂಡು

ಬಗೆಗೆಟ್ಟು ಸಾವ ಬಗೆಯಂ
ಮಗಳೆ ಮಹಾಶ್ವೇತೆ ಬಗೆಯದಿರ್ ಕೂಡುವೆ ನೀಂ
ಮಗುಳೆಯುಮೀತನನೆನುತುಂ
ಮಗುಳ್ದಾತಂಪೆರಸು ಗಗನಮಾರ್ಗಕ್ಕೊಗೆದಂ ೧೦೫

ಅಂತಾ ವ್ಯತಿಕರದೊಳೆನಗತಿಸಂಭ್ರಮಮುಂ ವಿಸ್ಮಯಮುಂ ಕೌತುಕಮು ಮೊಗೆಯೆ ಪಿರಿದುಮಂಜಿ ಕಪಿಂಜಲನನಿದೇನೆಂದು ಬೆಸಗೊಳೆಯುಮಾತ ನೆನಗೆ ಮಱುಮಾತುಗುಡದುನ್ಮುಖನಾಗಿ

ಎನಗಂ ಪೇೞದೆಯುಂ ಭೋಂ
ಕೆನಲೆನ್ನಯ ಸಖನನೆತ್ತವುಯ್ದಪೆ ಮಾಣೆಂ
ದೆನುತುಂ ಕೋಪದಿನಾ ಪುರು
ಷನ ಪೆಱಗನೆ ತಾನುಮಂತರಿಕ್ಷಕ್ಕೊಗೆದಂ ೧೦೬

ಅಂತು ಮೂವರುಂ ನೋಡೆನೋಡೆ ಚಂದ್ರಮಂಡಲ ಮಧ್ಯದೊಳ್ ಪುಗೆ ಕಪಿಂಜಲನ ಪೋಗಿಂಗೆ ಶೋಕವಿಮೂಢಿಯಾಗೆ ಕಿಂಕರ್ತವ್ಯತಾ ಮೂಢೆಯೆನಾಗಿ

ತರಳಿಕೆ ಪೇೞದೇನಱಪ್ರೊ ನೀನೆನಲೆನ್ನಪ್ರೊಲಾಗಳಳ್ಕಿನಿಂ
ಪರವಶೆಯಾಗಿ ನಿಂದುಮವಳೆನ್ನಯ ಸಾವಿನೊಳಾದ ಶಂಕೆಯಿಂ
ಕರುಣಮನಪ್ಪುಕಯ್ದುನಿರ್ದಳಾನಱಯೆಂ ಸತಿ ಬಂದು ತಂದೆಯಂ
ತಿರೆ ಪದೆದಾ ಮಹಾಪುರುಷನಾಱಸಿದಂ ಭವದೀಯಶೋಕಮಂ ೧೦೭

ಇನ್ನರ ನುಡಿ ಕನಸಿನೊಳಂ
ನನ್ನಿಯೆನಲ್ ಕೇಳ ದಿವ್ಯಪುರುಷಂ ಪ್ರತ್ಯ
ಕ್ಷಂ ನಿನ್ನ ಮುಂದೆ ನುಡಿಯ
ಲ್ಕಿನ್ನುಮದೇನೆಂಬ ಸಂದೆಗಕ್ಕೆಡೆಯುಂಟೇ ೧೦೮

ನಿನ್ನಯ ಜೀವಿತೇಶ್ವರನ ಜೀವಮನಿನ್ ಪದೆದಟ್ಟಿಸೆಂದ ಲೋ
ಕೋನ್ನತನಪ್ಪ ದಿವ್ಯಪುರುಷಂ ವಿಗತಾಸುವನುಯ್ದನಲ್ಕಱಂ
ನಿನ್ನುಮನೀಗಳಾಱಸಿದನಂತಿದಱಂದಿದು ನನ್ನಿಯಪ್ಪುದ
ಲ್ತೆನ್ನದೆ ಮಾಣ್ಬುದರ್ಕೆ ಪೆಱತೇಂ ಮರಣವ್ಯವಸಾಯಮೆಂಬುದಂ ೧೦೯

ನಿಸದಂ ಕಪಿಂಜಲಂ ಜೀ
ವಿಸುತಿರೆ ನಿನ್ನಲ್ಲಿಗೆಯ್ದಿದಿರನದಱಿಂ ರ
ಕ್ಷಿಸವೇಲ್ಬುದುವಾವ ತೆಱದಿಂ
ದಸುವಂ ನಿನ್ನಲ್ಲಿಗಾತನೆಯ್ತರ್ಪನೆಗಂ ೧೧೦

ಎಂದವಳ್ ಕಾಲಮೇಲೆ ಬೀಳ್ವುದುಂ

ಪಿರಿದುಮಿದಿಂತುಟೆಂದು ಬಗೆದುಂ ನೆಱೆ ಬ್ರಾಂತ್ಯೆಯೊಳಾದ ತೃಷ್ಣೆಯಂ
ಪರಿಹರಿಸಲ್ಕೆ ಮಾರ್ಗಮಿರಿದಾಗಿಯುಮುಕ್ಕೆವದಿಂದಮಂತೆ ಪೆಂ
ಡಿರ ಬಗೆ ಸಾಜದಿಂ ಕುಟಿಲಮಾಗಿಯುಮಿಂತು ದುರಾಶೆಯಿಂದಮೋ
ಸರಿಸದೆ ನನ್ನನಾನೆ ಬಿಡಲಾಱದ ಪಾತಕಿಯೆಂ ಮಹೀಪತೀ ೧೧೧

ಅಟ್ಟುವೆನ್ನಂ ತರಳಿಕೆ ಮೆ
ಯ್ಯುಟಿಯಿಂ ಪಿಡಿದೊಯ್ಯನೆತ್ತಿ ಮೆಲ್ಲನೆ ತಡಿಗಾ
ಗಟಿತಂದೀ ಕೊಳದೊಳ್ ನೀ
ರಿಟಿಯಿಸೆ ನೀರಿಟಿದೆನಿಲ್ಲಿ ಬೆಳಗಪ್ಪಾಗಳ್ ೧೧೨

ಅಂತು ನೀರಿಟಿದು ತದನಂತರಂ

ಆತನ ಪರಮಪ್ರೀತಿಯಿ
ನಾತನ ವಲ್ಕಲದಿನಾತನಕ್ಷಾವಳಿಯಿಂ
ದಾತನ ಕಮಂಡಲುವಿನಿಂ
ದಾತನ ವೇಷಮನೆ ತಾಳ್ದಿ ತಳೆದೆಂ ವ್ರತಮಂ ೧೧೩

ಅಂತು ತಳೆದು ಮದೀಯ ಮಂದಭಾಗ್ಯತೆಯುಮಂ ದೈವದ ದಾರುಣತೆಯುಮಂ ದುಃಖದ ದುಸ್ಸಹತೆಯುಮಂ ಪದಾರ್ಥದನಿತ್ಯತೆಯುಮಂ ಭಾವಿಸಿನೋಡಿ

ಮನಮಂ ನಿಗ್ರಹಿಸುತ್ತೆ ಸದ್ವಿಷಯದತ್ತಲ್ ಪೋರ್ದದಂತಾಗೆ ಮಾ
ಡಿ ನಿರುದ್ಧೇಂದ್ರಿಯೆಯಾಗಿ ಬಂಧುಜನಮಂ ತಾಯ್ತಂದೆಯಂ ಪತ್ತುವಿ
ಟ್ಟೆನಗಿನ್ನೊರ್ವರುಮೋವರೆಂಬ ಬಗೆಯಂ ನಿಶ್ಚೈಸಿ ಲೋಕೈಕನಾ
ಥನನಾಥಂಗಳನಾಥೆಯೆಂ ಶರಣೆನುತ್ತಾಶ್ರೈಸಿದೆಂ ಸ್ಥಾಣುವಂ ೧೧೪

ಜಪದಿಂ ತಪದಿಂದೊಡಲಂ
ಕ್ಷಪಿಯಿಸಿದಪೆನೆಂಬೊಡದು ಕೃತಜ್ಞತೆ ಗಡ ಚಿಃ
ಜಪವೆಣಿಸುವ ನೆವದಿಂದಂ
ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪೆಂ ೧೧೫

ಅಯಶಕ್ಕೀಡಾದ ನಿರ್ಲಕ್ಷಣೆಯನಶುಭೆಯಂ ನಿಷ್ಫಲೋತ್ಪನ್ನೆಯಂ ನಿರ್ದಯೆಯಂ ನಿಃಸ್ನೇಹೆಯಂ ನಿಸ್ತ್ರಪೆಯನಸುಖೆಯಂ ನಿಂದ್ಯೆಯಂ ನಿಷ್ಫಲಪ್ರಾಣೆಯನಾದಂ ಕ್ರೂರೆಯಂ ಬ್ರಾಹ್ಮಣಹನನಮಹಾಪಾಪಮಂ ಗೆಯ್ದ ನಿಸ್ತ್ರಿಂಶೆಯನೆನ್ನಂ ಪಾಪೆಯಂ ನೀಂ ಬೆಸಗೊಳೆ ಫಲಮೇಂ ಪೇಳ್ ಮಹೀಪಾಲಚಂದ್ರಾ ೧೧೬

ಸೊಗಯಿಪ ಸಸಿ ಶರದದ ಬೆ
ಳ್ಮುಗಿಲೊಳ್ಪೊರೆಯ್ಯುಂದಮೆಯ್ದೆ ಮುಸುಕಿರ್ದುದೆನಲ್
ಸೊಗಯಿಪ ದುಗುಲದ ಸೆಱಗಂ
ಮೊಗಕ್ಕೆ ತೆಗೆದಾಗಳೆರದೆ ಗೋಳಿಟ್ಟಟ್ಟಳ್ ೧೧೭

ಅಂತಳುತ್ತಿರ್ದಳನೆಂತಾನುಂ ಸಂತೈಸಿ

ಮೊದಲೊಳ್ ಗೌರವಮಂ ಮಾ
ಡಿದುದಲ್ಲದೆ ತನ್ನ ವಾರ್ತೆಯಂ ನೆಱೆ ಸದ್ಭಾ
ವದಿನಾದ್ಯಂತಂ ಸತಿ ಪೇ
ಳ್ದುದರ್ಕೆ ಹೃತಹೃದಯನಾಗಿ ಚಂದ್ರಾಪೀಡಂ ೧೧೮

ಇನಿಸೊಗೆತರ್ಪ ಕಣ್ಣನಿಗಳಿಂದಮೆ ನೇಹಮನುಂಟುಮಾಡುವಂಗನೆಯರೊಳೇನಪ್ಪಾರ್ಭವಭೋಗಮನಿಂತಿರೆ ಪತ್ತುವಿಟ್ಟು ಕಾನನದೊಳೆ ನಟ್ಟು ನಿಂದು ಸುಕುಮಾರಮೆನಿಪ್ಪ ಶರೀರಮಂ ಕಱುತ್ತಿಸಿವಿರಿದೊಂದು ಘೋರತಪಕೊಡ್ಡಿದೆ ನಿನ್ನವೊಲಾರ್ ಕೃತಜ್ಞೆಯರ್ ೧೧೯

ಸತ್ತವರೇಟ್ಸರೆ ಪೇಟ್ಡೊಡ
ಸತ್ತೊಡ್ಡೆ ತಮ್ಮೆಟಲಿನಳವಿಯಂ ಮಟ್ಟಿಸಲೆಂ
ದುತ್ತವಳಿಕೆಯೊಳೆ ಸಾವರ್
ಸತ್ತವರವರ್ಗಾವ ಹಿತಮನಾಚರಿಸುವರೋ ೧೨೦

ಅವರವರ್ಗಾದ ಕರ್ಮಫಲವಿರ್ಪೆಡೆ ಜೇಱದಱಿಂದೆ ಮೇಲೆ ಕೂ
ಡುವರೊಡಸತ್ತರೆಂಬೊಡೆದು ಕೂಡದು ಕೇವಲಮಾತ್ಮಘಾತದೋ
ಷವೆ ಪೆಱತಿಲ್ಲ ಸತ್ತರೊಡನ್ನಾಯದೆ ನಿಂದೊಡೆ ಮಾಡಲಕ್ಕುಮಿ
ತ್ತವರ್ಗೆ ಜಲಾಂಜಲಿಪ್ರಭೃತಿ ದಾನವಿಶೇಷಮುಪೋಪಕಾರಮಂ ೧೨೧

ಸತ್ತಳೆ ಕಾಮದೇವನ ಪರೋಕ್ಷದೊಳಾ ರತಿ ಪಾಂಡು ಸತ್ತೊಡಂ
ಸತ್ತಳೆ ಕುಂತಿ ಮತ್ತಮಭಿಮನ್ಯುಕುಮಾರಕನಂದು ಸತ್ತೊಡೇ
ನುತ್ತರೆ ಸತ್ತಳೇ ನೆಗಟ್ಟಿ ಸಿಂಧುನೃಪಾಲಕನಂದು ಸತ್ತೊಡಂ
ಸತ್ತಳೆ ದುಶ್ಶಳಾವನಿತೆಯಿಂತಿವು ನೀವಱಿದಂದವಲ್ಲವೇ ೧೨೨

ಅಂತುಮಲ್ಲದೆಯುಂ

ಆನಾಶ್ವಾಸಿಸಿದನಿತಱೊ
ಳೇನಾ ಚಂದ್ರಮನೆ ನಿನ್ನನಾಶ್ವಾಸಿಸಿದಂ
ತಾನೆಂದೊಡದೇನೆಂಬುದೊ
ಮಾನಿನಿ ತದ್ವಿಧರ ವಚನಮುಪಿತಥಮೆ ವಲಂ ೧೨೩

ಅದಱಿನನಿಂದ್ಯಮಪ್ಪ ನಿಜಚರಿತಮಂ ನಿಂದಿಸಲಾಗದೆಂದನೇಕ ಪುರಾಣ ಕಥಾಪ್ರಕಥನದೊಳಂ ಬಹುಪ್ರಕಾರ ಸಾಂತ್ವವಚನದೊಳಮೆಂ ತಾನುಮರಸಂ ಸಂತೈಸಿ

ವಿನಯದೊಳೆ ಮತ್ತಮಂದೊ
ಯ್ಯನೆ ನಿರ್ಝರವಾರಿಯಂ ನಿಜಾಂಜಲಿಯಿಂ ತಂ
ದನುವಿಸಿ ವದನಪ್ರಕ್ಷಾ
ಳನಮಂ ಮಾಡಿಸಿದನಂದು ಚಂದ್ರಾಪೀಡಂ ೧೨೪

ಅಂತು ಮಾಡಿಸಿ ಮನೋಭವವಿಜೃಂಭಿತಂಗಳಂ ಮನದೊಳ್ ಭಾವಿಸುತ್ತುಂ ವಿಸ್ಮಯಾಕ್ಷಿಪ್ತಚಿತ್ತನಿಂತೆಂದಂ

ತರಳಿಕೆಯೆಂಬಳ್ ನಿಮ್ಮಯ
ಪರಿಚಾರಿಕೆಯೆತ್ತಪೋದಳಲ್ಲಿರ್ದಪಳೆಂ
ದರಸಂ ಬೆಸಗೊಳ್ವುದುಮಾ
ದರದೆ ಮಹಾಶ್ವೇತೆ ಪೇಲಲುದ್ಯತೆಯಾದಳ್ ೧೨೫

## ೫. ಕಾದಂಬರಿಯ ಪ್ರಥಮ ಸಂದರ್ಶನ.

ಅದೆಂತೆನೆ—

ಮೊದಲೊಳ್ ನಿನಗಾಂ ಪೇೞ್ದಮೃ
ತದಿನುದಯಿಸಿದಪ್ಸರೋಂಗನಾನ್ವಯದೊಳ್ ಪು
ಟ್ಟಿದಳಲ್ಲಿ ಮದನಮದವತಿ
ಮದಿರೇಕ್ಷಣೆ ಮದಿರೆಯೆಂಬ ಕನ್ಯಾರತ್ನಂ ೧

ಆ ಕನ್ನೆಯ ಕಯ್ವಿಡಿದಂ
ಸ್ವೀಕೃತ ಗಂಧರ್ವರಾಜ್ಯ ಮಹಿಮೋದಯನ
ಪ್ರಾಕೃತ ನಿಜವಿಭವ ಕೃತಾ
ರ್ಥೀಕೃತ ಬುಧಜನಮನೋರಥಂ ಚಿತ್ರರಥಂ ೨

ಆ ದಂಪತಿಗಧಿಕ ಪ್ರೇ
ಮೋದಯಮೊದವಲ್ಕೆ ಪುಟ್ಟಿದಳ್ ಭುವನಜನಾ
ಹ್ಲಾದಂ ಜನಿಯಿಸುವಿನೆಗಂ
ಕಾದಂಬರಿಯೆಂಬ ಪೆಸರ ಕನ್ಯಾರತ್ನಂ ೩

ಒಡನುಂಡೊಡನಿರ್ದೊಡವಳೆ
ದೊಡನಾಡಿಗಳಾಗಿ ನೃತ್ಯಗೀತಂ ಮೊದಲಾ
ಗೊಡನೊಡನೆ ಕಲ್ತು ಕಲೆಗಳ
ನೆಡೆವಿಡದಿರ್ವರ್ಗಮಾಯ್ತು ಪರಮಪ್ರೇಮಂ ೪

ಅನಂತರಂ ಶೈಶವಮಂ ಪತ್ತುವಿಟ್ಟಿರ್ಪುದುಮಾ ಕಾದಂಬರೀದೇವಿಯುಂ ಮದೀಯ ಹತವೃತ್ತಾಂತಮಂ ಕೇಳ್ದತ್ಯಂತಶೋಕಾಕ್ರಾಂತೆಯಾಗಿ

ಇರಲಿಂತಪ್ಪೊಂದು ಶೋಕಾಕುಲತೆಯೊಳೆ ಮಹಾಶ್ವೇತೆ ಮತ್ತಾಸೆಯಿಂ ತಾಂ
ನೆರೆದೇನಾನಿಂತು ಕನ್ಯಾವ್ರತದೊಳೆ ಕಳೆವೆಂ ಕಾಲಮಂ ತಂದೆಯಿಂ ತಾ
ನಿರದಾಶಿವಂಗೆನ್ನನೀಯಲ್ ಬಗೆದು ಮನದೊಳಂತುಜ್ಜುಗಂಗೆಯ್ದೊಡಂ ಚೆ
ಚ್ಚರವೆನ್ನೀ ಪ್ರಾಣಮಂ ತಾಂ ಬಿಡದಿರೆನೆನುತುಂ ನಿಶ್ಚಯಂಗೆಯ್ದಳಾಗಳ್ ೫

ಅಂತುಪಾರೂಢಯೌವನೆಯಪ್ಪ ಮಗಳ ನಿಶ್ಚಯಮುಮಂ ಮದಿರಾಮಹಾದೇವಿಯುಮರಸು ಚಿತ್ರರಥನುಂ ಕರ್ಣಪರಂಪರೆಯಿಂ ಪರಿಜನದತ್ತಣಿಂ ಕೇಳ್ದು ಪಿರಿದುಮಳಲ್ದು ಕ್ಷೀರೋದನೆಂಬ ಕಂಚುಕಿಯುಂ ಕರೆವೆನ್ನಲ್ಲಿಗೆಟ್ಟಿದೊಡಾತಂ ಬಂದು

ತನ್ನ ಮಹಾವ್ಯತಿಕರದೊಳ್
ಮುನ್ನಮೆ ಬೆಂದವರ್ಗೆ ಮತ್ತೆ ಕಾದಂಬರಿಯಿಂ
ದಂ ನೋವು ಬಂದುದದಱಿಂ
ದಿನ್ನುಮವಿನೊಳೆನೆ ಶರಣಮಾ ವ್ಯತಿಕರದೊಳ್ ೬

ಎಂದು ಜನನೀಜನಕರಟ್ಟಿದರೆಂದು ನುಡಿಯೆ
ಗುರುಗಳ್ ತಾವೇನನೊಂದುಂ ಬೆಸಸಿದರದನೇ ಕೊಳ್ವುದಿನ್ನೆನ್ನ ಜೀವಂ
ಬೆರಸಾನಿಂತಿರ್ಪುದಂ ತಾಂ ಬಯಸುವ ಬಗೆಯೆಂತೆಂದೊಡೆಂದಿಂತು ಕಾದಂ
ಬರಿಗಾದಂ ಬುದ್ಧಿವೇೞ್ದಟ್ಟಿದೆನಿರದಧಿಕಪ್ರೇಮದಿಂ ಸಾವಿದಲ್ಲಂ
ಬೆರಸತ್ತಲ್ ಪೋದಳಂತಾಗಳೆ ತರಳಿಕೆಯುಂ ನೀವುಮೆಟ್ಟಂದಿರೀಗಳ್ ೭

ಎಂದು ಪೇೞ್ದಳನ್ನೆಗಮಿತ್ತ ಲಾಂಛನಚ್ಛಲದಿಂ ಶೋಕಾನಲದಗ್ಧಮಪ್ಪ ಮಹಾಶ್ವೇತಾಹೃದಯಮಂ ವಿಡಂಬಿಸುವಂತೆಯುಂ ಮುನಿಕುಮಾರವಧಮಹಾ ಪಾತಕಮಂ ತಾಳ್ದಿದಂತೆಯುಮಾಗಿ ನಿಖಿಲಲೋಕ ನಿದ್ರಾಪ್ರಿಮಂಗಲಕಲಶದಂತೆ ಕುಮುದಿನೀಬಾಂಧವಂ ಗಗನಾಂಗಣದೊಳೆಸೆಯೆ ಸುಪ್ತೆಯಾದ ಮಹಾಶ್ವೇತೆಯುಂ ನೋಡಿ ಚಂದ್ರಾಪೀಡಂ ಪಲ್ಲವಶಯನತಲದೊಳ್ ಮೆಯ್ಯನಿಕ್ಕಿ ಬೀಡಂ ನೆನೆದು

ಈ ಯವಸರದೊಳ್ ವೈಶಂ
ಪಾಯನನುಂ ಪತ್ರಲೇಖೆಯುಂ ಭೂಪರುಮಾ
ನೀ ಯಂದದಿನಗಲಲ್ಕೆನಿ
ತಾಯಸಮಂ ಪಡುವರೆಂದು ಚಿಂತಿಸುತಿರ್ದಂ ೮

ಅಂತು ಚಿಂತಿಸುತಿರ್ದಿರುಳಂ ಕಳೆದು ಬೆಳಗಪ್ಪುದುಂ ಕೃತಪ್ರಾಭಾತಿಕ ನಿಯಮನಾಗೆ ಮಹಾಶ್ವೇತೆಯುಮಘಮರ್ಷಣ ನಿಯಮ ಜಪಂಗಳಂ ಮಾಡುತಿರ್ದಳನ್ನೆಗಮಿತ್ತ ಷೋಡಶವರ್ಷವಯಸ್ಕನುಮುದಾತ್ತಾಕಾ

ರನುಂ ರಾಜಕುಲ ಸೇವನಾತಿಚತುರನುಮಪ್ಪ ಕೇಯೂರನೆಂಬ ಗಂಧರ್ವ ಕುಮಾರಂಬೆರಸು ತರಳಿಕೆ ಮಹಾಶ್ವೇತೆಯಲ್ಲಿಗೆ ಬಂದಿರ್ವರುಂ ದೂರಾ ವನತೋತ್ತಮಾಂಗರಾಗಿ ಪೊಡವಟ್ಟು ಕುಳ್ಳಿರ್ದು

ಸ್ನಾಡಾಡಿಯಲ್ತು ರೂಪಿನ
ಗಾಡಯಿದೆಲ್ಲಿರ್ದು ಬಂದುದೆನುತುಂ ಚಂದ್ರಾ
ಪೀಡನನತಿವಿಸ್ಮಯದಿಂ
ನೀಡುಂ ನೋಡುತ್ತಮಿರ್ದನಾ ಕೇಯೂರಂ ೯

ಆಗಳ್ ಮಹಾಶ್ವೇತೆಯುಂ ನಿರ್ವರ್ತಿತಾನುಷ್ಠಿತೆಯಾಗಿ ತರಳಿಕೆಯ ಮೊಗಮಂ ನೋಡಿ

ನುಡಿದಾನೆಟ್ಟಿದುದನೊಡಂ
ಬಡಿಸಿದೊ ಮತ್ಸಖಿಯನೆಂದೊಡೀತಂಗೀಗಳ್
ನುಡಿ ಪೋಗು ನೀನೆನುತ್ತೆ
ನ್ನೊಡನಟ್ಟಿದಳಲ್ತೆ ತನ್ನ ವೀಣಾಧರನಂ ೧೦

ಎಂಬುದುಮಾತನಂ ಬೆಸಗೊಳೆ

ಮನಮಂ ನೋಡಲಿದೇಕೆ ತಮ್ಮ ಮನಮಂ ತಾಂನೋಡಲೇನಾಂತಪೋ
ವನದೊಳ್ ಕೋಟಲೆಗೊಂಡು ದುಃಖದೆ ತಪಂಗೆಯ್ಯುತ್ತಿರಲ್ ಮತ್ತೆಯುಂ
ಮನದೊಳ್ ತಾಂ ಸುಖದಿಂದಮಿರ್ಪಳಿಪಳೆಂಬುದ್ವೇಗದಿಂದಕ್ಕನಿಂ
ತಿನಿತೊಂದಂ ನುಡಿದಟ್ಟಿದಳ್ ಪಿರಿದುಮುಂತೇನಟ್ಟಲೇಂ ತಕ್ಕುದೋ ೧೧

ಎಂದಿವು ಮೊದಲಾಗಿ ಕಾದಂಬರಿ ನುಡಿದ ನುಡಿಗಳಂ ಕೇಯೂರಕಂ ಬಿನ್ನವಿಸಲದಂ ಕೇಳ್ದು ತನ್ನೊಳೆ ತಾನೆ ಭಾವಿಸಿ

ಬಂದಾನೆ ಪೇಲ್ದಪೆಂ ನಯ
ದಿಂದಲ್ಲಿಗೆ ತಕ್ಕುದೆಲ್ಲಮಂ ಮುನ್ ನೀಂ ಪೋ
ಗೆಂದು ಕಟಿಪಲ್ಕೆ ಪೋದಂ
ಮುಂದಾ ಕೇಯೂರಕಂ ಸುವಿಲುಳಿತಹಾರಂ ೧೨

ಅಂತಾತಂ ಪೋಗೆ ಚಂದ್ರಾಪೀಡನನಿಂತೆಂದಳ್

ಇದೆ ಸಾರಿರ್ಪುದು ರಾಜಧಾನಿ ಪಿರಿದುಂ ಚಿತ್ರಾವಹಂ ಬಂದು ನೋ
ಟ್ಪುದು ನೀನೆನ್ನೊಡಸಂದು ಮತ್ಸಖಿಗಮೆಂತುಂ ಬುದ್ಧಿ ಪೇೞಲ್ಕೆ ವೇ
ಟ್ಪುದು ಮತ್ಪ್ರಾಣಸಮಾನೆಯಾಕೆ ನಿಜದಿಂದಸ್ವಸ್ಥೆ ಗಂಧರ್ವಲೋ
ಕದೊಳೆಂದಕ್ಕೆ ಭವದ್ವಿಲೋಕನಸುಖಂ ಭೂಪಾಲವಿದ್ಯಾಧರಾ ೧೩

ಅದಲ್ಲದೆಯುಂ ಮದೀಯಪ್ರಾರ್ಥನೆಯುಂ ನಿರರ್ಥಕಂ ಮಾಡ
ದಿಂದು ಬಂದಲ್ಲಿ ವಿಶ್ರಮಿಸಿ ನಾಳೆ ಬೀಡಿಂಗೆ ಬಿಜಯಂಗೆಯ್ವುದೆಂದು
ಮತ್ತಮಿಂತೆಂದಳ್

ನಿನ್ನನೆಕಾರಣಬಾಂಧವ
ನಂ ನೋಡಿಯೆ ಶೋಕವಾಱಿದುದು ಸುಜನರ ಲೋ
ಕೋನ್ನತರ ಪರಹಿತರ ನಿ
ಮ್ಮನ್ನರ ಬರವಾರ್ಗೆ ಸುಖಮನುತ್ಪಾದಿಸದೋ ೧೪

ಎಂದು ನುಡಿದೊಡೆ

ಇನಿತಂ ಪ್ರಾರ್ಥಿಸಲೇಂ ನೀ
ನಿನಿತೆಸಗುವುದೆಂದು ಬೆಸಸುವುದು ಸಾಲ್ಗುಂ ನೀ
ಮೆನಗೆಂದು ವಿನಯದೊಳ್ ಕಾ
ಮಿನಿಪಿಂತನೆ ನಡೆದನೆಂದು ಚಂದ್ರಾಪೀಡಂ ೧೫

ಅಂತು ಬರುತ್ತುಂ ಹೇಮಕೂಟಮನೆಯ್ದಿ ವಿಚಿತ್ರಮೆನಿಸಿದ ಚಿತ್ರರಥ
ರಾಜಧಾನಿಯಂ ಪೊಕ್ಕು ಸಪ್ತಕಕ್ಷ್ಯಾಂತರಂಗಳ ಕಾಂಚನಮಯ
ತೋರಣಂಗಳಂ ನುಸುಳ್ದು ಕನ್ಯಾಂತಃಪುರದ್ವಾರಮನೆಯ್ದೆವರ್ಪಾಗಳ್

ಇದು ನಾರೀಮಯಮಪ್ಪ ಲೋಕಮಿದು ಪೇೞ್ವೊಂದಂಗನಾದ್ವೀಪಮಿಂ
ತಿದು ನಿಷ್ಪೂರುಷಜೀವಲೋಕಮಿದು ಸರ್ಗಕ್ಕೊಂದು ಪದ್ಮೋದ್ಭವಂ
ಸುದತೀರತ್ನಸಮೂಹಮಂ ಪಡೆದಿನಿಂ ಬಯ್ಚಿಟ್ಟ ಭಂಡಾರಮ
ಪ್ಪುದೆನಲ್ ಸಂದಣಿಸಿರ್ದ ಸುಂದರಿಯರಂ ಕಂಡಂ ನರೇಂದ್ರಾತ್ಮಜಂ ೧೬

ಎರಡುಂ ಪಕ್ಕದೊಳೋಲಗಕ್ಕೆ ಪಡಪಿಂ ಬಂದಿರ್ದ ಕಾಂತಾಜನೋ
ತ್ಕರರತ್ನಾಭರಣ ಪ್ರಭಾಪ್ರಸರದಿಂ ತಳ್ತು ತದ್ವೀಥಿಕಾಂ

ತರದೊಳ್ ಪೆರ್ಬ್ರೂನ್ನಲ್ಲಂದದಿಂ ಪರಿಯೆ ಕ್ಷಂಡಂತಾ ಪ್ರಭಾಪೂರದೊಳ್
ಭರದಿಂ ತಾನಿದಿರೀಸುವಂತೆ ನಡೆದಂ ಭೂಪಾಲವಿದ್ಯಾಧರಂ ೧೭

ಪೊಳೆಯುತ್ತಿರ್ಪ ಮಹಾವರಾಹವದನ್ಸೋದ್ಯದ್ದಂಷ್ಟ್ರಮಂ ನೆಮ್ಮಿ ನಿಂ
ದಳೊ ಭೂಕಾಂತೆಯೆನಲ್ಕೆ ನೀಲವಸನಪ್ರಚ್ಛನ್ನ ಪರ್ಯಂಕಮಂ
ಡಳದೊಳ್ ಬೆಳ್ಪೆಸೆದಿರ್ದ ಕೌಳುಡೆಯುನೊಂದಂ ನೆಮ್ಮಿ ಕುಳ್ಳಿರ್ದ ಕೋ
ಮಳೆಯಂ ದೂರದೆ ನೋಡಿ ಕಂಡನರಸಂ ಕಾಂದಬರೀದೇವಿಯಂ ೧೮

ಅಂತಿರ್ದ ಗಂಧರ್ವರಾಜನಂದನೆಯುನತಿದೂರದೊಳ್ ವಿಸ್ಮಿತಾಂತ
ರಂಗನಾಗಿ ನೋಡಿ

ಇವಳಂ ನೋಡಲ್ ಪಡೆದೆ
ನ್ನ ವಿಲೋಚನವಪ್ಪಾವ ನೋಂಪಿಯಂ ನೋಂತುವೊ ಮಾ
ಯ್ದ ವಿಧಾತ್ರನೇಕೆ ವಿರಚಿಸ
ನೊ ವಿಲೋಚನಮಯಮೆನಲ್ ಮದಿಂದ್ರಿಯಚಯಮಂ ೧೯

ಬಗೆಯೊಳ್ ಪಿರಿದುಂ ಕೌತ್ನುಕ
ಮೊಗೆಯಲ್ಕನ್ಯೋನ್ಯಮೊಲ್ದು ನೋಡುತ್ತಿರ್ಪ
ನ್ನೆಗಮೊರ್ಮೊದಲಿರ್ವರ ದಿ
ಟ್ಟಿಗಳುಂ ಸಮದಿಟ್ಟಿಯಾದುವಂತಾ ಕ್ಷಣದೊಳ್ ೨೦

ಅಂತು ನೋಡಿ

ಈತಂ ಕೇಯೂರಂ ಪೇ
ಳ್ದಾತಂ ಪುಗುತರ್ಪನೆಂದೆನುತ್ತುಂ ತದ್ರೂ
ಪಾತಿಶಯಕ್ಕಚ್ಚರಿವ
ಟ್ಟು ತರುಣಿಯುಮಂತೆ ಬಿಡದೆ ನೋಡುತ್ತಿರ್ದಳ್ ೨೧

ಒದವೆ ಪುಲಕಾಂಕುರಂಗಳ್
ಮೊಗಲೊಳ್ ಭೂಷಣದ್ರವಮೆರಡನೆಯ ಸೂಡ್ ಮು
ನ್ನಿದಿರೇಡೆ ತಾಂ ಬಟಿಕ್ಕಿರ
ದಿದಿರೆಟ್ದಳ್ ತರಳನಯನೆ ಸಂಭ್ರಮದಿಂದಂ ೨೨

ಪಲವು ದಿವಸಕ್ಕೆ ಕಂಡೊಗೆ
ದೊಲವಿಂ ಬಿಗಿಯಪ್ಪಿದಳ್ ಮಹಾಶ್ವೇತೆಯನಾ
ಲಲನೆ ಮಹಾಶ್ವೇತೆಯುಮಾ
ಲಲನೆಯನನುರಾಗದಿಂದಮಪ್ಪಿದಳೊಗಳ್ ೨೩

ಅನಂತರಂ ಮಹಾಶ್ವೇತೆ ಕಾದಂಬರಿಯನಿಂತೆಂದಳ್ ಚಂದ್ರಾಪೀಡ ನೆಂಬೀ ಮಹಾನುಭಾವಂ ಭಾರತವರ್ಷದ ರಾಜನ್ಯುಂ ಕ್ಷಪಿತ ಪ್ರಜಾ ಪೀಡನುಮೆನಿಸಿದ ತಾರಾಪೀಡನರೇಂದ್ರಂಗೆ ನಂದನಂ ದಿಗ್ವಿಜಯ ಪ್ರಸಂಗದಿಂ ಬೞಿಸಂದೀ ಪ್ರದೇಶಕ್ಕೆ ಬಂದನಲ್ಲದೆಯುಂ ಪರಿತ್ಯಕ್ತ ಸಕಲ ಸಂಗೆಯಾಗಿ ಕಲ್ಲೆರ್ದೆಯಳೆನಿಸಿದೆನ್ನಂ ಕಾಣಲೊಡನೆ ಸ್ವಭಾವಸರಳತೆಯ ನಪ್ಪುಕಯ್ದು ನಿಜಗುಣದಿಂ ನಿಷ್ಕಾರಣಬಂಧುವುಂ ನಿರ್ನಿಮಿತ್ತಮಿತ್ರನು ಮೆನಿಸಿದನೀ ಮರ್ತ್ಯಲೋಕದ ಸಫಲತೆಯುಮಂ ಸೌಭಾಗ್ಯದ ಭಾಗ್ಯ ಮುಮಂ ಮನುಷ್ಯರಗ್ರಾಮ್ಯತೆಯುಮಂ ನೀನುಂ ಕಾಣ್ಬೆಯೆಂದೆಂತಾನು ಮಿಲ್ಲಿಗೊಡಗೊಂಡು ಬಂದೆಂ

ಅರಸನನಾಂ ಕಂಡಱಿಯೆಂ
ಪರಿಚಯಮಿಲ್ಲೆನ್ನೊಳೆಂದು ಮಿಗೆ ತಾಂ ನಾಣ್ಚು
ತ್ತಿರದಿಂದಿನಿಸ್ಕಳ್ಥೆಂತುಂ
ತಿರೆ ನೀಂ ನೆಗೞ್ವುದು ನಿರಂತರಂ ಕಮಲಮುಖೀ ೨೪

ಎಂದು ಮಹಾಶ್ವೇತೆ ಕಾದಂಬರಿಗಱಿಪುವುದುಂ ಚಂದ್ರಾಪೀಡನುಂ ಕಯ್ಗಳಂ ಮುಗಿಯೆ ಸರ್ವಾಂಗಪುಳಕಮಂ ತಳೆದು

ಪಿರಿದೊಂದಚ್ಚಱೊಳೊಲ್ದು ನೋೞ್ಪವಳ ದೀರ್ಘಾಪಾಂಗದೇಶಕ್ಕೆ ಚೆ
ಚ್ಚರಮಾಗಳ್ ಪರಿತಂದ ಸೇದೆಯೊದವಲ್ ಘರ್ಮೋದಬಿಂದೂತ್ಕರಂ
ಸುರಿಯುತ್ತಿರ್ಪುದು ಕಣ್ಣ ಪಾಪೆಗೆಲೆ ನೋಡೆಂಬಂದದಿಂ ಸ್ನೇಹನಿ
ರ್ಭರಮಾ ಕಾಂತೆಗೆ ಭೋಂಕೆನಲ್ ಸುರಿದುವಾನಂದಾಶ್ರುಬಿಂದೂತ್ಕರಂ ೨೫

ಅನಂತರಂ ಪರಿಜನಂ ಸಂಭ್ರಮಂಬೆರಸು ತಂದು ಶಯನತಳಶಿರೋ ಭಾಗದೊಳಿಕ್ಕಿದ ಹೇಮಪದಾಂಕಿತಾಸನದೊಳರಸಂ ಕುಳ್ಳಿರೆ ಕಾದಂಬರಿ

ಮಹಾಶ್ವೇತೆಯೊಡನೆ ನಿಜಪರ್ಯಂಕದೊಳ್ ಕುಳ್ಳಿರ್ಪುದುಂ ಮಹಾಶ್ವೇತೆಯ ಕಣ್ಣಱಿದು ವೇಣುರವಂಗಳುಮಂ ವೀಣಾನಾದಂಗಳುಮಂ ಗೀತಸ್ವನಂಗಳುಮಂ ಮಾಗಧಿಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತುಮಿರ್ದರನ್ನೆಗಂ

ಪ್ರಿಯದಿಂ ಕಾಂತೆ ಮಹಾಶ್ವೇ<br>
ತೆಯ ಕಾಲಂ ತಾನೆ ಕರ್ಚಿ ಪದಪಿಂದೆ ನಿಜ<br>
ಪ್ರಿಯಸಖಿಯೆನಿಸಿದ ಮದಲೇ<br>
ಖೆಯೆಂಬಳಿಂ ನೃಪನ ಕಾಲ್ಗಳಂ ಕರ್ಚಿಸಿದಳ್ ೨೬

ಅನಂತರಂ ತಾಂಬೂಲಪ್ರದಾನೋದ್ಯತೆಯಾದ ಕಾದಂಬರೀದೇವಿಯಂ ಮಹಾಶ್ವೇತೆಯಿಂತೆಂದಳ್

ಭುವನಾಧೀಶ್ವರಸುತನಭಿ<br>
ನವಾಗತಂ ಮಾನ್ಯನಪ್ಪನಾರಾಧ್ಯನೆ ದಲ್<br>
ನವಗೆಲ್ಲ ತೆಱದಿನದಱಿಂ<br>
ದವೀವುದರಸಂಗೆ ಮುನ್ನಮೀ ತಂಬುಲಮಂ ೨೭

ಎಂದು ನುಡಿಯೆ

ಅನಕ್ಕ ನಾಣ್ಚುವೆಂ ಪಿಡಿ<br>
ನೀನೆ ನೃಪಂಗಿಕ್ಕು ತಂಬುಲಮನೆಱುವೆನೆ ಪೇ<br>
ಳ್ನೇನುಮನಾನೆಂದತಿ ಲ<br>
ಜ್ಜಾನತಮುಖಿಯಾಗಿ ಕಾಂತೆ ಮೆಲ್ಲನೆ ನುಡಿದಳ್ ೨೮

ಅಂತು ನುಡಿಯೆ ಮಹಾಶ್ವೇತೆ ಮತ್ತಮಾಗ್ರಹಿಸೆ ತಂಬುಲಂಗುಡಲುಜ್ಜುಗಂಗೆಯ್ದು

ಬೆಮರಿಂ ಮುಟುಗಿದಪೆಂ ಸಂ<br>
ಭ್ರಮದಿಂ ಬಿಟ್ಟಪ್ಪೆಸೆರಸ ಕಯ್ಯುಡು ನೀಂ ಬೇ<br>
ಗಮೆನಿಪ್ಪ ತೆಱದೆ ತಾಂಬೂ<br>
ಲ ಮಿಳಿತಮಂ ಕಾಂತೆ ನೀಡಿದಳ್ ನಿಜಕರಮಂ ೨೯

ಆಗಳ್ ಪಂಚೇಂದ್ರಿಯವೃತ್ತಿಗಳೆ ಬೇಱೆ ಬೇಱೆ ರೂಪಂದಳೆದುವೆನಿ ಪಂಗುಳಿಗಳಿಂ ಮನಂಗೊಳಿಸುವ ಕರಕಮಲಂಗಳಂ ಚಂದ್ರಾಪೀಡಂ ನೀಡೆ

ಏನಸುಂ ಮುಂದೆ ನಖಾಂಶು ನಿಳ್ಕೆ ನೃಪಹಸ್ತಾನ್ವೇಷಣಂಗೆಯ್ವವೋಲ್
ನಿನಗೆನ್ನಂ ಬಿಡದುಣ್ಮಿದೀ ಬೆಮರೆ ಕಯ್ನೀರಾಗಿರಲ್ ತೋರ್ಕೆಗೊ
ಟ್ಟನೆನಂಗಂ ಪಿಡಿ ನಿನ್ನ ಕಯ್ಪಿಡೆಯನೊಂದಿರ್ದಪ್ಪುದಿನ್ನೆನ್ನ ಜೀ
ವನವೆಂಬಂದದಿನಿಕ್ಕಿದಳ್ ನಡುಗುತುಂ ತನ್ವಂಗಿ ತಾಂಬೂಲಮಂ ೩೦

ಅನಂತರಂ ಮಹಾಶ್ವೇತೆಗಂ ತಾಂಬೂಲಂಗೊಟ್ಟಳನ್ನೆಗಮೊರ್ವಂ ಕಂಚುಕಿ ಬಂದು ಗಂಧರ್ವರಾಜನುಂ ಮದಿರಾಮಹಾದೇವಿಯುಂ ನಿಮ್ಮಂ ನೋಡಲುತ್ಕಂಠರಾಗಿ ಕರೆಯಲಟ್ಟಿದರೆಂಬುದುಂ ಮಹಾಶ್ವೇತೆ ಪೋಗಲುದ್ಯೋಗಂಗೆಯ್ದು ರಸಂಗೆಕ್ಕೆದಾಣವಾವುದೆಂದು ಕಾದಂಬರಿಯಂ ಬೆಸಗೊಳ್ವುದುಮಾಕೆಯಿಂತೆಂದಳ್

ಮೊದಲೀ ಯೆರಸನನಾಂ ಕಾ
ಣ್ಬುದುಮೆನ್ನಯ ತನುವುಮೆನ್ನದಲ್ತೆನೆ ಮನೆಯಾ
ರದು ನೃಪತಿಗೆಲ್ಲಿ ಬಗೆ ಬ
ರ್ಪುದಾವೆಡೆ ಭವನ್ಮನೋಜ್ಞಮಲ್ಲಿಯೆ ನಿಲಿಸಿಂ ೩೧

ಎಂಬುದುಂ ಮಹಾಶ್ವೇತೆ ನಿಜಪ್ರಾಸಾದಸಮೀಪವರ್ತಿಯಪ್ಪ ಪ್ರಮದವನಕೇಳೀಶೈಲದ ರತ್ನಭವನದೊಳಿರಸನಿರ್ಕೆಂದು ಪೇೞ್ದು ಚೈತ್ರರಥನಂ ಕಾಣಲ್ಕೆ ಪೋದಳಿತ್ತಲಾ ಕಾಂತೆಯು ಪಿಂತನೆ ಚಂದ್ರಾಪೀಡಂ ವಿನೋದಾರ್ಥಂ ಕಾದಂಬರಿಯ ಬೆಸದಿಂ ಪ್ರತೀಹಾರಪ್ರೇಷಿತೆಯರಪ್ಪ ವೀಣಾವೇಣುವಾದ್ಯನಿಪುಣೆಯರುಂ ಗೀತಕಲಾಕುಶಲೆಯರುಂ ದುರೋದರಕ್ರೀಡಾರಾಗಿಣಿಯರುಂ ಚಿತ್ರಕರ್ಮಚತುರೆಯರುಂ ಸುಭಾಷಿತಪಠನಪರಿಣತೆಯರುಮೆನಿಸಿದ ಕನ್ನಿಕೆಯರೊಡನೆ ಕೇಯೂರಕೋಪದಿಶ್ಯಮಾನಮಾರ್ಗನಾಗಿ ಕೇಳೀಶೈಲಮಣಿಮಯಭವನಕ್ಕೆ ಬಿಜಯಂಗೆಯ್ದನನ್ನೆಗಮಿತ್ತಲ್ ಗಂಧರ್ವರಾಜಪುತ್ರಿ ವಿಸರ್ಜಿತ ಸಕಲಸಖೀಜನೆಯುಂ ಪರಿಮಿತಪರಿಚಾರಿಕಾನುಗಮ್ಯಮಾನೆಯುಮಾಗಿ ತನ್ನ ಕನ್ನೆಮಾಡಮನೇಱಿ ಶಯ್ಯಾತಳದೊಳ್ ಮೆಯ್ಯನಿಕ್ಕಿ

ಮನಮೆಱಗುಂ ನರೇಂದ್ರಸುತನೆಂದಿನಿಸಳ್ಕೆನೆ ಸುತ್ತಲುಂ ಸಖೀ
ಜನಮಿರೆಯುಂ ವಿಚಾರಿಸೆನೆ ದುಃಖದೊಳಕ್ಕನಿರಲ್ಕೆ ಲಜ್ಜೆಗಾ
ಯೆನೆ ಗುರುಗಳ್ಗೆ ಪೇಳ್ವುದೆನೆ ಚೇಟಿಕೆಯರ್ ನೆರೆದಿರ್ದರೆಂಬಿದಂ
ನೆನೆಯೆನೆ ಕೆಟ್ಟೆನೇನನಿರದಿಂತುಱು ವಿಭ್ರಮದಿಂದೊಪೆರ್ಚಿದೆಂ ೩೨

ಕಿಱುಗೂಸುಗಳುಂ ಮೊದಲಾ
ಗಱಿದಪರೆನೆ ಮದನಹತಕನಿಂದಂ ನೆಱೆ ಮುನ್
ನುಱಿವೋದಕ್ಕಂ ತಾಂ ಪೇ
ಱಿಯಳೆ ಮುನ್ನಮೆ ಮದೀಯ ಧೈರ್ಯಚ್ಯುತಿಯಂ ೩೩

ಏನೆಂಬರೊ ತಾಯ್ತಂದೆಯ
ರೇನಂ ಗಂಧರ್ವಲೋಕಮೆನ್ನುಮೊ ಕೇಳ್ದಿಂ
ತೇನೆಂಬೆನದೇಗೆಯ್ದಪೆ
ನೇನೆವದಿಂ ಮಱಸಿದಪ್ಪೆನೆನ್ನಯ ತಪ್ಪಂ ೩೪

ತನುವಂ ತೆಯ್ದಪ್ಪಳಕ್ಕಂ ವ್ರತದೊಳೆನುತೆ ಕನ್ಯಾವ್ರತಕ್ಕಂತೆ ಪೂಣ್ದ[illegible]
ರ್ದನೆದಂ ಕೇಳ್ದಿರ್ದರಂತೆನ್ನಯ ಕೆಳದಿಯರಾ ಮಾರ್ಗದಿಂದಂತೆ ಕೇಯೂ
ರಕಯ್ಯೊಳ್ ಮುನ್ ಮಹಾಶ್ವೇತೆಗೆ ಮಿಗೆ ನುಡಿದಾನಟ್ಟಿಯುಂ ಮತ್ತಿದೇ
ನೆಂಬೆನೊ ಬಂದತ್ತಿತ್ತಣಿಂದೆಂದೆಱಿಯೆನೆನಗೆ ಮತ್ಪಾಪದಿಂ ವಿಪ್ರಲಂಭಂ ೩೫

ಪೆಱತೆಂತಿರ್ಕೆಂದುಂ ಕೇ
ಳ್ದಱಿಯೆಂ ಕಂಡಱಿಯೆನರಸನೆಂದಾರೆಂದಾ
ನಱಿಯೆಂ ನಾಣ್ಗಿಡುವಿನಮಾ
ತೆಱದಿಂದೆನ್ನಂ ವಿಡಂಬಿಸಲ್ಕೊಡರಿಕುಮೇ ೩೬

ಎಂದು ಯುವರಾಜಾಭಿಮುಖಹೃದಯೆಯಾಗಿ ಮನಂಗೊಟ್ಟತಿಪ್ರೇಮ
ವಶದಿನಸ್ವತಂತ್ರೀಕೃತೆಯುಂ ಪರವಶೀಭೂತೆಯುಮೆನಿಸಿರ್ದಳಿತ್ತಲ್
ಚಂದ್ರಾಪೀಡಂ ಕ್ರೀಡಾಪರ್ವತದ ಮಣಿಮಯಭವನದೊಳ್

ಅಡಿಯೊತ್ತಲ್ ಕೇಯೂರಕ
ನೆಡೆಯಱಿದೋಲೈಸೆ ಕನ್ಯಕಾಸಂಕುಳಮಂ
ದಡಕಿಲ್ಗೊಂಡೊಪ್ಪುವ ಕೌ
ಳುಡೆಯಿಂ ಸೊಗಯಿಸುವ ಪಾಸಿನೊಳ್ ಪಟ್ಟಿರ್ದಂ ೩೭

ಇಂತು ಗಂಧರ್ವರಾಜನಂದನೆಯ ನೆಗಟ್ತೆಗೆ ಡೋಲಾಯಮಾನ ಚಿತ್ತನಾಗಿ ತನ್ನೊಳಿಂತೆಂದಂ

ಕುಸುಮಶರಾಸ್ತ್ರಪುಷ್ಪರಜದಿಂ ಪೊರೆದಂತಿರೆ ಬಾಷ್ಪವಾರಿಗಳ್
ಪಸರಿಸೆ ರಾಗವಗ್ಗಲಿಸೆ ಚಾರುಚಲನ್ನಯನತ್ರಿಭಾಗದಿಂ
ಕುಸಿಕುಸಿದೆನ್ನನೀಕ್ಷಿಸುವಳೆನ್ನನಿಸೀಕ್ಷಿಸಲಾ ಲತಾಂಗಿ ಲ
ಜ್ಜಿಸಿ ತನುವಂ ನಿಜಸ್ಮಿತಸಿತಾಂಶುಕಪಲ್ಲವದಿಂ ಮುಸುಂಕುವಳ್ ೩೮

ಉದಕಾಂತಃಪ್ರಾತಿವೊಲ್ ಸ್ನೇಹದ ಲವಮೆನಸುಂ ಪರ್ವಿ ಮುದ್ರಾವನೋದ್ಯನ್ಮದದೊಳ್ ತೋಱುತ್ತುಮಿರ್ದಪ್ಪುದು ಕನಸಿನವೋಲೆನ್ನ ತತ್ಕಾಂಕ್ಷೆ ಕಯ್ಸಾರದುದಂ ತೋಱುತ್ತುಮಿರ್ದತ್ತೆ ನಗೆ ಪಿರಿದುಮೀ ಚಿತ್ತದೊಂದಾಸೆ ದಲ್ ಮಾಯದ ಕುಂಚಂಬೋಲಸಂಭಾವ್ಯಮನೆ ದಿಟಮೆನಲ್ ತೋಱುತಿರ್ದಪ್ಪುದೀಗಳ್ ೩೯

ಎನಗಿನಿತು ಚಿಂತೆಯೇಕೆ ಗ
ಡೆನಗದೆ ದಿಟಮಪ್ಪುದಾದೊಡಪ್ರಾರ್ಥಿತಮಾ
ವನಿತೆಯ ಮನಮಂ ಪ್ರಕಟಿಸಿ
ಮನೋಭವಂ ತಾನೆ ಕಳೆದಪಂ ಸಂದೆಯುಮಂ ೪೦

ಎಂದವಧಾರಿಸಿ

ಹರಿಣೀ ರೋಮಂಥಫೇನಪ್ರಸ್ರುತಕಣಲವಾಸಾರದಿಂ ನಾಂದು ಯೋಪಿ
ಚ್ಚರಣಾಲಕ್ತಾಂಶುವಿಂ ಕೆಂಪಡರ್ದ ಲತೆಯ ಬಾಪಿನ್ ರಾಪದಿಂದೊಪ್ಪಿ ಪುಷ್ಪೋ
ತ್ಕರರೇಣುಸ್ತೋಮದೊಳ್ ತಳ್ತಚಲಿತ ಯಮುನಾವಾರಿವಿಸ್ತಾರಮಂ ಮಾಂ
ಕರಿಸಲ್ ಸಾಲ್ದಿರ್ದ ಹಾರೀತಕ ಹರಿತಶಿಲಾಪಟ್ಟದೊಳ್ ಭೂಪನಿರ್ದಂ ೪೧

ಅಂತಾ ಸಭಾಯದೊಳ್

ಬಱಿಲ್ಲಂ ಬಿಸನಾಳಜಾಲಕ್ಕದಿನಸೆಗಳ್ ಕೂಡೆ ಪೀರ್ದಂದುದಾ
ಗಮೆಲ್ಲಂ ಸುಖಯಿಂದೆ ಲೇಪಿಸಿದುದುರ್ವೀಚಕ್ರಮೆಲ್ಲಂ ಪಯಃ
ಪ್ರಸರಾಪೂರದೆ ತೀರಿಕಿದತ್ತು ದೆಸೆಯೆಲ್ಲಂ ಚಂದ್ರಸಾರಾರದಿಂ
ಮುಸುಕಿತ್ತೆಂಬಿನಮೊಂದು ಬೆಳ್ಪೆಳಗು ಪರ್ವಿತ್ತೆಯ್ದೆ ರೋದೋಂತಮಂ ೪೨

ಅಂತು ಪಸರಿಸುವ ಬೆಳಗಿನ ಬಳಗಮಂ ನೋಡಿ

ಪರಿಭಾವಿಸಲೆರ್ಗಂ ತ್ವಾ
ಸರಿದಾಯ್ತೊರ್ಮೊದಲೆ ಚಂದ್ರನುದಯಿಸಿದನೊ ಪೇಳ್
ಸುರಸಿಂಧು ಗಗನವಮಂ ಶೀ
ಕರನಿಕರವೆ ಸಿಂಪಿಸುತ್ತೆ ಧರೆಗೆಟಿದಪುದೋ ೪೩

ಎಂದತಿಕುತೂಹಲಂಬೆರಸು ಬೆಳಗಿನ್ನ ಬರ್ಪ ದೆಸೆಯಂ ನೋಟ್ಟಿನ ಮಾಗಳಿರ್ಪಿಂ ಪೊರೆದ ದುಗುಲದಿಂ ಬಾಸಣಿಸಿ ಚಂದನಾನುಲೇಪಂ ತೀವಿದ ಸಿಪ್ಪಂ ಪಿಡಿದು ಕಯ್ಗೊಟ್ಟು ನಡೆವ ಪಡಿಯುಜಿತಿಯುಂ ಮಾಲತೀ ಕುಸುಮಮಾಲಿಕೆಯುಂ ಪಿಡಿದ (ತಮ್ಮಾಳಿಕೆಯುಂ) ಸುಯ್ಯೆಲರಿಂ ಪ್ರಾಜಿದ್ದಪು ವೆಸಿಪ ದುಕೂಲಂಗಳಂ ಪಿಡಿದು ನೆಲನನುಗ್ಗಡಿಪ ಕೇಯೂರಕನುಮೊಡ ವರೆ ಕನ್ಯಕಾಪರಿವೃತೆಯುಂ ಛತ್ರಚಾಮರ ವಿರಾಜಿತೆಯುಮಾಗಿ ಮದಲೇಖೆ ಬರುತಿರ್ದಳಾಕೆಯ ಕೆಲದೊಳ್ ಬರ್ಪ ತರಳಿಕೆಯ ಕಯ್ಯ ಸಿತಾಂಶುಕಾ ಚ್ಛಾದಿತ ರತ್ನಮಯಪಟಲಕದೊಳ್

ಪೊಳೆವೆಳದಿಂಗಳೊಳ್ಮುಗಳಿಂ ಸುರಸಿಂಧುವ ಶೀಕರಂಗಳಿಂ ಜಳನಿಧಿಯಲ್ಲಿ ಮಾರ್ಪೊಳೆವ ತಾರೆಗಳಿಂ ಸಮೆದಂತೆ ಶಾರದಂ ಗಳ ಜಸದೇಪ್ಗೆ ಲಕ್ಷ್ಮಿಯ ಮುಗುಳ್ನಗೆ ಜೊನ್ನದ ಬಾಟ್ಕೆ ರತ್ನಸಂ ಕುಳದಧಿದೈವಮಂದೆಸೆದುದುಜ್ಜ್ವಳಮೌಕ್ತಿಕಹಾರಮಂಡಳಂ ೪೪

ಅದಂ ಕಂಡು

ಎಲೆ ಚಂದ್ರಾತಪರುಚಿಯಂ
ಗೆಲೆವಂದೀ ಧವಳಿಮಕ್ಕೆ ಕಾರಣವೇ ನಿ
ರ್ಮಳತಾರಹಾರಮಿಂತೀ
ಗಳೆಂದು ಬಗೆದಂ ನರೇಂದ್ರನಂದನನಾಗಳ್ ೪೫

ಅಂತು ಬಗೆಯುತ್ತುಮಿರ್ದು ಮದಲೇಖೆಯ ಬರವಂ ಕಂಡಾಕೆಯಂ ಪರ್ಯಂಕದೊಳ್ ಕುಳ್ಳಿರವೇಟ್ಟು ನೃಪರೂಪಚಂದ್ರಂ ಸಿಂಹಾಸನದೊಳ್ ಕುಳ್ಳಿರ್ಪುದುಮಾ ಕಾಂತೆ ತಾನೆಟ್ಟು ಮಲಯಜಾನುಲಿಪ್ತದೇಹನುಮಂ ಮಾಲತೀಕುಸುಮದಾಮಶೇಖರನುಮಂ ಮಾಡಿ ದುಕೂಲಂಗಳನುಡೆ ಕೊಟ್ಟು ಹಾರಮಂ ಪಿಡಿದುಕೊಂಡಿಂತೆಂದಳ್

ಮನವೊಲ್ದೀ ಮಧುರೋಕ್ತಿಗಾರೆಳಸರೀ ಚೆಲ್ವಿಂಗದಾರ್ ಮೆಚ್ಚರೀ
ವಿನಯಕ್ಕಾರೊಳಗಾಗರೀ ಋಜುಗುಣಕ್ಕಾರ್ ಕೂರರೀ ನಿನ್ನ ಪೆಂ
ಪಿನ ಬಿಣ್ಪಿಂಗಿರದಾರ್ ಮರುಳ್ಗೆ ಳಸರೀ ಸನ್ಮೂರ್ತಿಗಾರ್ ನೆಟ್ಟನಾ
ಳ್ತನದೊಳ್ ನಿಲ್ಲದರೀ ಮನೋಹರತೆಗಾರ್ ಸೋಲರ್ ಮಹೀವಲ್ಲಭಾ ೪೬

ಹೃದಯಮನೊಪ್ಪುಗೊಂಡ ನಿಮಗೆನ್ನ ಗುಟ್ಟುಂ ಕುಡುವೊಂದು ವಸ್ತುವಾ
ವುದೊ ಗಡ ಜೀವಿತೇಶ್ವರರೆನಿಪ್ಪವೆರ್ಗಂ ಪ್ರತಿಪಾದ್ಯಮಪ್ಪುದಾ
ವುದೊ ಬರವಿಂದೆ ಮಾಡಿದುಪಕಾರಮನಿನ್ನದನೇತಱಿಂದೆ ನೀ
ಗಿದಪೆನೊ ಎಂದು ಚಿತ್ರರಥನಂದನೆ ತೋರಿಸಿದಪ್ಪೆಳಟ್ಟಱಿಂ ೪೭

ಕನ್ನೆ ನಿಜಜೀವಿತಮುಮಂ
ತನ್ನುಮನೀರದಿತ್ತು ತ್ರೊಟ್ಟುತನಮಂ ತಾಂ ಕೊಂ
ಡುಂ ನೆಱೆಯಲ್ ಸುಜನರ್ಗಿನ್
ನಿನ್ನನ್ನರ್ಗೇನೆ ಮಾಡಿಯುಂ ತಣಿವುಂಟೇ ೪೮

ಅದಱಿನಿಂಗಡಲ ಕಡೆಪದೊಳೊಗೆದ ನೂತ್ನರತ್ನಂಗಳೊಳೇ
ಹಾರಮೇ ಶೇಷಮಪ್ಪುದಱಿಂ ಶೇಷವೆಂಬ ಪೆಸರೆಸೆಯೆ

ವರುಣಂಗಿತ್ತಂ ರತ್ನಾ
ಕರನಂತಾ ವರುಣನಟ್ಟಱಿಂದಿತ್ತಂ ಚಿ
ತ್ರರಥಂಗೆ ಕೂರ್ಮೆಯಿಂ ಚಿ
ತ್ರರಥಂ ನಿಜತನುಜೆಗಿತ್ತನಿದನವನಿಪತೀ ೪೯

ಇಂತಿದನಾ ಕಾದಂಬರೀದೇವಿ

ಹಾರಂಗಳೊಳೆಸೆವೀ ಮಣಿ
ಹಾರಂ ಮದನಾವತಾರಮೆನಿಸಿದ ನಿನ್ನಾ
ಕಾರಕೆಣೆಯಕ್ಕುಮೆಂದವೆ
ಧಾರಿಸಿ ತಾಂ ನಿಮಗೆ ಕುಡುವೆನೆಂಬೞ್ ಬಗೆಯಿಂ ೫೦

ಪೊಳೆವ ಸುಧಾಸೂತ್ರಿ ನಭ
ಸ್ಸ್ಥಳದೊಳ್ ಕಣ್ಗೊಳಿಪ ತೆಱದೆ ಯುವರಾಜನುರ
ಸ್ಸ್ಥಳದೊಳ್ ಮುಕ್ತಾವಳಿ ಕ
ಣ್ಗೊಳಿಸುಗುಮೆಂದಟ್ಟಿಱಿಂದಮಟ್ಟಿದಳೀಗಳ್ ೫೧

ಆಭರಣದ ಪೊಱೆಯಂ ತಳೆ
ವಾಭರಣಪ್ರಿಯರ ತೆಱದೆ ಸದ್ಗುಣಗಣರ
ತ್ನಾಭರಣರ್ ನಿಮ್ಮೊಂದಿಗ
ರಾಭರಣದ ಪೊಱೆಯನೇಕೆದಂ ಪೊತ್ತಿರ್ಪರ್ ೫೨

ಆದೊಡಂ ನಿಮಗಿದು ಪ್ರೀತಿಯೆನೆ ಭಾವಿಸಲ್ವೇಱ್ಪುದಪ್ಪುದಲ್ಲದೆಯುಂ

ಸಿರಿಯೊಡನೆ ಪುಟ್ಟೆ ತಂದಾ
ಹರಿ ಕೌಸ್ತುಭವೆಂಬ ಕಲ್ಲ ಮುಱಿಯುಮನತ್ಯಾ
ದರದಿಂದೆಂದುಂ ತಾನಾ
ಗುರದೊಳ್ ತಳೆದಿರ್ಪನೇಕೆ ನೀವಱಿಯದುದೇ ೫೩

ಅದಱಿಂ ನಾರಾಯಣಂಗಂ ನಿಮಗಂ ಲಕ್ಷ್ಮಿಗಂ ಕಾದಂಬರಿಗಂ ಕೌಸ್ತುಭಕ್ಕಂ ಶೇಷಾಭಿಧಾನಹಾರಕ್ಕಂ ವಿಶೇಷಮೇನುಮಿಲ್ಲವಾಗಿ ಕಯ್ಕೊಂಡು ಕಾದಂಬರೀಪ್ರಣಯಕ್ಕೆ ನಿಮಿರ್ಕೆಯಂ ಮಾಳ್ಪುದೆಂತಾನುಂ ಕಯ್ಕೊಳ್ಳದಿರಲಾಕೆ ಭಗ್ನಪ್ರಣಯೆಯಾದಪ್ಪಳೆಪ್ಪೊಡೆ ತನ್ನಂ ಬಿಡುವಳೆಂದು

ತರಳಿಕೆಯ ಕಯ್ಯೊಳಟ್ಟಿದ
ಳೆರಸ ಮಹಾಶ್ವೇತೆ ತಾನೆ ಬೇಱೊಂದನೆನು
ತ್ತಿರಸಲ್ಲದೆಂದು ಮುತ್ತಿನ
ಸರಮನದಂ ಕೊರಲೊಳಾಕೆ ಕಟ್ಟಿದಳಾಗಳ್ ೫೪

ಅಂತು ಕಟ್ಟೆ ಬೆಱಗಾಗಿ ವಿನಯರತ್ನಾಕರನಿಂತೆಂದ್ಗಂ

ಪ್ಪುದಲೇಱೇ ಬಲ್ಲೆ ನೀಂ ಕಯ್ಕೊಳಿಸಲೆಮಗೆ ಮಾತಾಡಸಲ್ಲೆಂಬವೊಲ್ ತೋಱುತಿರ್ದ್ದೆ ನೀಂ ನಿನ್ನೊಂದು ವಾಕ್ಕೌಶಲಗುಣಮನಿದಂ ನಿಮ್ಮ ಸೌಜನ್ಯಜಾಲಂ ಪುದಿದಿರ್ದತ್ತೆನ್ನನಾನಿನ್ನೆನಗೊಡೆಯನೆ ಚಿತ್ತಕ್ಕೆ ವಂದಂತುಟೇ ಮಾಳ್ಪುದು ದಲ್ಕಾದಂಬರೀದೇವಿಯ ಗುಣಪಣದಿಂ ಮಾಱುವೋದೆನ್ನನೀಗಳ್ ೫೫

ಎಂದಿಂತು ಮೊದಲಾಗಿ ಕಾದಂಬರೀ ಸಂಬಂಧಂಗಳಪ್ಪ ನುಡಿಗಳಂ ನುಡಿದು ಮದಲೇಖೆಯುಂ ಕಟಿಪಿ ಪಿರಿದು ಬೇಗಮಿರೆ

ಅದೊ ರಜನಿಯನೆನುರಾಗದೆ
ಹೃದಯಮನೋಜಿಸಿದನೆಂಬಿನಂ ಮಂಡಲಮ
ಧ್ಯದೊಳೆಸೆಯಲಾತ್ಮಲಾಂಛನ
ಮುದಯಿಸಿದಂ ರಜನಿನಾಥನುದಯಾಚಲದಿಂ ೫೬

ಜಗಮಿದು ಮೌಕ್ತಿಕದಿಂದಂ
ತೆನೆದುದೊ ದಂತದೊಳೆ ಸಮೆದುದೋ ಪಾಲ್ಗಡಲಿಂ
ದೊಗೆದುದೊ ಪೇಟೆಂಬಿನೆಗಂ
ಸೊಗಯಿಸಿದುದು ಸಾಂದ್ರಚಂದ್ರಿಕಾವಿಸ್ತಾರಂ ೫೭

ಅಂತಾ ಚಂದ್ರಿಕೆಯೊಳ್ ನೃಪರೂಪಚಂದ್ರಂ ಕ್ರೀಡಾಶೈಲದ ತಟ್ಟಿ ಲೊಳ್ ನಡಪಾಡುತಿರ್ಪುದುಂ ಪರಿಜನಂಗಳ್

ತೆರೆಗಳ್ ಮೆಲ್ಪಿಂದೆ ನೀರ್ವಿಜ್ಞಣಿಗೆಯ ತೆಱದಿಂ ಬೀಸೆ ಹಂಸದ್ವಯಂಗಳ್
ತರದಿಂ ಕಣ್ಗೆಯ್ದೆ ನೀರ್ವಕ್ಕಿಗಳುಲಿಯೆ ದಳನ್ನೀಲನೀರೇಜನೀ ಬಂ
ಧುರಗಂಧೋದ್ಗಾರಿ ಲೀಲಾಸರದ ಪುಳಿನದೊಳ್ ಸಿಂದುವಾರೋಪಧಾನಂ
ಬೆರಸೊಪ್ಪಂಬೆತ್ತುದೀ ಮುತ್ತಿನ ಪಟುಶಿಲೆಯೊಳ್ ದೇವ ಕುಳ್ಳಿರ್ಪುದೀಗಳ್ ೫೮

ಎಂಬುದುಂ ಕುಳ್ಳಿರೆ ಕೇಯೂರಕಂ ಥೋಂಕನೆ ಬಂದು ದೇವಾ ಕಾದಂಬರೀದೇವಿ ನಿಮ್ಮಂ ನೋಡಲೆಂದು ಬಂದಳೆಂದು ಬಿನ್ನವಿಸಲರಸನತಿ ಸಂಭ್ರಮದಿನಿದಿರೇೞ್ಪನ್ನೆಗಮಿತರೆಯಂತಲ್ಪಸಖೀಜನಪರಿವೃತೆಯುಮಪನೀತಾಶೇಷರಾಜಚಿಹ್ನೆಯುಂ ಮದಲೇಖಾದತ್ತಹಸ್ತಾವಲಂಬೆಯುಮಾಗಿ ಕಾದಂಬರೀದೇವಿ ಬಂದು ನಿಜಪ್ರೀತಿಯಂ ತೋಱಲೆಂದು ಪರಿಜನದಂತೆ ನೆಲದೊಳ್ ಕುಳ್ಳಿರೆ ಚಂದ್ರಾಪೀಡದೇವನುಂ ಮೌಕ್ತಿಕಶಿಲಾತಲದೊಳ್ ಕುಳ್ಳಿರೆಂದು ಮದಲೇಖೆ ಪಿರಿದುಮಾಗ್ರಹಿಸೆಯುಮಾಗಳ್ ನೆಲದೊಳ್ ಕುಳ್ಳಿರ್ದು ಗಂಧರ್ವರಾಜನಂದನೆಯನಿಂತೆಂದಂ

ನೋಡಲೊಡಂ ಕೃತಾರ್ಥರೆನಿಪಾಳ್ಗಳೊಳೇನವಕಾಶಮುಂಟೆ ಮಾ
ತಾಡುವೊಡಿಂತನುಗ್ರಹಿಸುವಲ್ಲಿಗೆ ತಕ್ಕುದದಾವ ಭಂಗಿಯಿಂ
ನೋಡುವೊಡೆನ್ನೊಳಿಲ್ಲ ಗುಣಲೇಶಮುಮೀ ತೆಱದಿಂದನುಗ್ರಹಂ
ಮಾಡುವುದರ್ಕೆ ದೇವಿಯುರದೊಂದು ಋಜುತ್ವಮೆ ಮುಖ್ಯಕಾರಣಂ ೫೯

ವಿಭವದೆ ನೆಗಟ್ದನ್ವಯದೊಂ
ದಭಿಮಾನಮದೇವುದೆಂದು ಪೊಸ ಸೇವಕರೊಳ್
ರಭಸದೆ ನಿಜಸೌಜನ್ಯ
ಪ್ರಭಾವಮಂ ಮೆಱೆವಿರಲ್ಲದೇಂ ಪೆಱತುಂಟೇ ೬೦

ಇನಿಸುಂ ದಾಕ್ಷಿಣ್ಯಮುಮಂ
ಮನದೊಳ್ ಭಾವಿಸದೆ ಭೃತ್ಯನೆನೆ ಧನ್ಯನೆನಿಂ
ತಿನಿತಾದರಮೇಕೆಯೊ ಪರಿ
ಜನದೊಳ್ ಪೆಸಕಯ್ದು ಬರ್ದುಕಿಮೆಂಬೊಂದೆಡೆಯೊಳ್ ೬೧

ಪರರ್ಗುಪಕರಿಪೆಡೆಗಳ್ಗುಪ
ಕರಣಂ ತನು ತೃಣದ ತೆಱದೆ ಲಘು ಜೀವಿತಮುಂ
ಬೆರಡುಂ ಪಾವುಡಮಿಂತೀ
ಬರವಿಂಗೆನಲೆನಗೆ ಲಜ್ಜೆಯಾದಪುದೀಗಳ್ ೬೨

ಎಂದು ನುಡಿಯೆ ಮದಲೇಖೆ ಮಾರ್ಕೊಂಡು ನೀವಿಂತು ಕೀಟ್ಬಟ್ಟು
ನುಡಿಯೆ ಕಾದಂಬರೀದೇವಿ ಪೇದಿಸುವಳೆಂದು ನುಡಿಯೆ ಕಾದಂಬರೀದೇವಿ
ಕೃತಪ್ರಸ್ತಾವೆಯಾಗಿ

ಅವನೀಪಾಲಕಚಕ್ರವರ್ತಿ ವಿಭು ತಾರಾಪೀಡನೆನ್ನಂ ವಿಳಾ
ಸವತೀದೇವಿಯದೆನ್ನಲಾರ್ಯಶುಕನಾಸಂ ತಾನದೆನ್ನಂ ಮಹೀ
ಭುವನಂ ನೋಡುವೊಡೆಂತುಟಿಲ್ಲಿಗೆನಿತಾವುಜ್ಜೈನಿಯೆಂತಿರ್ಪುದೊ
ಪ್ಪುವುದೇ ಭಾರತವರ್ಷಮೆಂದು ಬೆಸಗೊಂಡಳ್ ಕಾಂತೆ ಭೂಕಾಂತನಂ ೬೩

ಎಂದಿವು ಮೊದಲಾಗಿ ಪಲವುಮಂ ಬೆಸಗೊಳುತ್ತುಂ ಪಿರಿದು ಬೇಗ
ಮಿರ್ದು ಕಾದಂಬರಿ ಕೇಯೂರಕನುಮಂ ಪರಿಜನಮುಮನರಸನ ಸಾರೆ

ಯಿರವೇಟ್ಟು ತನ್ನ ಕನ್ನೆವಾಡಕ್ಕೆ ಪೋಗಿ ಶಯನತಳಮನಲಂಕರಿಸಿದಳಿತ್ತ ಕೇಯೂರಕನಡಿಯೊತ್ತೆ ಮುನ್ನಿರ್ದೆಡೆಯೊಳೆ ಯುವರಾಜನಿರ್ದು ಕಾದಂಬರೀದೇವಿಯ ನಿರಹಂಕಾರಮುಮಂ ಮಹಾಶ್ವೇತೆಯ ನಿಷ್ಕಾರಣವತ್ಸಲತೆಯುಮಂ ಮದಲೇಖೆಯ ಸುಜನತೆಯುಮಂ ಪರಿಜನದ ಮಹಾನುಭಾವತೆಯುಮಂ ಗಂಧರ್ವರಾಜಲೋಕದ ಸಮೃದ್ಧತೆಯುಮಂ ಕಿಂಪುರುಷವಿಷಯದ ರಮ್ಯತೆಯುಮಂ ಮನದೊಳ್ ಭಾವಿಸುತಿರ್ಪನ್ನೆಗಂ

ಇರುಳೋರಂತಿರೆ ಕಾದಂ
ಬರಿಯನೆ ನೋಡುತ್ತುಮಿರ್ದು ಝೋಂಪಿಸೆ ನಿದ್ರಾ
ತುರನಾಗಿ ಪಟ್ಟೆ ಸಾರ್ವಂ
ತಿರೆ ಸಾರ್ದಂ ಚಂದ್ರನಪರವೇಲಾವನಮಂ ೭೪

ಅದೆ ಜಕ್ಕವಕ್ಕಿಗಳ ಹೃದ
ಯದ ರಾಗಂ ಪುದಿದುದೆನಿಸಿ ಕೆಂಪಂ ಕಯ್ಕೊಂ
ಡುದಯಾದ್ರಿಯಿಂದಮುದಯಿಸಿ
ದುದು ಬಿಂಬಂ ಚಕ್ರವಾಕಚಕ್ರೇಶ್ವರನಾ ೭೫

ಆಗಳ್ ಚಂದ್ರಾಪೀಡಂ ಪ್ರಕ್ಷಾಳಿತಮುಖಕಮಲನುಂ ಕೃತಸಂಧ್ಯಾವಂದನನುಂ ಗೃಹೀತತಾಂಬೂಲನುಮಾಗಿ ಕೇಯೂರಕ ಕಾದಂಬರಿಯೆಲ್ಲಿರ್ದಳುಪ್ಪವಡಿಸಿದಳಿಲ್ಲೆಂಬುದಂ ನೋಡಿ ಬಂದಱಿಪುವುದೆಂಬುದುಮವಂ ಪೋಗಿ ಬಂದು ದೇವ ಮಂದರಪ್ರಾಸಾದದ ಕೆಟಗಣ ಸೌಧತಳವೇದಿಕೆಯೊಳ್ ಮಹಾಶ್ವೇತೆವೆರಸಿರ್ದಪಳೆಂದು ಬಿನ್ನಪಂಗೆಯ್ಯಲೊಡಂ ಗಂಧರ್ವರಾಜನಂದನೆಯಲ್ಲಿಗೆ ಬರ್ಪನ್ನೆಗಮನೇಕಪರಿವ್ರಾಜಿಕಾಸಮಾಜಂ ಸುತ್ತುಮೋಲಗಿಸುತ್ತಿರಲಂತಃಪುರಾಭ್ಯರ್ಹಿತರೊಳಾದರಂಬೆರಸು ಸಂಭಾಷಿಸುತ್ತುಂ ಸೌಧತಳವೇದಿಕೆಯೊಳ್ ಗಂಧರ್ವರಾಜಬಾಂಧವವೃದ್ಧರಂ ವೇತ್ರಾಸನಾದಿ ದಾನದಿಂ ಸನ್ಮಾನಿಸುತ್ತುಮಿರ್ದ ಮಹಾಶ್ವೇತೆಯ ಪೆಱಗೆ

ಎರಡುಂ ಬಂಚಂಗಳಿಂದಿಂಚರವೊಸರ್ವಿನೆಗಂ ಕಿನ್ನರದ್ವಂದ್ವವೊತ್ತು
ತ್ತಿರೆ ನಾನಾಭಂಗಿಯಿಂ ನಾರದತನಯೆ ನಯಂಬೆತ್ತುದೆಂಬಂತೆ ಪಾಡು
ತ್ತಿರೆ ಪುಣ್ಯೋಪೇತಮಂ ಭಾರತಮನೆಸೆವ ಪೌರಾಣಿಕರ್ ಪಕ್ಕದೋದು
ತ್ತಿರೆ ಕೇಳುತ್ತಿರ್ದ ಕಾದಂಬರಿಯನೆಸೆಸಿಪಂ ದೂರದೊಳ್ ಕಂಡನಾಗಳ್ ೭೬

ಪೊಳೆವ ಸ್ಫುಲಿಪಲ್ಲ ನುಣ್ಬೆಳ
ಗೆಳಸಿದ ತಾಂಬೂಲಬದ್ಧಕೃಷ್ಣಿಕೆಯಿಂ ಕ
ಣ್ಗೊಳಿಪ ನಿಜಾಧರಮಂ ಕೋ
ಮಳೆ ನೋಡುತ್ತಿರ್ದಳಮಳಮಣಿದರ್ಪಣದೊಳ್ ೬೭

ಅಂತಿರ್ದಳನೆಯ್ದೆ ವಂದು ಸುಧಾವೇದಿಕೆಯೊಳಿಕ್ಕಿದಾಸನಮನಲಂಕರಿಸಿ ಕಿಱಿದು ಬೇಗಮಿರ್ದು ಮಹಾಶ್ವೇತೆಯುಂ ಮಂದಸ್ಮಿತವದನನಾಗಿ ನೋೞ್ಪುದುಂ ವಿದಿತಾಭಿಪ್ರಾಯೆಯಾಗಿ ಕಾದಂಬರಿಯಿಂತೆಂದಳ್

ಚಂದ್ರಿಕೆಯಿಂದಂ ದ್ರವಿಯಿಪ
ಚಂದ್ರೋಪಲದಂತೆ ನಿನ್ನ ಗುಣಗಣದಿಂದಂ
ಚಂದ್ರಮುಖಿ ನಾಂದನತೆಗಿ ನ
ರೇಂದ್ರಂ ನುಡಿಯಲ್ಕಱಿಯದಿರ್ದಪೆನೀಗಳ್ ೬೮

ಅಱಿಯದೆ ಪೋದೆಡೆಯಂ ಬಿಡ
ದಱಸುತ್ತೆಂತಿರ್ದನೆನುತುಮಮ್ಮಳದಿಂದಂ
ಪೆಱಗಿರ್ದ ರಾಜಲೋಕಂ
ಮುಱುಗದೆ ಮಾಣದು ಕುಮಾರನಂ ಕಾಣ್ಬನೆಗಂ ೬೯

ಕಮಲಿನಿಗೆ ಕಮಲಬಂಧುಗೆ
ಕುಮುದಿನಿಗಾ ಕುಮುದಿನೀಶ್ವರಂಗೆಂತೀಗಳ್
ತಮಗಂತಿರ್ಪೆಡೆಗಳ್ ದೂ
ರಮಾದೊಡಂ ಪ್ರೀತಿ ಮಾಣದಾಕಲ್ಪಾಂತಂ ೭೦

ಅದಱಿಂದರಸಂಗೆ ಪೋಗಲ್ವೇೞ್ಕುಮೆಂದು ನುಡಿಯೆ ಕಾದಂಬರಿಯುಂತೆಂದಳ್

ತವಗಿನ್ ಪೆಱತೇಂ ಸ್ವಾಧೀ
ನವೆನಿಪ ಪರಿಜನದೊಳೆನ್ನ ಮನದೊಳ್ ಪೇೞಂ
ಬವಳಾನಲ್ಲಣಮುದಱಿಂ
ದಪೆಕ್ಕ ಮತ್ತಾರ್ಗೆ ತಾವಿದಂ ಪೇೞ್ವಿರಾ ೭೧

ಎಂದು ನುಡಿದು ಗಂಧರ್ವಕುಮಾರಕರಂ ಕರೆದೆರಸನಂ ಬೀಡಿಂ ಗೆಯ್ದಿಸಿಮೆಂದು ಪೇಳ್ದ ವಿದಗ್ಧವಿದ್ಯಾಧರನೆೞ್ದು ಮಹಾಶ್ವೇತೆಗೆ ನಮಸ್ಕಾರಂಗೆಯ್ದು ಕಾದಂಬರಿಗೆ ಕಯ್ಗಳಂ ಮುಗಿದು

ಪಿರಿದು ನುಡಿಯೇವುದೆನಗಿನ್
ಪರಿಜನದೊಳಗೊರ್ವನೆಂದು ದೇವಿಯರೆನ್ನಂ
ಪರಿಭಾವಿಪುದೆಂಬಿದನುಸಿ
ರ್ದರಸಂ ಪೊಱಮಟ್ಟನಾಗಳಂತಃಪುರಮಂ ೭೧

ಅಂತು ಪೊಱಮಡೆ

ಬರತೆಗೆದುದೊ ನೃಪನ ಗುಣೋ
ತ್ಕರಮೆನೆ ಕಟಿಪಲ್ಕೆ ಕಡೆಯ ಬಾಗಿಲ್ವಾಡಂ
ಬರೆಗಂ ಬಂದುದು ಕಾದಂ
ಬರಿ ಪೊಱತಾಗಬಳಕನ್ಯಕಾ ನಿಕುರುಂಬಂ ೭೨

ಆಗಳಾ ಕನ್ನಿಕೆಯರಂ ಮಗುೞ್ಚಿ ಕೇಯೂರಕಂ ಸಾರ್ಚಿದಿಂದ್ರಾಯುಧಮನೇಱಿ ಗಂಧರ್ವರಾಜಕುಮಾರರೊಡನೆ ಹೇಮಕೂಟದಿಂ ಪೊಱಮಟ್ಟು ಪೋಗುತ್ತುಮಿರ್ದು

ಅಗಲಲಸಹ್ಯಮೆಂದು ಪೆಱಗೀ ಬಟಿಸಲ್ವಳಿ ಮುಂದೆ ಬಂದಳೀ
ತಗೆವೊಡೆ ಚಿತ್ತದುತ್ಕಲಿಕೆಯಿಂ ನಭಕೀ ನೆಗೆತಂದಳಾಗಳುಂ
ಮೊಗಮನೆ ನೋಡಲೆಂದುರದೊಳೀ ನೆಲಸಿರ್ದಪಳೆಂದೆನುತ್ತುಮಾ
ಮೃಗಶಿಶುನೇತ್ರೆಯುಂ ಬಿಡದೆ ಭಾವಿಸಿದಂ ನೃಪರೂಪಚಂದ್ರಮಂ ೭೩

ಅಂತು ಪೋಗೆಪೋಗೆ ಮಹಾಶ್ವೇತಾಶ್ರಮದಚ್ಛೋದಸರೋವರದ ತೀರದೊಳಿಂದ್ರಾಯುಧದ ಪಜ್ಜೆವಿಡಿದು ಬಂದು ಬಿಟ್ಟಿರ್ದ ನಿಜಸ್ಕಂಧಾವಾರಮಂ ಕಂಡಾ ಗಂಧರ್ವಕುಮಾರರಂ ಮಗುೞ್ಚಿ ಕಟಕಜನಮಾನಂದಮುಮತಿಕೌತುಕಮುಂ ಕಯ್ಗಣ್ಮೆ ತನತನಗೆ ಪೊಡಮಡುತ್ತಿರಲರಮನೆಯುಂ ಪೊಕ್ಕು ವೈಶಂಪಾಯನನುಂ ಪತ್ರಲೇಖೆಯುಂ ಬೆರಸು ಸಕಲರಾಜಲೋಕಮುಮಂ ಮನ್ನಿಸಿ ತನ್ನ ಪೋದ ಬಂದ ವೃತ್ತಾಂತಮೆಲ್ಲಮುಮಂ ಪೇೞುತ್ತುಮಾ ಪಗಲಂ ಕಳೆದು

ತರಳಾಕ್ಷಿಯನಾ ಕಾದಂ
ಬರಿಯಂ ರಣರಣಕ ವಿಕಲಹೃದಯದಿನೋರಂ
ತಿರೆ ಚಿಂತಿಸುತ್ತು ಮಿರ್ದಾ
ಯಿರುಳನಪೆಂತಾನುಮವನಿಪಾಲಂ ಕಳೆದಂ ೭೫

ಅಂತು ಕಳೆದಾ ಮಱುದಿವಸಮಾ ಕನ್ನೆಯನೆ ನೆನೆಯುತ್ತುಮಾಸ್ಥಾನ ಮಂಟಪದೊಳಿರ್ಪನ್ನೆಗಂ ಪಡಿಯಱಂ ಬೆರಸು ಕೇಯೂರಕಂ ಭೋಂಕನೆ ಬಂದು

ವಿನಯಂಕಯ್ಗಣ್ಮೆ ದೂರಾಂತರದೊಳೆಱಗೆ ಕಂಡಿತ್ತು ಬಾ ಯೆತ್ತಬೇಯೆಂ ಬಿನಮಯ್ತಂದಂಘ್ರಿಪದ್ಮಕ್ಕೆಱಗೆ ತೆಗೆದು ತಪ್ಪೆಕ್ಕೈಸಿದಂ ಪ್ರೀತಿಯಿಂ ಮುನ್ನ ನಿಜಾಪಾಂಗಾವಲೋಕಂ ಬಟಿಕೆ ಹೃದಯಮಲ್ಲಿಂ ಬಟಿಕ್ಕಂತೆ ರೋಮಾಂಚನಿಕಾಯೋದ್ಭೇದಮಲ್ಲಿಂ ಬಟಿಕೆ ಭುಜಯುಗಂ ಸುತ್ತೆ ರಾಜೇಂದ್ರಚಂದ್ರಂ ಅನಂತರಂ [೭೬

ಒಸರ್ದಪುದು ನುಡಿಯೊಳೊಲವಿನ
ರಸವೆನೆ ನಸುವೆಳ್ಪು ಮಂದಮಂದಸ್ಮಿತದಿಂ
ಪಸರಿಸುತಿರೆ ಯುವರಾಜಂ
ಬೆಸಗೊಂಡಂ ಪ್ರೀತಿಯಿಂದೆ ಕೇಯೂರಕನಂ ೭೭

ಅರಸಿಯರ್ಗೆ ಮಹಾಶ್ವೇತೆಗೆ
ಪರಿಜನನಿವಹಕ್ಕೆ ಕುಶಲಮೇ ಪೇಟೆನಲಾ
ದರದಿಂದೆ ದೇವ ನೀಮಿಂ
ತಿರೆ ಬೆಸಗೊಂಡಂತೆ ಕುಶಲಮಂತವರ್ಗೆಲ್ಲಂ ೭೮

ಎಂದಾಗಳಿರ್ಪುದಪೊರೆದ ದುಗುಲದ ಬಾಸಣಿಗೆಯುಂ ಕಳೆದು ತಾವರೆಯ ನೂಲಿಂ ಸುತ್ತಿದ ಸಿರಿಕಂಡದುರುಳಿಯುಂ ಪತ್ತಿಸಿದ ಮೃಣಾಳನಾಳವಲಯದಿಂ ಮುದ್ರಿಸಿದ ನಳಿನೀಪತ್ರಪುಟಮುಂ ತೆಗೆದು ಕಾದಂಬರೀದೇವಿಯಟ್ಟಿದ ಮದನ ವೇದನೆಯವಿನ್ನಾಣಂಗಳಪ್ಪ ಪಸುರೆಸೆವ ಪಾಲಡಕೆಯ ಗೊಂಚಲುಮಂ ಖಚರ ಕಾಮಿನಿಯರ ಕದಂಪಿನ ಬೆಳ್ಪನಪ್ಪುಕಯ್ದ ಕಪ್ಪುರವಳ್ಳಿಯ ಬಿಳಿಯೆಲೆಯ ವೀಳೆಯಮುಮಂ ಎಳವೆಱೆಯ ಮುಱಿಗಳನೇಳಿಪ ಕಪ್ಪುರದ ಪಳುಕುಗಳುಮಂ

ಕಸ್ತೂರಿಯ ಕಂಪಿನಿಂ ಸೊಂಪಂ ತಳೆದ ಮಲಯಜವಿಲೇಪನಮುಮನೆರಸಂಗೆ ತೋಱಿ ಕಾದಂಬರಿಯ ಚೂಡಾಮಣಿಮರೀಚಿ ರಂಜಿತಾಂಜಲಿಸಮಭ್ಯರ್ಚನಮುಮಂ ಮಹಾಶ್ವೇತೆಯ ಕಂಠಗ್ರಹಕುಶಲವಚನ ಸಂಬೋಧನಮುಮಂ ಮದಲೇಖೆಯ ನಮಸ್ಕಾರಮುಮಂ ತಮಾಲಿಕೆಯ ಪಾದಪ್ರಣಾಮಮುಮಂ ಬಿನ್ನವಿಸಿ ಮಹಾಶ್ವೇತೆಯಿಂತೆಂದಟ್ಟಿದಳದೆಂತೆನೆ

ವಿದಿತೆಯೆನಾಂ ತನಗೆಲ್ಲಂ
ದದೊಳಂ ಪರಿಹೃತಸಮಸ್ತಸಂಗೆಯೆನೆನ್ನೀ
ಹೃದಯಂ ನೋೞಡಲ್ ಬಯಸಿದ
ಪುದಕಶರಣಪಕ್ಷಪಾತಿಯೆನಿಸಿದ ತನ್ನಂ ೭೯

ಮತ್ತಂ ತನ್ನಗಲ್ಕೆಯಿಂ ಗಂಧರ್ವರಾಜನಂದನೆಗೆ ಶೀತೋಷ್ಣಭವನಮೆದು ಮದುವಗೆಟಿಪಿದ ಮನೆಯಂತೆ ನಿರ್ವೃತ್ತಮಹೋತ್ಸವಮಾಗಿರ್ಪುದಂ ತುಮಲ್ಲದೆಯುಂ

ತನು ಬಸಮಲ್ತು ಮತ್ತಖಿಗೆ ಮನ್ಮಥನನ್ನನೆನಿಪ್ಪ ತನ್ನುಮಂ
ನೆನೆದಪಳೊರ್ಮೆ ಬಂದೆನೆಗೆ ಮಾಟ್ಪುದು ಧರ್ಮಯನೆಮ್ಮ ನಣ್ಪಿನಿಂ
ಜನಿಯಿಸಿದೀ ಕದರ್ಥನೆಗೆ ಸೈರಿಪುದಿಲ್ಲಗೆ ಬರ್ಪುದೆಂದು ಪೇ
ಟ್ವಿಸಿವಿರಿದೊಂದು ದರ್ಪಮನಗಾದುದು ತನ್ನಯ ನಿರ್ಮಳತ್ವದಿಂ ೮೦

ಎಂದು ನುಡಿಯಲ್ವೇಟ್ಟಿದಳಲ್ಲದೆಯುಂ

ಇದನಂದು ಶಯನೀಯದೊಳ್ ಮಱೆತು ದೇವರ್ ಬಂದಿರೆಂದೀಗಳಟ್ಟಿದಳೆಂದೊಯ್ಯನೆ ಚಾಮರಾಂಗನೆಯ ಕಯ್ಯೊಳ್ ಕೊಟ್ಟ ಸಾತ್ಮೋತ್ತರೀಯ ದುಕೂಲಾಂಚಲಸೂಕ್ಷ್ಮಸೂತ್ರವಿವರವ್ರಾತಂಗಳಿಂ ಕೂಡೆ ನುಣ್ಗದಿರ್ಗಳ್ ಸೂಸುವ ಶೇಷಮೆಂಬಮಳತಾರೋದಾರಮಂ ಹಾರಮಂ ೮೧

ಕುಡುವುದುಂ ವಿದಗ್ಧವಿದ್ಯಾಧರನಿಂತೆಂದಂ

ಪದಪಿಂ ತಮ್ಮಾಳ್ಗಳನಿಂ
ತು ದೇವಿಯರ್ ನೆನೆವುದೆಂಬುದಿದು ಸಕಲಗುಣಾ
ಸ್ಪದೆಯೆನಿಪ ಮಹಾಶ್ವೇತೆಯ
ಪದಕಮಲಾರಾಧನೆಯ ತಪಃಫಲಮಲ್ತೇ ೮೨

ಎನುತ್ತುಮೆಲ್ಲಮಂ ಪ್ರೀತಿವೆರಸು ತಾನೇ ಕಯ್ಕೊಂಡುಕಿಱಿದು ಬೇಗ ಮಿರ್ದಲ್ಲಿಂದಮೆೞ್ದು ಸನ್ಮಾನಪುರಸ್ಸರಮಖಿಳರಾಜಲೋಕಮುಮಂ ಪ್ರಧಾನ ನಿವಹಮುಮಂ ವಿಸರ್ಜಿಸಿ

ಆನೆಟ್ಟಂದ ಬೞಿಕ್ಕೆ ಚಿತ್ರರಥರಾಜಾವಾಸದೊಳ್ ವಾರ್ತೆಯೇ
ನಾ ನೀರೇಜದಳಾಕ್ಷಿಗೇಂ ಬಿನದಮೇಗೆಯ್ವಳ್ ಮಹಾಶ್ವೇತೆ ತಾ
ನೇನೆಂಬಳ್ ಮಹಲೇಜೆ ತತ್ಪರಿಜನಾಲಾಪಂಗಳೇನಲ್ಲಿ ನೀ
ನೇನಂ ಮಾಡುತುಮಿರ್ದೆಯೆಂದು ಬೆಸಗೊಂಡಂ ಚಂದ್ರಚೂಡಾಹ್ವಯಂ ೮೩

ಎಂದು ಬೆಸಗೊಳ್ವುದುಂ ಕೇಯೂರಕಂ ದೇವರ್ ಬಿಜಯಂಗೆಯ್ಯ ಲೊಡನೆ

ಹೃದಯಭವ ಪ್ರಯಾಣಪಟಹಧ್ವನಿಯೆಂಬಿನಮೆತ್ತಲುಂ ಪ್ರೊದ
ಳ್ದೊದವಿದ ರತ್ನನೂಪುರಕಲಾಪಕಲಧ್ವನಿಗಂಜೆವಿಂದು ತಂ
ಡದಿನುಲಿಯುತ್ತಿರಲ್ ಕೆಳದಿಯರ್ವೆರಸಾಗಳೆ ನಿಮ್ಮನೀಕ್ಷಿಸಲ್
ಪದೆದಿರವೇಱುವಳ್ ತರುಣಿ ತನ್ನಯ ರನ್ನದ ಕನ್ನೆ ಮಾಡಮಂ ೮೪

ಆಗಳ್ ಚಿತ್ರರಥನಂದನೆ ತುರಗಖುರಲುಳಿತಧೂಳೀಧೂಸರಮಪ್ಪ ಭವದ್ಗಮನಮಾರ್ಗಮಂ ನೋಡುತ್ತುಮಿರ್ದು ಕಿಱಿದು ಬೇಗದಿಂ ನೀಂ ತಿರೋಹಿತದರ್ಶನನಪ್ಪುದುಮಾ ದಿಗಂತಮೆಲ್ಲಮಂ ದುಗ್ಧೋದಧಿ ಧವಳ ದೀರ್ಘಂಗಳಪ್ಪಪಾಂಗಾವಲೋಕನದಿಂ ತೇಂಕಾಡಿಸುತ್ತುಂ ಪಿರಿದು ಬೇಗ ಮಲ್ಲಿಯೆ ನಿಂದು ಬಿಸುಸುಯ್ದಲ್ಲಿಂದಮೆೞ್ದು ಕ್ರೀಡಾಪರ್ವತಕ್ಕೆ ವಂದು

ಇದು ನಿಂದ ನವೇಂದೂಪಲ
ಮಿದಭವನಂ ಪೂಜೆಗೆಯ್ದ ಶೀಕರತಲಮಿಂ
ತಿದು ನೃಪನಾರೋಗಿಸಿದ ಪವ
ಳದ ನೆಲೆಯಿದು ಪವಡಿಸಿರ್ದ ಚಂದನತಲ್ಪಂ ೮೫

ಎಂದು ಪರಿಜನಂಗಳ್ ಪೇೞೆ ಮಗುೞೆ ಮಗುೞೆ ಕೇಳುತ್ತುಂ ನೀವಿರ್ದ ಡೆಗಳಂ ನೋಡುತ್ತುಂ ಪಗಲಂ ಕಳಿಪಿ ಮಹಾಶ್ವೇತಾನಿರೋಧದಿಂದಂತಾನು ಮಲ್ಲಿಯೆ ಕೃತಾಹಾರೆಯಾಗಿ ಕಿಱಿದುಬೇಗಮಿರ್ದು ಚಂದ್ರೋದಯಮಾಗ

ಲ್ದೊಡನೇನಾನುಮಂ ಚಿಂತಿಸುತ್ತುಮಲ್ಲಿಂದಮೆೞ್ದು ಸೆಜ್ಜೆವನೆಯೊಳ್ ಮೆಯ್ಯ ನ್ನೀಡಾಡಿ ದಾರುಣಮೆನಿಪ ದಾಹಜ್ವರದಿನೆಕ್ಕಮಟ್ಟಂತೇನಾನುಂ ವ್ಯಾಧಿ ಕಯ್ಕೊಂಡಂತಾರೊಳಂ ನುಡಿಯದೆ ಪೊರಳುತ್ತುಮಿರ್ದು ಬೆಳಗಾಗಲೊಡ ನೆನ್ನಂ ನಿಮ್ಮಲ್ಲಿಗಟ್ಟಿದಳೆಂಬುದು ಮದೆಲ್ಲಮಂ ಕೇಳ್ವಲ್ಲಿಗೆ ಪೋಗಲುದ್ಯುಕ್ತ ನಾಗಿ ಮನುಜೇಂದ್ರಚಂದ್ರನಿಂದ್ರಾಯುಧದ ಬೆನ್ಗೆ ವಂದು ಪತ್ರಲೇಖೆಯುಮಂ ಪೆಱಗನೇಱಿಸಿ ವೈಶಂಪಾಯನಾದಿ ಪರಿಜನಮನಿರಲ್ವೇೞ್ದು ತುರಗಾರೂಢ ನಪ್ಪ ಕೇಯೂರಕನೊಡವರೆ ಹೇಮಕೂಟಕ್ಕೆ ವಂದು ಕನ್ಯಾಂತಃಪುರದ್ವಾರ ಮನೆಯ್ದೆ ವಂದು ಪತಿಯಜನ ಕಯ್ಯೊಳ್ ಕುದುರೆಯುಮಂ ಕೊಟ್ಟು ಕಾದಂಬರೀ ಪ್ರಥಮದರ್ಶನ ಕೌತುಕೆಯಪ್ಪ ಪತ್ರಲೇಖೆವೆರಸು ಪುಗುತಂದಿದಿರ್ವರ್ಪ ವರ್ಷವರನಂ ಕಾದಂಬರೀದೇವಿಯೆಲ್ಲಿರ್ದಪಳೆಂಬುದುಮಾತಂ ಪೊಡಮಟ್ಟು ದೇವ ಮತ್ತಮಯೂರಮೆಂಬ ಕೇಳೀಶೈಲದ ತಾವರೆಗೊಳದ ಹಿಮಗೃಹದೊ ಳಿರ್ದಪಳೆಂದು ಬಿನ್ನವಿಸೆ ಕೇಯೂರಕೋಪದಿಶ್ಯಮಾನಮಾರ್ಗನಾಗಿ ಪ್ರಮದವನದೊಳಗೆ ಬರುತುಂ

ಬಿಸಿಲೆಲ್ಲ ಪಸಲೆಗವಿದುದು
ಪಸುರ್ವೆಳಗಿಂಬೆನಿಪ ಬಾಳೆ ಕದಳೀವನದೊಳ್
ಬಿಸರುಹದಳಂಗಳಿಂ ಪೊದೆ
ಯಿಸಿರ್ದ ಹಿಮಗೃಹವನವನಿಪಾಲಂ ಕಂಡಂ ೮೬

ಕುಳಿರ್ವ ಹಿಮಾಲಯದೊಳ್ ಕೋ
ಮಳೆ ನಿಜಪರಿವಾರಸಹಿತಮಿರ್ದಳ್ ಹಿಮವ
ತ್ತ್ರಳದೊಳ್ ತರಂಗಿಣೀಸಂ
ಕುಳದಿಂ ಬಳಸಿರ್ದ ದಿವಿಜನದಿಯೆಂಬಿನೆಗಂ ೮೭

ಅಂತು ಕಾದಂಬರೀದೇವಿಯುಂ ದೂರದೊಳೆ ಕಂಡನನ್ನೆಗಂ ಮೂರ್ತಿ ನಾರಾಯಣಂ ಬಂದನೆಂದು ಪೇೞಲೆತ್ತರಳತಾರಕೆಯಾಗಿ

ಬರವನೆದಾರ್ ಪೇೞ್ದಟ್ಟಿದ
ರರಸಂ ಬಂದಪನೆ ಕಂಡಿರೇ ನೀವೆನಿತಂ
ತರಳತೆವಡೆ ಮನಮೆನುತುಂ
ಪರಿಜನಮಂ ಕಣ್ಣ ಸನ್ನೆಯಿಂ ಬೆಸಗೊಂಡಳ್ ೮೮

ಅಂತು ಬೆಸಗೊಳುತ್ತುಂ ಗೆಂಟಱೊಳೆ ಬರುತ್ತಿರ್ದ ಯುವರಾಜನಂ ಕಂಡು

ನಡುಗುತ್ತುಂಪೊಲುಡೆಂಡೊರ್ವೊದಲೆತೆಗೆದುಹಾರಾಂಶುವಂಸಾರ್ಚುತುಂಸೋ
ಮ್ಮುಡಿಯಂ ಸಸ್ವೇದಹಸ್ತಾಬ್ಜದಿನೆಱವುತುಃವಾತ್ಮ ಪ್ರತಿಚ್ಛಾಯೆಯುಂ ಕ
ಯ್ಗುಡು ನೀನೆಂಬಂದದಿಂ ನಿರ್ಮಲತರ ಮಣಿಬದ್ಧವಸೀಭಾಗಮಂ ತ
ನ್ನೆಡಗಯ್ಯಿಂ ಮೆಲ್ಲನೊತ್ತುತ್ತೆ ಸೆವೆಲರ್ವಸೆಯಿಂ ಕಾಂತೆಯೆಂತಾನುಮೆೞ್ದಳ್ ೮೯

ಅಗಳ್ ಮನುಜಮಕರಧ್ವಜನೆೞ್ದುವಂದು ಮುನ್ನಿನಂದದೊಳೆ ಕಾದಂಬರಿಗೆ ಮಹಾಶ್ವೇತಾಪ್ರಣಾಮಪುರಸ್ಸರಮುಪದರ್ಶಿತ ವಿನಯನುಮಾಗಿ ಕಯ್ಗಳಂ ಮುಗಿವುದುಮಾಕೆಯುಂ ಕಯ್ಗಳಂ ಮುಗಿದು ಲಲಾಟಿಕಾಚಂದನ ಭರದಿನೆಱಗಿದಂತೆ ಕಿಂಚಿದವನತಮುಖಿಯಾಗಿ ಮುನ್ನಿರ್ದ ಕುಸುಮಶಯನದೊಳ್ ಕುಳ್ಳಿರೆ ವಿದಗ್ಧವಿದ್ಯಾಧರಂ ದೌವಾರಿಕೆಯರ್ ಕೆಲದೊಳಿಕ್ಕಿದ ಮಣಿಮಯಾಸನಮಂ ಕಾಲೊಳ್ ನೂಂಕಿ ನೆಲದೊಳ್ ಕುಳ್ಳಿರ್ಪುದುಂ ಕಾದಂಬರೀದೇವಿಗೆ ಕೇಯೂರಕಂ ಪೊಡವಟ್ಟು

ವಸುಧಾಧೀಶನ ಪರಮ
ಪ್ರಸಾದಭಾಗಿನಿಯನೆಡಪವಳಿತಿಯನೆವಧಾ
ರಿಸು ಪತ್ರಲೇಖೆಯೆಂಬುದು
ಪೆಸರೆಂದಾ ಸತಿಯನರಸಿಯಂ ಕಾಣಿಸಿದಂ ೯೦

ಅಂತಾ ಪತ್ರಲೇಖೆಯಂ ನೋಡಿ

ಎನಿತೊಂದು ಪಕ್ಷಪಾತಮೊ
ವನಿತೆಯರಂ ಮಾಡುವೆಡೆಯೊಳಬ್ಜಭವಂಗೆಂ
ದೆನಸುಂ ಕಾಂತೆಯ ರೂಪನೆ
ಮನದೊಳ್ ಗಂಧರ್ವಕನ್ನೆ ಭಾವಿಸುತಿರ್ದಳ್ ೯೧

ತನಗಾಗಳ್ ಪೊಡವಟ್ಟಳಂ ಪದಪಿನಿಂ ಪ್ರೇಮ್ಮಿತ್ತ ಬಾ ಯಿತ್ತ ಬಾ
ಯೆನುತುಂ ತನ್ನ ಕೆಲಕ್ಕೆ ಕಾಂತೆ ಕರೆದಾದಂ ಭ್ರಾಂತಿಯಿಂದಂ ಸಖೀ
ಜನಮೆಲ್ಲಂ ನಡೆ ನೋಡೆ ಪಿಂತಿರಿಸಿಕೊಂಡಾಗಳ್ ಮೊದಲ್ಗೊಂಡೆಲಂ
ಪಿನೊಳಾಕಾಂತೆಯಮೆಯ್ಯನೊಯ್ಯನೆಱವುತ್ತಿರ್ದಳ್ ಕರಾಂಭೋಜದಿಂ ೯೨

ಆಗಳ್ ಯುವರಾಜಂ ಕೃತಸಕಲಾಗಮನೋಚಿತೋಪಚಾರನಾಗಿ ತದವಸ್ಥೆಯಪ್ಪ ಚಿತ್ರರಥನಂದನೆಯುಂ ನೋಡಿ

ಪರಿತಾಪಮಾವ ತೆಱದಿಂ
ದೊರೆಕೊಂಡುದೊ ದೇವಿ ನಿನಗೆ ನೋವಿದು ನಿನ್ನಿಂ
ಪಿರಿದೆನ್ನದದಱಿನೆಂತುಂ
ಸರೋಜಮುಖಿ ನಿನ್ನ ಸುಖಮನಾಂ ಬಯಸಿದಪೆಂ ೯೩

ಎಂದು ನುಡಿಯೆ ಕಾದಂಬರೀದೇವಿ ಶಾಲೀನತೆಯನವಲಂಬಿಸಿ ನುಡಿಯಲಱಿಯದೆ

ಸುದತಿ ಪೆಱತೊಂದು ನೆವದಿಂ
ಕೆದಱಿದಳೊಂದಿನಿಸು ಮಂದಹಾಸದ್ಯುತಿಯಂ
ವದನಾಬ್ಜ ಪರಿಮಳಾಗತ
ಮದಾಳಿ ಪಟಲಾಂಧಕಾರಮಂ ಬೆದಱಿಪವೋಲ್ ೯೪

ಆಗಳಾ ಕಾದಂಬರೀದೇವಿಯ ಕೆಳದಿ ಮದಲೇಖೆಯೆಂಬಳ್ ಮೂರ್ತಿನಾರಾಯಣನ ಮೊಗಮಂ ನೋಡಿ

ಇದನೇನೆಂದಪುದಿಂತುಟೆಂದುಸಿರಲಾರ್ಗಂ ಬಾರದೀ ತಾಪದೊಂ
ದೊದವಿಂತೀ ಸುಕುಮಾರಭಾವಯುತೆಗಾದಂ ತಾಪಮಂ ಮಾಡದಾ
ವುದು ಪೇೞಿಂತುಟೆ ದಲ್ ಮೃಣಾಳಿನಿಗೆ ತೀವ್ರಾಗ್ನಿಸ್ವರೂಪಂಗಳಾ
ಗದೆ ಮಾಣ್ದಿರ್ದುವೆ ಚಂದ್ರಿಕಾಪ್ರಸರಮುಂ ನೀಹಾರವಿಸ್ತಾರಮುಂ ೯೫

ನೀರೇಜ ತಾಳವೃಂತ ಸ
ಮೀರಾದಿಗಳಿಂದೆ ತಾಪಮೊದವಿದಪುದು ನೋ
ಡೀ ರಮಣಿಗೆ ಧೀರತ್ವದ
ನಾರತಸಂಗತಿಯದೊಂದೆ ಜೀವಾಧಾರಂ ೯೬

ಎಂದು ಕಾದಂಬರೀಹೃದಯಗತಮಪ್ಪುದನೇ ಮದಲೇಖೆ ನುಡಿಯೆ ತನ್ನ ನುಡಿಗಳ್ಗೆ ಪ್ರತ್ಯುತ್ತರದಂತೀತೆಱದೊಳಿದಾ ನುಡಿ ಘಟಿಯಿಸುವುದೆಂದು ಸಂದೇಹ ದೋಲಾಧಿರೂಢಚಿತ್ತನಾಗಿ ಮಹಾಶ್ವೇತೆವೆರಸು ಪ್ರೀತ್ಯುಪಚಯಚತುರಂಗಳಪ್ಪ ವಚನಂಗಳಂ ನುಡಿಯುತ್ತುಂ ಪಿರಿದು ಬೇಗಮಿರ್ದು ಗಂಧರ್ವರಾಜನಂದನೆಯಿಂ ತನ್ನನೆಂತಾನುಂ ಬಿಡಿಸಿ ಬೀಳ್ಕೊಂಡು ನಿಜಸ್ಕಂಧಾವಾರಕ್ಕೆ ಪೋಗಲೆಂದು ತದೀಯಭವನಮಂ ಪೊಱಮಟ್ಟಿಂದ್ರಾಯುಧದ ಬೆನ್ನೆ ವಂದಾಗಳ್ ಕೇಯೂರಕಂ ದೇವ ಪತ್ರಲೇಖೆಯುಂ ಕೆಲವು ದಿನಕ್ಕೆ ಕಟಿಪಿದಪೆವಿರಿಸುವುದೆಂದು ಪ್ರಥಮ ದರ್ಶನಜನಿತ ಪ್ರೀತಿಯಪ್ಪ ಕಾದಂಬರೀದೇವಿಯ ಬೆಸದಿಂ ಮದಲೇಖೆ ಬಿನ್ನಪಂಗೆಯ್ದಟ್ಟಿದಳೆಂಬುದುಂ ಮನುಜಮಕರಧ್ವಜನಿಂತೆಂದಂ

ಆರೊ ಪಡೆದಪರಿದಂ ಕೇ
ಯೂರಕ ದೇವೀಪ್ರಸಾದಮಂ ಧನ್ಯೆಯಿವಳ್
ಸಾರಿರ್ದಪಳ್ ಗಡಿಂತೀ
ಕಾರುಣ್ಯಪದಕ್ಕೆ ಪತ್ರಲೇಖೆಯೆ ನೋಂತಳ್ ೯೭

ಎಂದು ಪತ್ರಲೇಖೆಯನಿರಲ್ವೇಳ್ದು ನಡೆಗೊಂಡು ನಿಜಸ್ಕಂಧಾವಾರಮಂ ಪುಗುವಾಗಳ್

ಚರನುಜ್ಜೈನಿಯಿನೊರ್ವನಾಗಳೆ ಬರಲ್ ಕಾಣುತ್ತುಮೌತ್ಸುಕ್ಯದಿಂ
ಪರಿವಾರಂಬೆರಸೆಮ್ಮ ತಂದೆಯುಮಶೇಷಾಂತಃಪುರಸ್ತ್ರೀಜನಂ
ಬೆರಸೆಮ್ಮಬ್ಬೆಯುಮಿರ್ದರೇ ಸುಖದಿನೆಂದಾವಿರ್ಭವತ್ಪ್ರೀತಿ ನಿ
ರ್ಭರವಿಸ್ತಾರಿತನೇತ್ರನೆಂದು ಬೆಸಗೊಂಡಂ ಚಂದ್ರಚೂಡಾಹ್ವಯಂ ೯೮

ಅಂತು ಬೆಸಗೊಳ್ವುದುಮಾ ಲೇಖವಾಹಕಂ ಪೊಡವಡುತ್ತುಮೆಯ್ದೆವಂದು ದೇವರ್ ಬೆಸಸಿದಂದದೊಳೆಲ್ಲರುಂ ಸುಖದಿನಿರ್ದರೆಂದು ಬಿನ್ನವಿಸಿ ನಿಮ್ಮ ತಂದೆಯಟ್ಟಿದ ರಾಜಾದೇಶಮಿದೆಂದು ಲೇಖನದ್ವಿತಯಮಂ ನೀಡೆ

ಯುವರಾಜನೃಪಂ ನಯವಿನ
ಯವಿನೂತಂ ತಲೆಯೊಳಾಂತು ಕಯ್ಕೊಂಡು ಮಹೋ
ತ್ಸವದಿಂದಂ ರಾಜಾದೇ
ಶವನಾಗಳ್ ಬಿರ್ಚಿ ನೋಡಿ ತಾಂ ಬಾಚಿಸಿದಂ ೯೯

ಅದೆಂತೆನೆ ಸ್ವಸ್ತಿ ಸಕಲರಾಜಶಿಖಂಡಶೇಖರಾರ್ಚಿತಚರಣಾರವಿಂ
ದನುಂ ಪರಮಮಾಹೇಶ್ವರನುಂ ಮಹಾರಾಜಾಧಿರಾಜನುಮೆನಿಸಿದ ಶ್ರೀ
ಮತ್ತಾರಾಪೀಡದೇವಂ ಸಕಲಗುಣಸಂಪದಾಯುತನನಪ್ಪ ಯುವರಾಜನಂ
ಪರಮಾಶೀರ್ವಚನಪುರಸ್ಸರಂ ಕಾರ್ಯಮಂ ಬೆಸಸಿರ್ಪಂ

ಪ್ರಜೆಯೆಲ್ಲಂ ಕ್ಷೇಮದಿಂದಿರ್ದುದು ಕುಶಲದಿನಿರ್ದಪ್ಪೆವಾವಾಮೊಡಂ ದಿ
ಗ್ವಿಜಯಂಗೆಯ್ಯಲ್ಕೆ ಪೋದಂ ಪಲವು ದಿವಸಮಾದತ್ತು ಕಾಣಲ್ಕೆವೇಟ್ಕುಂ
ವಿಜಯಾಲಂಕಾರನಂ ಪುತ್ರನನೆನುತೆ ಮಹೋತ್ಕಂಠೆಯಿಂ ತನ್ನ ಮಾತೃ
ವ್ರಜಮಿರ್ದತ್ತೋಲೆಯುಂ ಬಾಚಿಸುವುದು ತಡಮೇಕೆಂದು ತಾಂ ಕಾಣ್ಬು
ದೆಮ್ಮಂ ೧೦೦

ಎಂದು ಬಾಚಿಸಿ ಕುದುರೆಯನೇಱಿರ್ದಂದವರೊಳೆ ಪ್ರಯಾಣಭೇರಿ
ಯಂ ಪೊಯ್ಸಿ

ಮುಂದಿರ್ದ ಮೇಘನಾದನ
ನೆಂದಂ ನೀನಿರ್ದು ಪತ್ರಲೇಖಾಂಗನೆಯಂ
ಮುಂದಿಟ್ಟು ಬೞಿಕೆ ಬರ್ಪುದು
ತಂದಪನಿಲ್ಲಿವರಮಾಕೆಯಂ ಕೇಯೂರಂ ೧೦೧

ಕೇಯೂರಂಗೆ ನೀನಿಂತು ಪೇೞ್ವುದು

ನೆನೆಯದೆ ತಮ್ಮ ವತ್ಸಲತೆಯುಂ ಪರಿಭಾವಿಸದೊಳ್ಪನಿಕ್ಕಿಱಂ
ಮನದೊಳಗಿಂ ವಿಚಾರಿಸದೆ ನಿಸ್ಪೃಹತಾತ್ಮಕನೆಂಬಳೀಕಭ
ಕ್ತನುಮುಪಕಾರಶೀಲನುಮೆನಿಪ್ಪನೆಗಂ ನುಡಿಯೊಂದು ಮಾೞಪೆಂ
ದೆನಿಸಿದ ಮಾನವಂಗೆನಗೆ ದೇವಿ ಪಸಾದಮನೇಕೆ ಮಾಡಿದಳ್ ೧೦೨

ಅದಲ್ಲದೆಯುಂ

ಏನನುಂ ಚಮತ್ಕಾರದಿಂದಿಲ್ಲದ ಗುಣಗಣಮುಂ ರಾಗದಿಂ ಕೆಮ್ಮನೀ ಪಾಂ
ಡಸೋಳದ್ಯಾಕ್ಷೇಪಣಂಗೆಯ್ದು ನಗನವರತಂ ಬಣ್ಣಿಸುತ್ತಿರ್ದಳೀ ಮ
ರ್ತ್ಯನೊಳಾಪ್ಟೀಳ್ದಿಪ್ಪುದೆಂತೀ ತೆಜನುಮರಿಪೆನುತ್ತುಂ ಮಹಾಶ್ವೇತೆಯುಂ ತಾಂ
ಮನದೊಳ್ ಮೇಣ್ ಪಾತ್ರಿಸೊಳ್ ಮೇಣಖಿಗುಮರಿಸಿಯೆಂದಾಂ ಕರಂ
ನಾಣ್ಚಿದಪ್ಪೆಂ ೧೦೩

ಜನಕಾಜ್ಞೆ ಮೀಱಲಂಗಮೆ
ತನುವಿಂತವರೊಡವೆಯಾಗಿ ಸಲ್ಗೆಮ ಗಂಧ
ರ್ವನಿವಾಸಕ್ಕನುವಿಸುವೀ
ಮನವಪ್ಪೊಡೆ ತನಗೆ ಮಾಱುವೋದತ್ತೀಗಳ್ ೧೦೪

ಎಂದಿವು ಮೊದಲಾಗಿ ಪಲವುಮಂ ಗಂಧರ್ವರಾಜನಂದನೆಗೆ ಕೇಯೂರಕನಿಂ ಬಿನ್ನವಿಸಲ್ವೇಳ್ಕುಮೆಂದು ಮೇಘನಾದಂಗೆ ಪೇಳ್ದು ಕೆಲದೊಳಿರ್ದ ವೈಶಂಪಾಯನಂಗಂ ಕಟಕಮಂ ಸಂವರಿಸಿಕೊಂಡು ಬರ್ಪುದೆಂದುಮೊಪ್ಪಿಸಿ ನಿಜಪುರಾಭಿಮುಖನಾಗಿ ತಳರ್ದಂ.

## ೬. ಚಂದ್ರಾಪೀಡನ ಪುನರಾಗಮನ

ಅಂತು ತಳರ್ದು ನಡೆಗೊಂಡು ರಮಣೀಯ ಪ್ರದೇಶಂಗಳೊಳ್ ಬೀಡಂ ಬಿಡುತ್ತುಂ ಕೆಲವಾನುಂ ದಿವಸದಿಂ ನಿಜರಾಜಧಾನಿಯಪ್ಪುಜ್ಜೈನಿಯುಂ ಪೊಕ್ಕಾಕಸ್ಮಿಕಾಗಮನಸಂಜಾತಹರ್ಷರಾಗಿ ಪೌರಜನಂಗಳ್ ಪೊಡವಡುತಿರೆ ಘೋಂಕನೆ ರಾಜಭವನಮನೆಯ್ದುವಪ್ಪಾಗಳ್ ಪರಿಜನನಿವಹಂ ಪರಮೋತ್ಸವದಿಂ ಪರಿದು ತಾರಾಪೀಡಂಗೆ ಬಿನ್ನವಿಸಲಾತಂ ಸುತ್ತಿರ್ದ ಮೂರ್ಧಾಭಿಷಿಕ್ತರ್ವೆರಸಿದಿರೊಳ್ ಬಂದು ಕಾಲ ಮೇಲೆ ವೊಟ್ಗಿದ ವಿನಯಾಭಿರಾಮನಂ ತೞ್ಕೈಸಿ ಪರಸಿ ದಿಗ್ವಿಜಯ ಸಂಬಂಧಿಯಪ್ಪ ವಾರ್ತೆಯಂ ಕೇಳೆ ಪೇೞುತ್ತುಂ ಕಿಱಿದು ಬೇಗಮಿರ್ದು ವೈಶಂಪಾಯನಂ ಬೀಡನೊಡಗೊಂಡು ಬಂದಪನೆಂದಾರ್ಯ ಶುಕನಾಸಂಗೆ ಪೇೞ್ದು ನಿಜಜನನೀಗೃಹದೊಳ್ ಮಜ್ಜನಭೋಜನಾದಿಗಳಂ ಮಾಡಿ ಬಯ್ಗಂಬೊೞ್ತಪ್ಪುದುಂ ನಿಜಭವನಕ್ಕೆ ಬಂದು

ಅರಮನೆಯುಮವಂತಿಯುಮು
ರ್ವರೆಯುಂ ರಾಜ್ಯಮುಮಿವೆಲ್ಲಮೇವುದೊ ಕಾದಂ
ಬರಿಯಿಲ್ಲದೆಂದು ವಿರಹಾ
ತುರಹೃದಯಂ ನೃಪತನೂಭವಂ ಚಿಂತಿಸಿದಂ ೧

ಅರಸನಿರುಳಾಗೆ ಪಗಲಿನ
ಬರವಂ ಪಗಲಾಗಲಿರುಳ ಬರವಂ ಪಾರು
ತ್ತಿರುಳುಂ ಪಗಲುಂ ಗಂಧ
ರ್ವರಾಜನಂದನೆಯ ವಿರಹದಿಂ ಚಿಂತಿಸಿದಂ ೨

ಮತ್ತಂ ಚಿತ್ರರಥನಂದನೆಯ ವಾರ್ತೆಯುಂ ಕೇಳಲುತ್ಕಂಠಿತನಾಗಿ ಪತ್ರಲೇಖೆ ಬರ್ಪ ಸಯ್ಪುನೇ ಬಯಸುತ್ತುಮಿರಲಾಕೆಯುಂ ಕೆಲವಾನುಂ ದಿವಸಕ್ಕೊಡಗೊಂಡು ಬಂದು ಮೇಘನಾದಂ ಪ್ರಣಾಮಪುರಸ್ಸರಂ ಕಾಣಿಸೆ ನೃಪರೂಪಚಂದ್ರನಿದಿರೇೞ್ಪುದುಂ ಪತ್ರಲೇಖೆ ತದಂಘ್ರಿಕಮಲಕ್ಕೆಱಗಿದಾಗಳಾಕೆಯಂ ಕುಳ್ಳಿರವೇೞ್ದು

ನಿರುಪಮ ಚಾರಿತ್ರಾಲಂ
ಕರಣೆ ಮಹಾಶ್ವೇತೆಗಂ ಸಪರಿಜನ ಕಾದಂ
ಬರಿಗಂ ಕುಶಲಮೆ ಪೇಳೆಂ
ದರಸಂ ತಾಂ ಪತ್ರಲೇಖೆಯುಂ ಬೆಸಗೊಂಡಂ ೩

ಅಂತು ಬೆಸಗೊಳ್ವುದುಮಾಕೆ ದೇವರ್ ಬೆಸಸಿದಂದದೊಳೆಲ್ಲರುಂ ಕುಶಲದಿನಿರ್ದಪರಲ್ಲದೆಯುಂ ಕಾದಂಬರೀದೇವಿ ಪರಿಜನಂಬೆರಸು ನಿಮಗೆ ತನ್ನ ಪ್ರೇಮಪಟಿಕೆಯುಂ ಬಿನ್ನವಿಸಲ್ವೇಳ್ಪಟ್ಟಿದಳೆಂಬುದುಂ ತತ್ಸಂಬಂಧಿಯಪ್ಪ ವಾರ್ತೆಯುಂ ಕೇಳಲತಿಕುತೂಹಲನಾಗಿ ಮೇಘನಾದಂಗೆ ಮೆಚ್ಚುಗೊಟ್ಟು ತಂಬೆರಸು ರಾಜಲೋಕಮುಂ ವಿಸರ್ಜಿಸಿ ದೂರೋತ್ಸಾರಿತಪರಿಜನಂ ಪತ್ರಲೇಖಾದ್ವಿತೀಯನಾಗಿ ವಲ್ಲಭಬಾಲೋದ್ಯಾನಮಂ ಪೊಕ್ಕು ಕುಳ್ಳಿರ್ದು ಪತ್ರಲೇಖೆಯ ಮೊಗಮಂ ನೋಡಿ ಎನಿತುದಿನಮಿರ್ದೆ ಗಂಧರ್ವನಂದನೆಯೊಂದು ಪದಪದಂತುಟೆಂದು ನೃಪರೂಪಚಂದ್ರಂ ಬೆಸಗೊಳ್ವುದುಂ ದೇವ ನೀವಿತ್ತ ಬಿಜಯಂಗೆಯ್ಯಲೊಡನೆಯಾಂ ಕೇಯೂರಕನೊಡನೆ ಪೋಗಿ ಮುನ್ನಿನಂದದೊಳೆ ಪಟ್ಟಿರ್ದ ಕಾದಂಬರೀ ದೇವಿಯ ಕೆಲದೊಳ್ ಕುಳ್ಳಿರ್ದು ಪೊಸತೆನಿಸಿದ ಪಸಾದಮನನುಭವಿಸುತ್ತುಮಿರ್ದೆನಲ್ಲದೆಯುಂ

ಪದಪಿನ ಮಾತುಗಳ್ ಪಲವುಮಂ ಬಿಡದಾಡಿದೊಡಲ್ಲಿ ಬರ್ಪುದಾ
ವುದು ಗಡ ದೇವ ಮುನ್ನಯನದೊಳ್ ನಯನಂ ಕರದೊಳ್ ಕರಾಬ್ಜಮಂ
ಗದೊಳೆಸೆವಂಗಮಿಟ್ಟಿ ಪೆಸರಕ್ಕರದೊಳ್ ನಿಜವಾಣಿ ಕೂರ್ಮೆಯೊಳ್
ಹೃದಯಮದೊರ್ಮೆಯುಂ ನೆಲಸಲಂಗನೆಗಿಂತಿರೆ ಪೋದುದಾ ದಿನಂ ೪

ಅಂತು ಬಯ್ಗುಂಬೊತ್ತಪ್ಪುದುಮೆನ್ನ ಕಯ್ಯಂ ಪಿಡಿದು ಹಿಮಗೃಹದಿಂ ಪೊರಮಟ್ಟು ಸುಯ್ಯುತ್ತುಂ ಬಂದು ನಿಷಿದ್ಧಾಶೇಷಪರಿಜನೆಯಾಗಿ ವಲ್ಲಭಬಾಲೋದ್ಯಾನಮಂ ಪೊಕ್ಕು ಮರಕತಸೋಪಾನಶೋಭಿತಮುಂ ಸುಧಾಧವಳಿತಮುಮಪ್ಪ ರಮಣೀಯ ಪ್ರಮದವನಮಧ್ಯವೇದಿಕೆಯ ಮಣಿಸ್ತಂಭಮಂ ನೆಮ್ಮಿ

ಅವಧರಿಸಿ ಮನದೊಳೇನಾ
ನುವನಾಗಳ್ ಕನ್ನೆ ನುಡಿಯಲೊಡರಿಸಿ ನಿಷ್ಕಂ
ಪವೆನಿಪ್ಪ ತಾರೆಗಳ್ವೆರ
ಸೆವೆಯಿಕ್ಕದೆ ನೋಡುತಿರ್ದಳೆನ್ನಯ ಮೊಗಮಂ ೫

ಎನಗೀಗಳ್ ನಿಕ್ಕುವಂ ವಲ್ಲಭತೆಯೆಡೆಯೊಳೆಮ್ಮಬ್ಬೆಯಿಂದಯ್ಯನಿಂದೆ
ಕ್ಕನಿಸೀ ಪ್ರಾಣಂಗಳಿಂದತ್ಯಧಿಕಮೆನಿಸಿ ಮಚ್ಚಿತ್ತದೊಳ್ ನಿಂದೆ ನೀಂ ನಿ
ನ್ನನೆವೆಂದಾಂ ಕಂಡೆನಂದಿಂಬಟಿಕೆ ಸಖಿಯರಂ ಪತ್ತುವಿಟ್ಟೀ ಮನಂ ನಿ
ನ್ನನೆ ನೀಡುಂ ನೋಡೆ ನಂಬಿರ್ದಪುದೞಿಯೆನಿದಿನ್ನೆಂತುವಾಂ ಪತ್ರಲೇಖೇ ೬

ಎನಗಾದದೊಂದು ಪರಿಭವ
ಮನಾರ್ಗೆ ದೂಱಿದಪೆನಾರ್ಗೆ ಪೇೞ್ದಪೆನಿದನಾಂ
ನಿನಗುಸಿರ್ದನಂತರಂ ಸುಖ
ದಿನೆನ್ನ ತನುವಿಂದೆ ಪತ್ತುವಿಡಿಸುವೆನಸುವಂ ೭

ಪಿರಿಯರ್ಗಿದು ಗುಣಮೋ ಪೇೞ್
ಪರಿಚಯಕಿದು ಫಲಮೊ ತರುಣಿ ಬಿಸತಂತುವಿನೊಳ್
ದೊರೆಯೆನಿಪೆಳಮನದೆನ್ನಂ
ಪರಿಭವಿಪುದೆ ಕಂಡು ಕನ್ನೆಯಂ ಯುವರಾಜಂ ೮

ಇನ್ನೆನ್ನನಿಂತು ನೃಪನೆಸ
ಕ್ಕಂ ನಿತ್ತರಿಸಲ್ಕೆ ಕುಡದು ಮಱುವುಟ್ಟಿನೊಳಂ
ನಿನ್ನೊಡನೆ ಕೂಟವೆನಗ
ಕ್ಕೆನ್ನಯ ತಪ್ಪಿಂಗೆ ಸತ್ತು ಶುದ್ಧೆಯೆನಪ್ಪೆಂ

ಎಂದು ಚಿತ್ರರಥನಂದನೆ ನುಡಿದು ಮಾಣ್ಬುದುಮಾನತಿಭೀತೆಯನಾಗಿ ದೇವಿ ಯುವರಾಜಂ ನಿನ್ನ ಕುಸುಮಸುಕುಮಾರಮಪ್ಪ ಮನವನೇತಱಿಂ ನೋಯಿಸಿದನದಾವುದಪರಾಧಂಮಾಡಿದಂ ಯುವರಾಜನ ದೋಷಮಿದಲ್ತು ಕಾಮನ ದೋಷಂ

ಇಲ್ಲಗೆ ಮನುಜಮನೋಜನೆ
ಬಲ್ಲನುಪಾಯಮನದರ್ಕೆ ನೀನೀಗಳ್ ತ
ಳ್ವಿಲ್ಲದೆ ಬೆಸಸೆನ್ನಂ ಭೂ
ವಲ್ಲಭನುಮನಿಂದೆ ತಂದಪೆಂ ಚಂದ್ರಮುಖೀ ೧೦

ಎಂದು ಬಿನ್ನಪಿಸೆ

ಪದೆದೆನ್ನಂ ಕಾಮನಿತ್ತಂ ತನಗೆನಲದು ಪೋರ್ದಲ್ ನೆವಂ ಕೂರ್ಪೆನಾನೆಂ
ಬುದು ವೇಶ್ಯಾಲಾಪವಾಂ ತನ್ನಯ ವಿರಹದೆ ಸತ್ತಪ್ಪೆನೆಂಬಂದು ದೃಷ್ಟ
ಕ್ಕದಸತ್ಯಂ ಬರ್ಪೆನಾನೆಂಬುದು ಚಪಲತೆ ತಾಂ ಬರ್ಪುದೆಂದಂದು ಸೌಧಾ
ಗ್ರದ ಗರ್ವಂ ಮೇಲೆ ಬಿಪ್ಪಾನೆಳಸಿದಪೆನೆನಲ್ ಬಂಧಕೀ ಧಾರ್ಷ್ಟ್ಯಮಲ್ತೇ ೧೧

ಅದಱಿನೊಂದುಮಂ ಪೇೞ್ದಟ್ಟಲಱಿಯೆನೆಂದು ಗಂಧರ್ವರಾಜ ನಂದನೆ ಕಿಱಿದುಬೇಗಮಿರ್ಪನ್ನೆಗಂ ದಿವಸಾವಸಾನಸಮಯಮಾಗೆ ಸುರಭಿ ಗಂಧೋದ್ಗಾರಿಗಳಪ್ಪ ದೀಪಿಗೆಗಳಂ ಪಿಡಿದು ದೀಪಧಾರಿಣಿಯರ್ ವಂದು ನಿಜನಿಯೋಗಾಶೂನ್ಯಾರ್ಥವಾಗಿ ಗಂಟಱೊಳೆ ಬಳಸಲವರಂ ಸ್ವೈರಿಸದೆ ತರಳಿಕೆಯ ಕಯ್ಯ ತಂಬುಲಮಂ ಕಳೆದುಕೊಂಡೆನಗೆ ಪಿರಿದನುಗ್ರಹದಿನಿತ್ತು ಕೇಯೂರಕ ನೀಂ ಪತ್ರಲೇಖೆಯನೊಡಗೊಂಡು ಪೋಗಿ ಕಟಕಮಂ ಪುಗಿಸೆಂದು ತನ್ನ ತೊಟ್ಟ ತುಡುಗೆಗಳೆಲ್ಲಮನೆನ್ನಗಂಗಚಿತ್ತಮನಿತ್ತೆಂತಾನುಂ ಬೀಳ್ಕೊಳಿಸಿ ಕಟಿಪೆ ಕೇಯೂರಕಂಬೆರಸು ಮೇಘನಾದನಲ್ಲಿಗೆ ವಂದಾ ಗಳಾತಂ ದೇವರ್ ಬೆಸಸಿದಂದದೊಳೆ ಕೇಯೂರಕಂಗೆ ಪೇೞ್ವುದುಮ ದೆಲ್ಲಮಂ ಕೇಳ್ದಾತಂ ಹೇಮಕೂಟಕ್ಕೆ ಪೋದನಾನುಂ ಮೇಘನಾದ ನೊಡನಿತ್ತಲ್ ಬಂದೆನದಲ್ಲದೆಯುಂ

ನಿನ್ನಯ ವಿರಹೋದ್ರೇಕದಿ
ನಿನ್ನುಂ ತಳರ್ವಸೆಯುಮೇಲೆ ಪೊರಳುತ್ತಿದಾರ್ಪ
ಕನ್ನೆಯ ರೂಪೆನ್ನ ದಿರೊಳ್
ಸನ್ನಿದವಾದಂತೆ ತೋಱುತಿರ್ದಪುದೀಗಳ್ ೧೨

ಎಂದು ಪತ್ರಲೇಖೆ ಬಿನ್ನಪಂಗೆಯ್ಯೆ

ಮನದಟಲಿಂ ಪೊಣ್ಮುವ ಕ
ಣ್ಣನಿದುಱುಗಲನೆಮೆಯೊಳಾಂತು ನಿಡುಸುಯ್ವಧರಂ
ತನಿಗೆತ್ತಲ್ ಮನಮಿಕ್ಕೊ
ಯ್ಯನೆ ನುಡಿದಂ ಪತ್ರಲೇಖೆಗವನಿಪತನಯಂ ೧೩

ಅದೆಂತೆನೆ

ಪ್ರಮದದೊಳೆನ್ನ ಕಂಧರದೊಳಂದಿರುಳಿಕ್ಕಿದ ತೋರಹಾರಮುಂ
ಹಿಮಗೃಹಕಪ್ರವೃತ್ತಕಮುಮಂತಿರೆ ನಿನ್ನಯ ಪೇಟ್ದ ಮಾತುಮಾ
ರಮಣಿಯದೊಂದು ಭಾವಗತಮಂ ನೆಱೆ ಸೂಚಿಸೆ ಮತ್ತೆ ಸಂದೆಗಂ
ಸಮನಿಸಿತೆಂದೊಡಿನ್ನೆನಗದೊಂದು ವಿಮೋಹಿಪ ಶಾಪಮಾಗದೇ ೧೪

ಎಂದು ಪತ್ರಲೇಖೆಯೊಡನೆ ನುಡಿಯುತ್ತುಮಿರ್ದು

ಮೊದಲಿಂ ಗಂಭೀರಭಾವಂ ತನಗೆ ನಿಜಮೆನಲ್ ಸಂದ ರತ್ನಾಕರಂ ಕಾ
ಮುಡುಯಿಂದಂ ಕ್ಷೋಭಿಸಿರ್ದುಂ ಸಹಜವೆನಿಪ ತನ್ನೊಂದು ಮರ್ಯಾದೆಯುಂ ದಾಂ
ಟದವೋಲಿಂತಪ್ಪವಸ್ಥಾಂತರವಡೆದೊಡಂ ತನ್ನ ಮರ್ಯಾದೆಯುಂ ದಾಂ
ಟದನಂ ಗಾಂಭೀರ್ಯರತ್ನಾಕರನೃಪನನದೇಂ ಬಣ್ಣಿಪಂ ಬಣ್ಣಿಪಾತಂ ೧೫

ಅಂತು ಧೀರೋದಾತ್ತವೃತ್ತಿಯನವಲಂಬಿಸುತುಂ ಕತಿಪಯದಿನಂಗಳ್ ದಿನಸಹಸ್ರಾಯಮಾಣಮಾಗಿ ಪೋಗುತ್ತುಮಿರಲೊರ್ಮೆ ನಗರಿಯಂ ಪೊಱಮಟ್ಟು ಪೋಗಿ

ತೆರೆದೊಂಗಲ್ ಪೊರೆದಿರ್ದ ತಣ್ಣಲರ್ಗಳಿಂ ಮೆಲ್ನಣ್ಬರಂಗೆಯ್ವ ಹಂ
ಸರಥಾಂಗಂಗಳನಿರ್ಪವೆತ್ತೆಳವೆಟಿಲಾಧಣಂಗಳಿಂ ಕಣ್ಗೆವಂ
ದಿರೆ ಶಿಪ್ರಾತಟಸೇತಟಸ್ಥಲಿಗಳೊಳ್ ಲೀಲಾವಿನೋದೈಕತ
ತ್ಪರನಾಗಳ್ ನಡಪಾಡುತಿರ್ದನವನೀಶಂ ಪತ್ರಲೇಖಾನ್ವಿತಂ ೧೬

ಅಂತಿರ್ದು ತರಂಗಿಣೀ ತೀರಾಂತರದೊಳ್ ಕಾರ್ತಿಕೇಯನ ದೇಗುಲಕಾಗಿ ದೂರಾಗಮನಖೇದನಿವೇದಕಂಗಳಪ್ಪ ಕೆಲವು ಕುದುರೆಗಳ್ ಬೆರಸಿ ಬರ್ಪುದಂ ಕಂಡೀ ವಾರುವಂಗಳಾರವೆಂದಿರೆ ಯುವರಾಜದೇವನಂ ಕಂಡು ದೂರದಿಂ ಕುದುರೆಯಿಂದಮಿಟಿವೆಯ್ದು ವಂದಡಿಗೆಱಗಿದ ಕೇಯೂರಕನನತಿಪ್ರೀತಿಯಿಂ ನೋಡಿ ನಿನ್ನ ಕಾಣ್ಕೆಯೊಳೆ ಸಪರಿವಾರೆಯಪ್ಪ ಕಾದಂಬರೀದೇವಿಯ ಕುಶಲಮಱಿಯಲಾದುದು

ಪರಿಜನಸಮೇತ ಕಾದಂ
ಬರಿಯ ಮಹಾಶ್ವೇತೆಯೊಂದು ಸಂದೇಶಂ ಪೇೞ್
ನಿರವಿಸಿದುದುಂಟೆ ಬರ್ಪವ
ಸರದೊಳ್ ನಿನಗೆಂದು ನೃಪಸುತಂ ಬೆಸಗೊಂಡಂ ೧೭

ಅಂತು ಬೆಸಗೊಳ್ವುದುಂ ಸಂದೇಶಮಪ್ಪೊಡೆ ಕಾದಂಬರಿಯ ದೆಸೆಯೊಳ್ ಮೇಣ್ ಮಹಾಶ್ವೇತೆಯ ದೆಸೆಯೊಳೊಂದುಮಿಲ್ಲಂ ಪತ್ರಲೇಖೆಯಂ ಕಟಿಪಿ ಮಗುಱ್ದಿಂ ದೇವರುಜ್ಜೈನಿಗೆ ಬಿಜಯಂಗೆಯ್ದ ವಾರ್ತೆಯಂ ಬಿನ್ನವಿಸೆ ಮೊಗಮಂ ನೋಡಿ ಬಿಸುಸುಯ್ದಟಲಿಂದಮಿಂತ್ತುಟ್ಟಿವಲಮೆಂದು ಮಹಾಶ್ವೇತೆ ತನ್ನಾಶ್ರಮಕ್ಕೆ ಪೋಗೆ ಕಾದಂಬರಿ ತೊಟ್ಟನದೃಷ್ಟವಜ್ರಾಭಿಘಾತೆಯಾದಂತೆ ನಿಮೀಲಿತ ನಯನೆಯಾಗಿ

ಅಂತಾ ಪದದೊಳ್ ಮೂರ್ಛಿತೆ
ಯಂತೆವೊಲುನ್ಮತ್ತೆಯಂತೆವೋಲಟ್ಟಿದಳಾ
ದಂತೆವೊಲಂತಃಪೀಡಾ
ಕ್ರಾಂತಿಯಿನೊಂದಿಸಿತು ಪೊೞ್ತು ಮರವಟ್ಟಿರ್ದಳ್ ೧೮

ಅಂತಿರ್ದು ಮಹಾಶ್ವೇತೆ ಪೋದುದನಱಿಯದೆ ಕಿಱಿದುಬೇಗಕ್ಕಾಕೆ ಕಣ್ಗಳಂ ತೆಱೆದು ಲಜ್ಜಿತೆಯಾದಂತೆಯುಂ ವಿಸ್ಮೃತೆಯಾದಂತೆಯುಂ ವಿಸ್ಮಯಸ್ತಬ್ಧದೃಷ್ಟಿಯಾಗಿ ಮಹಾಶ್ವೇತೆಗೀ ವೃತ್ತಾಂತಮಂ ಪೇೞಿಮೆಂದಲ್ಲಿಂದೆೞ್ದು ತನ್ನಿದಿರೊಳ್ ನಿಂದಿರ್ದನ್ನಂ ನೋಡಿ

ಇಂತು ಭವದ್ವಿಧರ್ ಪರಿಜನಂಗಳಿರಲ್ಕೆನಗೀ ಯವಸ್ಥೆಯಿಂ
ಬಂತೆಯುಮೀ ನಿರರ್ಥಕರಿನಾವುದು ತೀರ್ದಪುದೆನ್ನ ಕಜ್ಜಮೆಂ
ಬಂತೆಯುಮಿನ್ನುಮೆನ್ನಿದಿರೊಳಿರ್ದಪೆ ನಿರ್ದಯ ಪೋಗು ಬೇಗಮೆಂ
ಬಂತೆಯುಮೆನ್ನನಶ್ರುಪಿಹಿತಾಕುಲದೃಷ್ಟಿಗಳಿಂದೆ ನೋಡಿದಳ್ ೧೯

ಅಂತು ನೋಡಲೊಡನೆನ್ನಂ ಪೋಗೆಂದಳೆಂದಱಿದು ದೇವಿಗೆ ಪೇೞದೆ ದೇವರ ಶ್ರೀಪಾದಂಗಳಂ ಕಾಣಲ್ಕೆ ಬಂದೆಂ ದೇವ ನೀನೊರ್ವನೆ ಶರಣಮೆಮಗೆ ಪರಿಜನ ಪ್ರಾಣತ್ರಾಣಾಕುಲಮತಿಯಪ್ಪೆನ್ನ ಬಿನ್ನಪಮಂ ದೇವರವಧಾರಿಸಿ ಪ್ರಸಾದಂಗೆಯ್ವುದು ಪತ್ರಲೇಖೆ ಪೇೞ್ದವಸ್ಥಾಂತರಂಗಳನಾಂ ಬಿನ್ನವಿಪೊಡೆ ಪುನರುಕ್ತಮೆಂದು ಬಿನ್ನವಿಸಿದ ಕೇಯೂರಕನ ಮಾತಂ ಕೇಳ್ದು ಸಾಲ್ಗುಮಿನ್ ಕೇಳಲಾಱೆನೆಂದು ಮನುಜೇಂದ್ರಚಂದ್ರನೆಂತಾನುಂ ಕೇಯೂರಕನನಿಂತೆಂದಂ ಪತ್ರಲೇಖೆಯ ಪೇೞ್ಕೆಯೊಳಂ ನಿನ್ನ ನುಡಿಯೊಳಮೆಲ್ಲಮಂ ನೆಱೆಯಱಿದೆಂ ದುಃಖೈಕದಾನವ್ಯಸನಿಯುಂ ದುರ್ಘಟಘಟನಾ

ಪಂಡಿತನುಂ ಯತ್ಕಿಂಚನಕಾರಿಯುಮಪ್ಪ ಹತವಿಧಿಯೋಗಮಾರ್ಗಂ ಬಗೆಯ
ಲಗೋಚರಮಪೆಂತೆನೆ –

ಮೊದಲೊಳ್ ತತ್ಕಿನ್ನರದ್ವಂದ್ವದ ಬಟಿಸಲಲೆತಾತ್ತನುಮಚ್ಛೋದಮಂ ಸಾ
ರ್ಪುದದೆತ್ತಂತಲ್ಲಿಗೊಂದಿಂಚರಮೆಸಗುವುದೆತ್ತಾ ಮಹಾಶ್ವೇತೆಯುಂ ಕಾ
ಣ್ಬುದದೆತ್ತಾ ಕಾಂತೆ ಕಾದಂಬರಿಯನೆನಗೆ ತಾಂ ತೋರ್ಪುದೆತ್ತಾನು
ವೆನ್ನೊಳ್
ಮದನವ್ಯಾಪಾರವೆತ್ತಾಂ ಜನಕನ ಬೆಸದಿಂದಿಂತಗಲ್ದಿರ್ಪುದೆತ್ತಂ ೨೦

ಮಗುಳ್ದಾನಿಲ್ಲಿಗೆ ಬರ್ಪುದುಂ ತನುವಿನೊಳ್ ಪ್ರಾಣಂಗಳಂ ದೇವಿ ತಾ
ಳ್ದುಗುಮೋಮೇಣ್ ಪ್ರುದ್ರಲೇಖೆ ವಾರ್ತೆಯಱಿದೊಂದುದ್ಯೋಗದೆತ್ತಾನುವಿ
ಲ್ಲಿಗೆ ತಾಂ ಬರ್ಕುಮೊ ಮಚ್ಚಿ ಮತ್ಪರಿಚಯಕ್ಕಾದಂ ಮಹಾಶ್ವೇತೆ ತೊ
ಟ್ಟಗೆ ತನ್ನಂ ತನುಪ್ಪಿಂದೆ ಪತ್ತುವಿಡಳಲ್ತೇ ಪಿಂದೆ ಕೇಯೂರಕಾ ೨೧

ಮನದನ್ನರೆನಿಪ ನಿಜಪರಿ
ಜನದ ಸಖೀಜನದ ದೆಸೆಯೊಳಾದ ಸಮಭ್ಯ
ರ್ಥನೆಯಿಂದೆ ದೇವಿ ತನ್ನಯ
ತನುವಂ ನಿಲೆ ಪಿಡಿವ ಬಾಸೆಯಂ ಮಾಡುಗುಮೋ ೨೨

ಎಂಬುದುಂ ಕೇಯೂರಕನಿಂತೆಂದಂ

ಪರಿಜನಮುಮಾಪ್ತರುಂ ಸಂ
ವರಿಸಲ್ ನಿತ್ತರಿಪರೆಂಬುದೆಂತಿಕರ್ಾ ಚಿ
ತ್ರರಥತನೂಜೆಯೆ ನಿನ್ನಯ
ಬರವಿನೊಳಾದಾಸೆಯಿಂದೆ ನಿತ್ತರಿಸಿದಪಳ್ ೨೩

ಅದಱಿಂ ದೇವರ್ ಬರವಿನೊಳಾದಂ ಬವಸೆಯನೆ ಮಾಳ್ಪುದೆನೆ
ಕಱಿದು ಬೇಗಮೇನಾನುಮಂ ತನ್ನೊಳೆ ಭಾವಿಸುತ್ತೆ

ತಂದೆಗೆ ತಾಯ್ಗೆ ಪೇಳ್ದು ಗಮನೋದ್ಯಮನಾಗಲೆವೇಳ್ಕುಮಲ್ಲದಿ
ರ್ದಂದವರ್ಗಕ್ಕುಮೇಗಮನುತಾಪಪರಂಪರೆ ಪೇಳ್ದು ಪೋಪೆನಂ
ಬಂದೆದು ನಾಡೆ ಲಜ್ಜೆ ಪೆಱತಿನ್ನದಱಿಂ ಶುಕನಾಸನಂದನಂ
ಬಂದಪನಾತನಿಂದಮೆಱಿವಂತಿರೆ ಪೇಟಿಸಿ ಮತ್ಪ್ರಪಂಚಮಂ ೨೪

ಮಹಾರಾಜಾಧಿರಾಜನುಮಪ್ಪೆನ್ನ ತಂದೆಯುಂ ಗಂಧರ್ವಲೋಕಾಧಿಪತಿಯಪ್ಪ ಚಿತ್ರರಥಮಹಾರಾಜನುಮೊಂದಾಗಿ ಮದುವೆಯಂ ಸಂದಿಸುವಂತು ಮಾಡೆ ಪೆಂದಾತನ ಬರವನೆ ಬಯಸುತ್ತುಮಿರೆ

ಬಂದುದು ಕಟಕಂ ದಶಪುರ
ಕೆಂದೆಲ್ಲರ್ ನುಡಿಯೆ ಕೇಳ್ದು ಭೋಂಕನೆ ಜೀವಂ
ಬಂದಂತುತ್ಸಾಹದಿನಾ
ನಂದ ಪರಂಪರೆಯನೆಯ್ದಿದಂ ಯುವರಾಜಂ ೨೫

ಅಂತೆಯ್ದಿ ಕೇಯೂರಕಂಗಿಂತೆಂದಂ ವೈಶಂಪಾಯನಂ ಬಂದನೆನ್ನೆಮ್ಮ ಕಾರ್ಯಸಿದ್ಧಿ ಕರತಳವರ್ತಿಯಾದುದು

ಈಗಳೆ ಪತ್ರಲೇಖೆವೆರಸಂಗನೆಯಲ್ಲಿಗೆ ಮುಂದೆ ಪೋಗು ನೀಂ
ಬೇಗಮಿವಳ್ ಪಸಾಯಿತೆ ಮನೋಹರಿಗೇಕೆಯದೊಂದು ಕಾಣ್ಕೆಯಿಂ
ದಾಗಿಯುಮಾ ತನೂದರಿಗೆ ಧೀರತೆಯುಂ ನಿಜಜೀವರಕ್ಷಣೋ
ದ್ಯೋಗಮುಮಸ್ಮದಾಗಮನನಿಶ್ಚಯಮುಂ ದೊರೆಕೊಳ್ಗು ಮಾವಗಂ ೨೬

ಎಂದು ರಾಜಪುತ್ರಂ ಪೇೞಗಿರ್ದ ಪತ್ರಲೇಖೆಯಂ ನೋಡಿ

ಪಿರಿದುಂ ಕೂರ್ಪೆಯೊ ಕಾದಂ
ಬರಿಗೇಂ ಪೋದಪ್ಪೆ ಮುಂದೆ ಪೇೞೆನಲಾಜ್ಞಾ
ಕ್ಷರಮನೆ ಬೆಸಗೊಳ್ವೆಂ ದೇ
ವರೆನ್ನನಿಂತೇಕೆ ಮಗುೞೆ ಬೆಸಗೊಂಡಪಿರಿನ್ ೨೭

ಎಂದು ಪತ್ರಲೇಖೆ ತನ್ನ ಗಮನಮಂ ನಿಶ್ಚೈಸುವುದುಮರಸನಾಕೆಯನಿಂತೆಂದಂ ನೀಂ ಪೋಗಿ ಕಾದಂಬರೀದೇವಿಗೆ ಬದ್ಧಾಂಜಲಿಯಾಗಿ ಪ್ರಣಾಮ ಪುರಸ್ಸರಮಪ್ಪೆನ್ನ ಬಿನ್ನಪಮಂ ಪೇೞ್ವುದೆಂತೆನೆ

ಮೊದಲೊಳೆ ಬಂದು ಕಾಣ್ಬೊಡನಂತಿರೆ ತನ್ನ ನಿಸರ್ಗವತ್ಸಲ
ತ್ವದಿನೆನಗಾ ಪ್ರಸಾದಪದಮಂ ದಯೆಗೆಯ್ದ ಮಹಾನುಭಾವೆಗಾ
ಸುದತಿಗೆ ಪೇೞ್ದು ಬರ್ಪನಿತು ಗೌರವಮುಂ ಮೊದಲಾಗಿ ಮಾಡಲಾ
ಱದೆ ಖಳರ್ಗೋಳಿಯೊಳ್ ದೊರೆಗೆ ವಂದನನೆನ್ನನದೇನನೆಂದಪೆಂ ೨೮

ಅದೆಂತು ದೊರೆಕೊಳ್ಗು ಮುನ್ನ ಬರವಿಂಗೆ ಸಾಫಲ್ಯಮಿ
ನ್ನದೆಂತುಚಿತಮಕ್ಕು ಮಾತ್ಮಗುಣಬೃಂದಮಿಂತೀ ಜಗ
ಕ್ಕದೆಂತು ನಯನೋತ್ಸವಂ ಸತತಮಕ್ಕುಮೆಂತಾಗೆ ಯ
ತ್ನದಿಂ ನಿಜ ಶರೀರಮಂ ನಿಲಿಸವೇಳ್ಪುದಿನ್ ದೇವಿಯರ್. ೨೯

ಎಂದು ಬಿನ್ನವಿಸೆಂದು ಬೆಸಸಿ ಅನಂತರಮಿಾ ಬಿನ್ನಪಮಂ ಪತ್ರಲೇಖೆ ಮಱೆಯದಂತು ಮಾಳ್ಪುದೆನ್ನನೊಡಗೊಂಡು ಪೋಗಲ್ಕೆಕೆವೆರಸು ಮಹಾ ಶ್ವೇತಾಶ್ರಮಕ್ಕೆ ನೀನೆ ಮಗುಳೆ ಬರ್ಪುದೆಂದು ಕೇಯೂರಕಂಗೆ ಬೆಸಸಿ ಬೀಳ್ಕೊಳಿಸಲೊಡಮುವನನೇಕಾಶ್ವೀಯ ಬಲಸಮನ್ವಿತನಪ್ಪ ಮೇಘನಾದಂ ಬೆರಸು ಪೋದನಿತ್ತ ನೃಪರೂಪಚಂದ್ರನೆವರಗಳ್ಕೆಯಿಂ ಸ್ವಚಿಂತನಾಗಿ ಕಿಱಿದು ಬೇಗಮಿರ್ದು ವೈಶಂಪಾಯನ ಪ್ರತ್ಯುದ್ಗಮನಾರ್ಥಂ ತಂದೆಯಂ ಬೀಳ್ಕೊಂಡು ನಗರಿಯಂ ಪೊಱಮಟ್ಟು ಶಿಪ್ರಾನದಿಯಂ ದಾಂಟಿ ದಶ ಪುರದ ಬಟ್ಟೆವಿಡಿದು ನಡೆಯುತ್ತೆ ಯೋಜನತ್ರಿತಯಮಂ ಪೋಗೆ ಮುಂದರ್ಧ ಗವ್ಯೂತಿಮಾತ್ರದಲ್ಲಿ ಬೀಡಂ ಬಿಡುವ ಕಟಕಮಂ ಕಂಡು ತನ್ನೇಱಿದ ವಾರು ವಮೊಡವರ್ಪ ನಾಲ್ಕಯ್ದು ಕುದುರೆಗಳ್ವೆರಸು ಬೀಡಂ ಪೊಕ್ಕು ಗೆಂಟಱೊಳೆ ಮೆಲ್ಲಮೆಲ್ಲನೆಱಗುವ ರಾಜಪುತ್ರಸಹಸ್ರಂಗಳ ಮೊಗಮಂ ನೋಡಿ ಚಂದ್ರಾ ಪೀಡಂ ವೈಶಂಪಾಯನನೆಲ್ಲಿರ್ದಪನೆಂದು ಬೆಸಗೊಳ್ವುದುಂ ಬಲಾಹಕ ನಿಂತು ಬಿನ್ನವಿಸಿದಂ ದೇವರ್ ಬಿಜಯಂಗೆಯ್ಯಲೊಡನೆ ಮಱುದಿವಸಂ ವೈಶಂಪಾಯನಂ ಪ್ರಯಾಣಭೇರಿಯಂ ಪೊಯ್ಸಿ ಕಟಕಮೆಲ್ಲಮಂ ಮುಂದೆ ನಡೆಯಲ್ವೇಳ್ದು ಪುರಾಣಂಗಳೊಳ್ ಪುಣ್ಯತೀರ್ಥಮೆಂದು ಕೇಳಲಪ್ಪುದಱಿ ನೆನೀ ಯಚ್ಛೋದಮಂ ಮಿಂದು ಸಿದ್ಧಾಯತನದ ಭಗವದ್ಭವಾನೀ ವಲ್ಲ ಭಂಗೆ ಪೊಡವಟ್ಟು ಪೆಱಗೆ ಪೋಪೆನೆಂದು ಪಾದಮಾರ್ಗದೊಳೆ ನಡೆಯು ತುಮಚ್ಛೋದಕ್ಕೆ ಬಂದಾ ಪ್ರದೇಶದ ರಮಣೀಯತೆಗೆ ಸೋಲ್ತೆಲ್ಲಾ ದೆಸೆ ಯುಮಂ ನೋಡುತ್ತುಂ ಪೋಗಿ ಮುಂದೊಂದು ಲತಾಮಂಟಪಮಂ ಕಂಡು

ಕಂಡೆಱವಂತೆ ಮುನ್ನೆ ಶುಕನಾಸತನೂಭವನಾಗಳಾ ಲತಾ
ಮಂಡಪಮುಂ ಕರಂ ಮುಸಿದೆ ಮತ್ತಮೊಱಲ್ದು ನೋಡುತುಂ
ಕಂಡರಿಸಿಟ್ಟರೋ ಕಡೆದರೋ ಕರುವಿಟ್ಟರೊ ನಿದ್ದೆ ಬಂದು ಕ
ಯ್ಕೊಂಡುದೊ ಪೇೞಿಮೆಂಬನೆಗಮೆಲ್ಲಿಯು ನಿಂದನೆದೊಂದು ಜಾವಮುಂ ೩೦

ಇದು ದಲ್ ಚೈತ್ರರಥಾಹ್ವಯಂ ಬನಮಿದಚ್ಛೋದಂ ಸರಂ ನೋಡ್ಪೊಡೀ
ತ್ರಿದಶಾವಾಸಮಿದಿಂತುಟಲ್ತೆ ರಮಣೀಯಂ ಬೀಡುಮಂತೆತ್ತಿ ಪೋ
ದುದು ರಾಜಾತ್ಮಜರಿಂತು ನಿನ್ನ ಬರವಂ ಪಾರುತ್ತುಮಿರ್ದಪ್ಪರಂ
ತದಱಿಂ ಜೇಗಮೆ ಮಿಂದು ಕಾಣಭವನಂ ಸದ್ವಿಪ್ರವಿದ್ಯಾಧರಾ ೩೧

ಎಂಬುದುಂ ಮೂಗನಂತೇನುಮಂ ನುಡಿಯದೆ ಲತಾಮಂಟಪಮನೆ
ನೀಡುಂ ನೋಡುತ್ತುಮಿರ್ಪುದುಂ ಮತ್ತಾವೊಗಳೆಡಿಗಡಿಗೆನಿವಿಸಲೆಮ್ಮನಿ
ವಕ್ಕೆ ಸೈರಿಸದ ಚಂದ್ರಾಪೀಡಭುಜಪರಿರಕ್ಷಿತಮಪ್ಪ ತುರಂಗಬಲಂಬೆರಸು
ನೀವಿಲ್ಲಿರವೇಡಿನ್ ಕಟಕಮಂ ಮುಂದಿಟ್ಟೊಡಗೊಂಡು ಪೋಗಿಮಾಂ ಬರ್ಪು
ದಿಲ್ಲೆಂದು ಜಡಿದೆಮ್ಮಂ ಬೆಟ್ಟವೆಟ್ಟನಾಗಿ ಪಱಿಪಡೆ ನುಡಿದು ಮುನ್ನಿನಂದ
ದೊಳೆ ಮೋನಂಗೊಂಡು ಜಾನಿಸುತ್ತಿರ್ದನನಿಂತೆಂದೆವು

ನಿನಗೀವೈರಾಗ್ಯಮೇಕೊರ್ಮೊದಲೊಗೆದುದಿದೆಮ್ಮಿಂದವಾಯ್ತೋ ಭವನ್ಮಿ
ತ್ರನಿನಾಯ್ತೋ ನಿನ್ನನಾವೀ ತೆಱದೆ ನಿಲಿಸಿ ಪೋದಂದು ರಾಜೇಂದ್ರಚಂದ್ರಾಂ
ಕನ ತಾರಾಪೀಡಭೂಪಾಲಕನ ಮುಳಿಸನಾರಾಂಪರೇಟ್ ಪೋಪಮೆಂದಿಂ
ತನಿವಂಗೆಯ್ಯುತ್ತಿರಲ್ಕಂ ನುಡಿಯನೆ ಶುಕನಾಸಾತ್ಮಜಂ ಮತ್ತಮೆಮ್ಮೊಳ್ ೩೨

. ಮತ್ತಂ ಬರವಿಂಗಾಗ್ರಹಿಸಲಿನ್ ನುಡಿಯದಿರಿಂ ಚಂದ್ರಾಪೀಡ
ನೊಳ್ ನೆರೆವ ಪುಣ್ಯಮೆನಗಿಲ್ಲೆನ್ನನೆಗಲ್ಚಿದ ಬಿದಿ ಬಲ್ಲಿದನೆಂದಲ್ಲಿಂಪೆಟ್ಟು
ಪೋಪನ ಬೆನ್ನೊಳೆವೆಲ್ಲಂ ಪೋಗೆವೋಗೆ ನೀವೇಕೆ ಬಂದಪ್ಪಿರೆಂದೆಮ್ಮಂ
ಬಿಡೆ ಜಡಿದು ಕಿಱಿದಂತರಂ ಪೋಗಿ

ತರುವೀಥೀವ್ರಾತದೊಳ್ ಕಟ್ಟಲೆವಿಡುವ ತಮಾಲಂಗಳೊಳ್ ಮಲ್ಲಿಕಾಮಂ
ದಿರದೊಳ್ ನಾನ್ನಾಲತಾಮಂಟಪದೊಳೆಸೆವ ಬೀಡ್ಜೊಂಪದೊಳ್ ದಿವ್ಯಪದ್ಮಾ
ಕರ ತೀರೋಪಾಂತ ಸಿದ್ಧಾಯತನದೊಳೆನಸುಂ ಭ್ರಾಂತಿಯಿಂ ಭಾವಿಸುತ್ತೆ
ಚ್ಚರಿವಟ್ಟೇನಾನುಮಂ ಕೆಟ್ಟುದನಱಸುವವೋಲ್ ಕೂಡೆ ನೋಡುತ್ತು
ಮಿರ್ದಂ ೩೩

ಅಂತದನನನ್ಯದೃಷ್ಟಿಯಾಗಿ ತೊಳಲುತ್ತುಂ ಪಲವು ದಿವಸಮುಣ್ಣದೆ
ಕುಡಿಯದಿರ್ದನನೆಂತಾನುಮಾಹಾರಾಭಿಮುಖನಂ ಮಾಡೆ ಕಂದಮೂಲ
ಫಲಂಗಳನಲ್ಲದೆ ಮೆಲ್ಲೆನೆಂದು ನಿಯಮಂಮಾಡಿರ್ದನಂ ನೋಡಿ

ಬರವಿನ ಮಾತು ಮಂತ್ರಿಸುತನೊಳ್ ಪಱಿಪಟ್ಟುದನೆಯ್ದೆ ಕಂಡು ದೇ
ವರ ಬೞಿಗಲ್ಲದಿನ್ ಬರವು ಕೂಡದು ನಿಕ್ಕುವಮೆಂದು ವಾಜಿಗಳ್
ವೆರಸು ಕೆಲಂಬರಂ ಪೆಱಗೆ ಕಾಪಿರಿಸಿಟ್ಟು ಸಮಸ್ತಸೇನೆಗ
ಲ್ಲಿರವಿದಯುಕ್ತಮೆಂದು ನಡೆತಂದೆವಿದಿಂತುಟು ವೃತ್ತಕಂ ನೃಪಾ ೩೪

ಎಂದು ಬಿನ್ನವಿಸೆ ಚಂದ್ರಾಪೀಡನದೆಲ್ಲಮಂ ಕೇಳ್ದು

ಜನಿಯಿಸಿದಂದುತ್ರೊಟ್ಟಗಲದಾತನನಿಂತಿರಗಲ್ದ ಪಾಪಕ
ರ್ಮನನವಿವೇಕಿಯಂ ಗುಣವಿಹೀನನನೆನ್ನನಳೀಕಮಿತ್ರನಂ
ನೆನೆಯದೆ ನಿಂದೊಡಂ ಗುರುಜನಂಗಳ ಮೇಗಣದೊಂದು ಭಕ್ತಿಯಂ
ನೆನೆದು ಮನೋರಮಾಪ್ರಿಯಸುತಂ ಬರವೇೞ್ಕುಮದೇಕೆ ನಿಂದನೋ ೩೫

ಪುರುಷಾರ್ಥತ್ರಿತಯಮನೆವ
ಧರಿಸದೆ ವೈರಾಗ್ಯಮೇಕೆ ಪುಟ್ಟಿದುದೋ ಚೆ
ಚ್ಚರಮೆಂಬುದನಾಂ ಪೋಗಿಯೆ
ನೆರೆದಲ್ಲಿಯಮಾತ್ಯಮುಖ್ಯಸುತನೊಳ್ ತಿಳಿವೆಂ ೩೬

ಅದಲ್ಲದೆಯುಂ ಪತ್ರಲೇಖೆಯುಂ ಪೋದಳಲ್ಲಿಯೆ ವೈಶಂಪಾಯನನು
ಮಿರ್ದಪನೆದಱಿನಾತನನೊಡಗೊಂಡು ಬಂದಪೆನೆಂದು ಬಗೆದು

ಜನನಿಗೆ ಪೇೞ್ದಾರ್ಯ ಶುಕನಾಸನನೀಕ್ಷಿಸದಾದವಾತ್ಮನಂ
ದನನ ವಿಯೋಗದಿಂ ಮಱುಗುತಿರ್ದ ಮನೋರಮೆಯಲ್ಲಿಗೆಯ್ದದಾ
ನನುನಯದಿಂದಮಾದರಿಸದಿತ್ತಣಿನಿತ್ತಲೆ ಪೋದೊಡಾನುಮಾ
ತನ ತೆಱನಪ್ಪೆನಿರ್ಮಡಿಸುಗುಂ ಗುರುಗಳ್ಗತಿದುಃಖಮೇವೆನೋ ೩೭

ಅದಱಿನಿವರನಾಶ್ವಾಸಿಸಿ ವೈಶಂಪಾಯನ ಪ್ರತ್ಯಾನಯನಕ್ಕೆ ತಂದೆ
ಯಂ ಬೀೞ್ಕೊಂಡು ಪೋಗಲ್ವೇೞ್ಕುಮೆಂದು ಕಟಕಂಬೆರಸುಜ್ಜಯಿನಿಗೆ ವಂದು
ವೈಶಂಪಾಯನನ ವೃತ್ತಾಂತಮುಂ ತಂದೆಗೆ ನಿವೇದಿಸಿ ಆಂ ಪೋಗದೆ
ಪಾರಂ ವೈಶಂಪಾಯನನದಱಿನೀಗಳೆ ನೀಮೆನ್ನಂ ಪೋಗವೇೞ್ಕುವೆನೆ
ಮಗನೆ ಪರಿಣತವಯಸರುಮನುಭೂತ ಪುರುಷಾರ್ಥತ್ರಯರುಮೆನಿಸಿದೆ
ವಗೆ ನಿನ್ನನಧಿರಾಜಪದವಿಯೊಳ್ ನಿಲಿಸಿ ಪೂರ್ವರಾಜಸೇವಿತಮಾರ್ಗಮ

ನೆಯ್ದುವೇೞ್ಕುಮೆಂಬನ್ನೆಗಂ ತೊಟ್ಟನೆ ವೈಶಂಪಾಯನವೃತ್ತಾಂತವಂತ ರಾಯಹೇತುವಾದುದಱಿಂ ನೀಂ ತಡೆಯದೆ ಬಂದೆಮ್ಮ ಮನೋರಥಕ್ಕೆ ಸಾಫಲ್ಯಮಮಂ ಸಂದಿಪುದೆಂದು

ಹೃದಯಮನಿತ್ತಪನಾ ಸಮ
ಯದೊಳೆನೆ ಬಾಯ್ವಾಯೊಳಿತ್ತು ತಂಬುಲಮನಲಂ
ಪ್ರೀಪವಲ್ಕೆ ಪರಸಿ ಬೀಡ್ಕೊಳಿ [illegible]
ಸಿದನೆಂತಾನುಂ ನಿಜಾತ್ಮಜನನಧಿರಾಜಂ ॥ ೩೮

## ೭. ಚಂದ್ರಾಪೀಡನ ಪ್ರಾಣವಿಯೋಗ

ಅನಂತರಂ ಪುನಃಪ್ರಣಾಮಮಂ ಮಾಡಿ ಪೊಱಮಟ್ಟು ಬಂದು ಸುತವಿಯೋಗಚಿಂತಾಕ್ರಾಂತರಪ್ಪ ಶುಕನಾಸನುಮಂ ಮನೋರಮೆಯುಮನೊಱೆನುಡಿದು ಬೀೞ್ಕೊಂಡು ಬಂದು ವೈಶಂಪಾಯನ ದರ್ಶನತಾತ್ಪರ್ಯದೊಳಂ ಕಾದಂಬರೀಸಮಾಗಮೌತ್ಸುಕ್ಯದೊಳಮಕೃತಪರಿಲಂಬನಾಗಿ ಭವನಾಂಗಣದೊಳ್ ಸಾರ್ಚಿದಿಂದ್ರಾಯುಧಮಂ ಚಂದ್ರಾಪೀಡನೇಱಿ ದಿಗಂತರಂಗಳೆಲ್ಲಮನನಂತಹಯಹೇಷಾರವಂಗಳಿಂ ತೆಕ್ಕನೆ ತೀವೆ ಭುವನತಳಮೆಲ್ಲಂ ತುರಂಗಮಯಮಾಗೆ ಪೊಱಮಟ್ಟು ಶಿಪ್ರಾನದಿಯಂ ದಾಂಟಿ ಯೋಜನತ್ರಯದನಿತಂ ಪೋಗಿ ತೃಣಜಲಸಮೃದ್ಧಮಾದೆಡೆಯೊಳ್ ಬೀಡುಗೆಯ್ದು ತನ್ನೊಳಿಂತೆಂದಂ

ಎನಗೆನಸುಂ ಲಜ್ಜಿಸಿ ಪೋ
ಪನ ಬೆನ್ನೊಳ್ ಪೋಗಿ ತೆಗೆದು ತಪ್ಪೈಸುತುಮಾ
ತನೆದೊಂದು ಲಜ್ಜೆಯಂ ಕಳೆ
ದನುಭವಿಪೆಂ ಮತ್ಸುಹೃತ್ಸಮಾಗಮಸುಖಮಂ ೧

ಅತನುಮಾನುಮಾಗಳೆ ಮದಾಗಮನೋದ್ಯತಹರ್ಷೆಯಂ ಮಹಾ
ಶ್ವೇತೆಯನೆಯ್ದೆ ಕಂಡು ಬೞಿಕಂತೆ ತದಾಶ್ರಮದೊಳ್ ತುರಂಗಸಂ
ಘಾತಮುಮಂ ನೃಪಾತ್ಮಜರುಮಂ ನಿಲಿಸಿಟ್ಟೊಲವಿಂದಮಾ ಮಹಾ
ಶ್ವೇತೆಯೆ ಬೇಗಮುಯ್ಯೆ ಪುಗದಿರ್ಪವೆ ನಚ್ಚಿನ ಹೇಮಕೂಟಮಂ ೨

ಅಂತು

ಆಂ ಬಂದುದನಹಮಹಮಿಕೆ
ಯಿಂ ಬೇಗಂ ಪರಿದು ಪೋಗಿ ಪರಮೋತ್ಸವದಿಂ
ದಂ ಬಿನ್ನವಿಪ ಜನಂ ಕಾ
ದಂಬರಿಯಿಂ ಮೆಚ್ಚುಗೊಳ್ಳದಿರ್ಕುಮೆ ಪಿರಿದುಂ ೩

ಕಣ್ಗುಡಿತೆಗಳಿಂದಾಕೆ ಪ
ವಣ್ಗಿಟಿದಾ ಬಾಷ್ಪವಾರಿಯಂ ಸುರಿಯುತ್ತುಂ
ಕಣ್ಗೊಳಿಸದಿರ್ಕುಮೇ ಪೇೞ್
ವಣ್ಗಿಸ್ ಮದನಾಗ್ನಿಯೆಂದು ನದಿಪುವ ತೆಱದಿಂ ೪

ಆ ಸಮಯದೊಳ್ ಸಂಭ್ರಮಂಬೆರಸು ಮುನ್ನಿರ್ದ ಕುಸುಮಶಯನಮಂ ಪಿಂದಿಕ್ಕಿ ಕಂಪಿಸುತ್ತುಮೆನಗಿದಿರೆೞ್ದ ಕಾದಂಬರೀದೇವಿಯಂ ಕಣ್ಣಾರೆ ನೋಡಿ ಕಣ್ಬಡೆದುದರ್ಕೆ ಸಾಫಲ್ಯಮಂ ಸಾಧಿಸುವೆನನಂತರಂ

ಚರಣನತೆ ಪತ್ರಲೇಖೆಯ
ನೆರದೆತ್ತುವ ವಿನಯವಿನತೆ ಮದಲೇಖೆಯನಾ
ದರಿಸುವ ಕೇಯೂರಕನಂ
ಬರೆತೆಗೆದಪ್ಪುವ ಸುಖಕ್ಕೆ ನೆಲೆಯುನಿಸಿರ್ಪಂ ೫

ಮನದನ್ನಳೆನಿಸಿ ನೆಗೞ್ವೆ
ನ್ನನಿಯಳ್ಗಂ ಪೇೞ್ದನಂತರಂ ಮಾಡಿಸುವೆಂ
ಮನಮೊಸೆದಾ ವೈಶಂಪಾ
ಯನಂಗೆ ಮದಲೇಖೆಯೊಳ್ ವಿವಾಹೋತ್ಸವಮಂ ೬

ಎಂದಿಂತನಂತಚಿಂತಾಂತರಂಗಂ ಪಲುಂಬಿ ಪಂಬಲಿಸುತ್ತುಂ ನಿಚ್ಚ ವಯಣಂಗಳಿಂ ಯುವರಾಜನನೇಕ ಯೋಜನಂಗಳಂ ಪೆಱಗಿಕ್ಕಿ ಪೋಗುತ್ತೆ ಸುಹೃದ್ದರ್ಶನ ಕುತೂಹಲದೊಳಂ ಕಾದಂಬರೀ ಸಮಾಗಮೌತ್ಸುಕ್ಯದೊಳ ಮೆಲ್ಲಿಯುಂ ತಡೆಯದೆ ಪಲವು ಪಯಣಂಗಳಿಂ ಚಿತ್ರರಥಮನೆಯ್ದಿ

ವನಾಂತರದ ಪೆರ್ಮರಂ ಪೊದಱು ಪಳ್ಳಕೊಳ್ಳಂಗಳೆಂ
ಬಿನಿತ್ತೆಡೆಯೊಳಂ ತೊಡೆಲ್ದವನಿಪಾಲರುಂ ತಾನುಮಾ
ವನಾಂತರದೊಳೆತ್ತಲುಂ ಸುೞಿದು ಸುತ್ತಲುಂ ಸುತ್ತಿ ಕಂ
ಡನಿಲ್ಲ ಸಖನಿರ್ದ ಚಿಹ್ನಮುಮನಾ ನರೇಂದ್ರಾತ್ಮಜಂ ೭

ಅಂತು ವೈಶಂಪಾಯನನನೆಲ್ಲಿಯುಮಱಸಿ ಕಾಣದಾತನ ವೃತ್ತಾಂತಮಂ ಮಹಾಶ್ವೇತೆಯಾದೊಡಱಿಗುಮೆಂದು ಚಂದ್ರಾಪೀಡಂ ತದಾಶ್ರಮಮಂ ಪೊಕ್ಕು ಗುಹಾದ್ವಾರಮನೆಯ್ದೆ ವರ್ಪಲ್ಲಿ

ಪೆಸೆಗೆಟ್ಟುದ್ಬಾಷ್ಪದಿಂದಂ ತರಳಿಕೆ ಪಿಡಿದೆಂತಾನುಪಾತ್ತಾಂಗಮಂ ನೆ
ಮ್ಮಿ ಸೆ ಜೋಲ್ದಂತಾ ಗುಹಾದ್ವಾರದ ಶಿಲೆಯೊಳ್ ಮನ್ಯೂದ್ಗಮಕ್ಷೋಭದಿಂಕಂ
ಪಿಸುತುಂ ಪ್ರಾವರ್ಷಧಾರಾವಳಿವೊಲೊಗೆವ ಕಣ್ಣೀರ್ಗಳೊಳ್ ತೇಂ
ಕುತುಂ ದುಃ
ಖಸಹಸ್ರೋದ್ವೇಜನಾಧೋಮುಖಿಯೆನಿಪ ಮಹಾಶ್ವೇತೆಯಂ ಕಂಡ
ನಾಗಳ್ ೮

ಅಂತು ಕಂಡು ಭೋಂಕನಲಾಶಂಕಿತಹೃದಯನಾಗಿ

ಪಿರಿದುಂ ಹರ್ಷಮನೆನ್ನಯ
ಬರವಿಂದಂ ಮಾಡದೀ ಮಹಾಶ್ವೇತೆಯದೊಂ
ದಿರವಿಂತಿದೇನೊ ಕಾದಂ
ಬರಿಗೇನಾನೊಂದನಿಷ್ಟಮಾಗಲೆ ವೇಳ್ಕುಂ ೯

ಎಂದು ತನ್ನೊಳ್ ಬಗೆಯುತ್ತುಮೊಯ್ಯನೊಯ್ಯನೆ ಪೋಗಿ ಶಿಲಾ
ತಲದೊಳ್ ಕುಳ್ಳಿರ್ದು ಬಾಷ್ಪವಿಷಣ್ಣವದನನಾಗಿ ತರಳಿಕೆಯನಿದೇನೆಂದು
ಬೆಸಗೊಳ್ವುದುಮಾಕೆ ಕುಮಾರಂ ಬಿಜಯಂಗೆಯ್ದನೆಂದು ಮಹಾಶ್ವೇತೆಗಱಿ
ಪುವುದುಮಾ ಕಾಂತೆಯನುಪಸಂಹೃತಮನ್ಯುವೇಗೆಯುಂ ಗದ್ಗದಿಕೆಯವಗೃಹ್ಯ
ಮಾಣ ಕಂಠೆಯುಮಾಗಿ ಕುಮಾರನನಿಂತೆಂದಳ್

ನಿನಗೇವೇಳ್ದಪಳೀಕೆ ಕೇಳಿಸಿದೆನಾಂ ಮದ್ದುಃಖಮಂ ಮುನ್ನೆ ನಿ
ನ್ನನೆದುಃಖಶ್ರವಣಾರ್ಹನಂ ಸಕಲದುಃಖಾವಾಸೆಯೆಂ ಜೀವಿತ
ಕ್ಕೆ ನಿಬದ್ಧಾಶೆಯೆನತ್ರಪಾತ್ಮಿಕೆಯೆನೀಗಳ್ ಮತ್ತೆಯುಂ ಕೇಳಿಸ
ಲ್ಕನುಗೆಯ್ದಪ್ಪೆನಿದೊಂದು ದುಶ್ರವಮುಮಂ ರಾಜಾಧಿರಾಜಾತ್ಮಜಾ ೧೦

ಅದೆಂತೆನೆ ನೀಮುಜ್ಜಯಿನಿಗೆ ಬಿಜಯಂಗೆಯ್ದಿರೆಂಬುದನಾಂ ಕೇಯೂ
ರಕನ ಪೇೞ್ಕೆಯಿಂದಱಿದು ಭೋಂಕನೆ ವಿದೀರ್ಣಹೃದಯೆಯಾಗಿ ಚಿತ್ರರಥ
ಮನೋರಥಮುಂ ಮದಿರಾಮಹಾದೇವಿಯ ಮನೋಭಿಲಷಿತಮುಂ
ಮದೀಯಸಮೀಹಿತಮುಂ ಕಾದಂಬರಿಯ ಮನಃಪ್ರಿಯಸಮಾಗಮನನಿರ್ವ
ತಿಯುಂ ಸಮನಿಸಿತಿಲ್ಲೆಂದು ಮನಂ ನೊಂದು ವೈರಾಗ್ಯದಿಂ ಮದೀಯ
ಪ್ರಿಯಸಖಿಯ ಕೂರ್ಮೆಯ ತೊಡರ್ಪಂ ಪಱಿದು ಮಹಾಘೋರತರ
ತಪಶ್ಚರಣಾರ್ಥಂ ಮತ್ತಮಿಲ್ಲಿಗೆ ವಂದಿರ್ದೆನನ್ನೆಗಮೊಂದುದಿವಸಂ

ನಸುದೋಱುತ್ತಿರ್ದ (ನುಣ್ಮೀಸೆಗಳುಮತಿಮೃದುಸ್ನಿಗ್ಧಕೇಶಂಗಳುಂ ಕ
ಣ್ಗೆಸೆಯಲ್ ಮೂಲೋಕಮಂ ಯೌವನಚತುರತರಾಪಾಂಗದಿಂದೊಂದು
ಸೀರ್ಪು
ಲ್ಗಸೆವನ್ನಂ ಮಾಡುತಂಗಪ್ರಭೆಯೊಳಖಿಳಕಾಂತಾರಮಂ ಕೂಡೆ ತೇಂಕಾ
ಡಿಸುತುಂ ವಿಪ್ರೋತ್ತಮಂ ನಿನ್ನಯ ಹರಯದವಂ ಬಂದನೊರ್ವಂ
ಕುಮಾರಂ ೧೧

ಅಂತು ಬಂದು ಬನದೊಳಲ್ಲಿಗಲ್ಲಿಗೆ ಬದ್ಧಲಕ್ಷದೃಷ್ಟಿಯಿನೇನಾನುಂ ಕೆಟ್ಟುದನಱಸುವಂತೆನ್ನಂ ನೋಡುತ್ತುಮೆಯ್ದೆವಂದು ಕಂಡಱವನಂತೆಯು ಮೇನಾನುಮಂ ಪ್ರಾರ್ಥಿಪನಂತೆಯುಂ ಬೆಸಗೊಳ್ಳದೆಯುಂ ನಿಜಾವಸ್ಥೆಯಂ ನಿವೇದಿಸುವಂತೆಯುಂ ಲಜ್ಜಿಸುವಂತೆಯುಮುಮ್ಮಳಿಸುವಂತೆಯುಮಾಗಿ

ಸುರಿತರೆ ಬಾಷ್ಪಪೂರಮೆಮೆಯಿಕ್ಕದೆ ಕೆನ್ನೆಯನೆಯ್ದೆ ನೀಳ್ದು ಬಿ
ತ್ತರಿಪ ಬೞಲ್ಪೆಳರ್ವೆರಸು ಸುತ್ತುವ ಮುತ್ತುವಪಾಂಗಮಾಲೆಯಿಂ
ಬರೆ ತೆಗೆದಪ್ಪನಪ್ಪಿದಪನೆನ್ನೊಳಪೊಕ್ಕಪನೆಯ್ದೆ ಪೀರ್ದಪಂ
ಪಿರಿದುಮೆನಲ್ಕೆ ತದ್ದ್ವಿಜಕುಮಾರಕನೆನ್ನನೊಱಲ್ದು ನೋಡಿದಂ ೧೨

ಅಂತು ನೀಡುಂ ನೋಡುತ್ತುಮೆನ್ನನಿಂತೆಂದಂ

ಭುವನದೊಳೆಲ್ಲಂ ತಂತ
ಮ್ಮ ವಯೋರೂಪಕ್ಕೆ ತಕ್ಕುದಂ ನೆಗೞ್ದೊಡೆ ಮೆ
ಚ್ಚುವರೆಳವೆಗಮಸದೃಶಮೆನಿ
ಸುವನುಷ್ಠಾನದೊಳಿದೇಕೆ ನಿನ್ನಯ ಯತ್ನಂ ೧೩

ಸುಂದರಿ ಜೀವಲೋಕದ ಸುಖಕ್ಕೆ ಪರಾಙ್ಮುಖಿಯರ್ಕಳಾಗಿ ನಿ
ನ್ನೊಂದಿಗರೀ ತಪಕ್ಕೆಳಸಿದಂದು ಮನೋಜನ ಬಿಲ್ಲ ಬಲ್ಮೆ ಪೂ
ರ್ಣೇಂದುವಿನುಜ್ಜಳಿಕ್ಕೆ ಮಧುಮಾಸದ ಗೋಸನೆ ತುಂಬಿಯಂಚರಂ
ಬಂದೆಳಮಾವಿನೇಳ್ಗೆ ಬಗೆದಂದು ನಿರರ್ಥಕಮಾಗದಿರ್ಕುಮೇ ೧೪

ಎಂಡಿವುಮೊದಲಾಗಿ ಮತ್ತಮನೇಕ ಚಾಟುಚಪಲವಚನಂಗಳಂ ನುಡಿಯುತ್ತುಮಿರೆ ಕೇಳ್ದು ಪುಂಡರೀಕದೇವನ ವೃತ್ತಾಂತದಿನಪೇತಕೌತು ಕೆಯುಮಪಗತಸುಖೆಯುಮಾಗಿ

ನೀನಾರ್ಗೆ ಬಂದೆಯೆತ್ತಣಿ
ನೇನಂ ಬೆಸಗೊಳ್ವೆಯೆನ್ನನೆಂದಾತನನಂ
ತೇನುಮನೊಂ ಬೆಸಗೊಳ್ಳದೆ
ಮೌನದಿನೊಂದೆಸೆಗೆ ತೊಲಗಿದೆಂ ನೃಪತಿಲಕಾ ೧೫

ತರಳಿಕೆ ದೇವತಾರ್ಚನಕೆ ಪೂದಿಱಿಯುತ್ತಿರಲಾಗಳೀಕೆಯಂ
ಕರೆದೆನಗೀ ದ್ವಿಜಂ ನುಡಿವನೊಂದುವ ಗೆಯ್ತವ ಕಾನನಕ್ಕೆ ವಂ
ದಿರ್ದವಿದ್ನು ಭ್ರೇಜದೊಂದೆನಿಸದಿರ್ದಪುದೀ ಗುಹೆಯತ್ತ ಸಾರ್ದದಂ
ತಿರಲಿವನಂ ನಿವಾರಿಸುಟಿದಂದೆನಸುಂ ಬಟಿಸಂದು ಪೋರ್ದುಗುಂ ೧೬

ಎಂದು ಪೇೞ್ವುದುಮಿವಳೆನ್ನತ್ತಲಾ ದ್ವಿಜಕುಮಾರನಂ ಸಾರದಂತು
ನಿವಾರಿಸುತ್ತು ಮಿರೆಯಿರೆ

ಅದಯನೆನಿಪ್ಪ ಮನ್ಮಥನ ದುರ್ಜಯವೃತ್ತಿಯದೊಂದು ಪಾ
ಪದ ಫಲದಿಂ ವಿಧಾತೃವಶದಿಂ ಭವಿತವ್ಯತೆಯಿಂದಮಿಂತು ಮಾ
ಣದೆ ದಿವಸಕ್ಕಮಿಲ್ಲಿಗೆಸದಾಗ್ರಹದಿಂದಮೆ ಬಂದು ಪೋರ್ದಲ
ಣ್ಮದೆ ಮದನಾತುರಂ ಸುಟಿವನೆನ್ನಯ ಕಣ್ಬೊಲದೊಳ್ ನಿರಂತರಂ ೧೭

ಅಂತು ಸುಟಿಯುತ್ತುಮಿರಲೊರ್ಮೆ ಯಾಮಿನೀಯಾಮತ್ರಯಸಮ
ಯದೊಳ್ ಚಂದ್ರಿಕಾಪಯಃಪೂರಮನಿರದುಮಯೂಖಂಗಳ್ ಸುರಿಯೆ
ತರಳಿಕೆ ಮಱೆದು ನಿದ್ರೆಗೆಯ್ವಿನಗೆ ನಿದ್ರೆ ಬಾರದೆ ಸಂತಪ್ತ ಶರೀರೆಯಾಗಿ
ಗುಹೆಯಂ ಪೊಱಮಟ್ಟೆನನೆಗಂ

ಅಲರ್ದಚ್ಛೋದ ನವೋತ್ಪಲಪ್ರಸರ ಧಿವಾಮೋದದೊಳ್ ಸಂದು ನಿ
ರ್ಮಲ ಚಂದ್ರದ್ಯುತಿವರ್ಷಹರ್ಷಿತ ಚಕೋರಾನಂದ ವಾರ್ಬಿಂದು ಸಂ
ಕುಲದೊಳ್ ಬಂದು ಚಿಲ್ಲತಾವಳಿಗೆ ರೋಮಾಂಚಭಮಂ ತಂದು ತ
ಣ್ಪಲರೂದೆತ್ತಿರಲಾನದರ್ಕೆಳಸಿ ಪಟ್ಟಿರ್ದೆಂ ಶಿಲಾಪಟ್ಟದೊಳ್ ೧೮

ಅಂತು ಪಟ್ಟಿರ್ದು

ಮಿಸುಗುವ ಚಂದ್ರಮಂಡಲದಿನಂದಿಟಿತಂದನ ದಿವ್ಯವಾಣಿಯುಂ
ಪರಿಯುಸಿರಿತ್ತು ಪಾಯ್ದನಗೆ ಪಾಪಿಗೆ ಮೋಣ್ ದಯೆಯಿಂದೆ ಜೀವಿತ

ವ್ಯಸನಿನಿಯಂತೆ ಜೀವಿಸುತುಮಿರ್ಕೆವಳೆಂದು ಮಹಾತ್ಮನೆನ್ನನಾ
ಱಿಸಿದನವೆಂತುಮೆನ್ನಯ ಸಮೀಹಿತಮಿಂತು ವಿಳಂಬಿಸಿರ್ಕುಮೇ ೧೯

ತ್ರಿಭುವನದೊರ್ಮೆಯುಂ ಮಗುಟ್ಟು ತೋಱಿಸಲಾಱನೆ ಪುಂಡರೀಕದೇ
ವನನಿರದೆತ್ತಿಕೊಂಡು ಗಗನಕ್ಕೆ ಪರಾಸುವನಾವನಕ್ಕೆ ಭೋಂ
ಕನೆ ಪಿಡಿದುಯ್ದನೇವನೊ ಮನಃಪ್ರಿಯನಕ್ಕಟ ಜೀವಿಸುತ್ತುಮಿಂ
ತೆನಗೆ ಕೃಪಾಬ್ಧಿ ತಾರನೆ ಕಪಿಂಜಲಕಂ ಪ್ರಿಯನೊಂದು ವಾರ್ತೆಯಂ ೨೦

ಎಂದಿವು ಮೊದಲಾಗಿ ಪಲವುಮಾಲಜಾಲಂಗಳನೆನ್ನೊಳ್ ಚಿಂತಿಸುತ್ತುಮಿರ್ಪನ್ನೆಗಮಾದ್ವಿಜಕುಮಾರಂ ಎನ್ನನೆಪ್ಪುವಟಿಯಾಸೆಯಿಂ ದೂರದೊಳ್ ನಿಮಿರ್ವ ನಿಡುತೋಳ್ಗಳುಂ ತನ್ನೊಳ್ ತೋಱೆ ಯುಕ್ತಾಯುಕ್ತವಿವೇಕಕ್ಕೆ ಪಿಂತೆಗೆದುನ್ಮತ್ತನಂತೆಚ್ಚ ಬೆಳ್ದಿಂಗಳೊಳೊಯ್ಯನೊಯ್ಯನೆ ಬರುತಿರ್ದನನಾಂ ದೂರದೊಳ್ ಕಂಡು ಭಯಂಗೊಂಡು

ಎಲೆ ಕೇಡಾಯ್ತೆನಗೋವೊ ಮತ್ತಮಿವನೆನ್ನಂ ಕಯ್ಯೊಳಂ ಬಂದು ಮುಟ್ಟ
ಲೊಡಂ ಪತ್ತುವಿಡಲ್ಕೆವೇಟ್ಕುವಸುವಂ ಮೆಯ್ಯೊಡ್ಡಿದೆಂ ದುಃಖಸಂ
ಕುಲಕೋರಂತಿರೆ ಪುಂಡರೀಕನನೆ ಮತ್ತಂ ಕಾಣ್ಬೆನಾನೆಂದೆ ನಿ
ಷ್ಫಲಮಾಯ್ತಕ್ಕಟ ಮಂದಭಾಗ್ಯೆಗೆನಗಿಂತೀ ಪ್ರಾಣಸಂಧಾರಣಂ ೨೧

ಎಂದೆನ್ನೊಳೆ ಬಗೆಯುತ್ತಿರ್ದನನ್ನೆಗಮಾತನೆಯ್ದೆವಂದೆನ್ನನಿಂತೆಂದಂ

ಎಲೇ ಕುಮುದನೇತ್ರೆ ಮನ್ಮಥಸಹಾಯನೀ ಚಂದ್ರಮಂ
ಕೊಲಲ್ ಬಗೆದನೆನ್ನನಾರ್ತನನನಾಥನಂ ದುಃಖಿಯಂ
ಪಲುಂಬ್ಬಿ ಮಱೆವೊಕ್ಕೆನಾಂ ನಿನಗಧೀನಮೀ ಜೀವಿತಂ
ವಿಲಂಬಿಸದೆ ರಕ್ಷಿಸೆನ್ನನೆಱಿಯೆಂ ಪ್ರತೀಕಾರಮಂ ೨೨

ಅದಂ ಕೇಳಲೊಡನೆನ್ನ ನೆತ್ತಿಯೊಳುರಿ ಮಸಗಿದಂತಾಗೆ ಕಿಸಿಸುಕಯ್ಗಣ್ಮೆ ಕಣ್ಗಳಿಂದುಗುತರ್ಪ ಕಣ್ಬನಿಗಿಡಿಗಳಿಂದುರಿಪುವಂತವನಂ ನೀಡುಂ ನೋಡುತ್ತಾವಿಷ್ಟೆಯಂತೆನ್ನನಾನೆಱಿಯದೆ

ನುಡಿವನ್ನಮೆನ್ನನೀ ಪರಿ
ಸಿಡಿಲೇತಕೆ ಕೆಡೆದುದಿಲ್ಲ ನಿನ್ನಯ ಸಿರದೊಳ್
ಉಡುಗಿದುದಿಲ್ಲಮುಸಿರ್ ನ್ಣೊ
ರ್ಮಡಿಯೆನಲೀ ಜಿಹ್ವೆ ಬಿರಿದುದಿಲ್ಲ ದುರಾತ್ಮಾ ೨೩

ಎಂದು ನುಡಿದೊಡನಾಂ ಚಂದ್ರಾಭಿಮುಖಿಯಾಗಿ ಕಯ್ಗಳಂ ಮುಗಿದು ಮಹಾಭಾಗ ಸಕಲಭುವನ ಚೂಡಾಮಣಿಯಪ್ಪ ರೋಹಿಣೀರಮಣ ಪುಂಡರೀಕನನಾಂ ನೋಡಿದಂದಿನಿಂ ಮತ್ತೊರ್ವ ಪುರುಷನಂ ಮನದೊಳಾದೊಡಂ ಭಾವಿಸದಿರ್ದುದು ನನ್ನಿಯಪ್ಪೊಡೀ ಯಳೀಕಕಾಮಿ ಗಿಳಿಯಾಗಿ ಪುಟ್ಟುಗೆಂದು ಶಪಿಸಲೊಡನೆ

ಸಹಿಸಲ್ಕಸಹ್ಯಮಪ್ಪ ಮದನಜ್ವರವೇಗದೆ ಮೇಣ್ ನಿಜಾಘದು
ರ್ವಹಪರಿಪಾಕದಿಂ ಬಗೆಯಲಲ್ಲದೊಡೆನ್ನಯ ತೀವ್ರಶಾಪವಾ
ಙ್ಮಹಿಮೆಯಿನಾತನಂದು ಕಡಿದಿಕ್ಕಿದ ಪೆರ್ಮರನಂತೆವೋಲದೇ
ನಹಹ ನಿರೂಪಿಪೆಂ ಕೆಡೆದು ಪೊಂದಿದನಾ ಯಿಳೆಯಲ್ಲಚೇತನಂ ೨೪

ಅದಂ ಕಂಡತಿದುಃಖಿತರಪ್ಪ ಪರಿಜನಂಗಳ ಮುಖದಿಂದೀತಂ ಭವತ್ಪ್ರಿಯ ವಯಸ್ಯನೆಂದಱಿದೆನೆಂದು ಮಹಾಶ್ವೇತೆ ಕಡುದುಗುಡಂದಳೆದು ಕಣ್ಬನಿಗಳಂ ಬಿಡುತ್ತೆ ಲಜ್ಜಾವನತಮುಖಿಯಾಗಿರಲ್

ಪಿರಿದುಂ ನೀನೊಲವಿಂದೆ ಯತ್ನಿಸಿದೊಡಂ ಕಾದಂಬರೀದೇವಿಯಾ
ಚರಣೋಪಾಸನಸೌಖ್ಯಮಾದೊಡೆನಗಾದತ್ತಿಲ್ಲಪೆಾ ಪುಟ್ಟಿನೊಳ್
ದೊರೆಕೊಳ್ವಂತದು ತಾನೊಡರ್ಚ ಮುಱಿವುಟ್ಟಲ್ಲಾದೊಡಂ ನೀನೆಯುಂ
ದೊರೆವನ್ನಂ ಬಿರಿದತ್ತು ಘೋಂಕನೆರ್ದೆ ತದ್ರಾಜೇಂದ್ರಚಂದ್ರಾಂಕನಾ ೨೫

ಆಗಳ್ ತರಳಿಕೆ ಘೋರನೆ ಚಂದ್ರಾಪೀಡಶರೀರಮಂ ಸಾರ್ದು ಹಾ ದೇವ ಚಂದ್ರಾಪೀಡ ಕಾದಂಬರಿಯನುಟಿಪೆತ್ತ ಪೋಪೆಯೆಂದು ಬಾಯಬಿದು ಪಱಿಪಿಸುತ್ತುಮಿರ್ದಳ್ ಮಹಾಶ್ವೇತೆಯುಂ ಚಂದ್ರಾಪೀಡಮುಖನಿಹಿತನಿಶ್ಚಲಸ್ತಬ್ಧದೃಷ್ಟಿಯಾಗಿ ಮರಣಸಮಾಸಾದಿತೆಯಾದಂತೆ ಮೂರ್ಛೆಗೆ ಸಂದಳಿತ್ತಲನಂತರಂ ತತ್ಸಮಾಸನ್ನ ಪರಿಜನಂ ಪ್ರಲಾಪಂಗೆಯ್ಯುತ್ತವನಿತಲದೊಳ್

ಕೆಡೆದುದು ವಿಗತಚೇತನನಾದ ಕುಮಾರನಂ ಕಂಡು ಕೆಟ್ಟೆವಿದೇನೆಂದು ರಾಜಪುತ್ರರುಮುದ್ಭ್ರಾಂತರಾಗಿ ಚಂದ್ರಾಪೀಡನನುಗಮನಮೇ ಕರಣೀಯವೆಂದು ನಿಶ್ಚೈಸಿರ್ದರನ್ನೆಗಮಿತ್ತಂ ಕಾದಂಬರಿಯ ಪರಿಜನಂ

ತಮತಮಗೊಲವಿಂ ಶ್ವೇತಾ
ಶ್ರಮಕ್ಕೆ ತಾಂ ಬಂದನಧಿಕಹರ್ಷದೆ ನೃಪಜಂ
ದ್ರಮನೆಂದು ಭೋಂಕನತಿಸಂ
ಭ್ರಮದಿಂ ಗಂಧರ್ವಕನ್ಯೆಗಱಿಪಿದರಾಗಳ್ ೨೬

ಅಂತಱಿಪೆ ಚಂದ್ರೋದಯೋಲ್ಲಸಿತೆಯಪ್ಪುದಧಿವೇಲೆಯಂತೆ ಸಮಕರಧ್ವಜೆಯಾಗಿ ಮನದೊಳಗೆ ಗುಡಿಗಟ್ಟಿ ಮಹಾಶ್ವೇತೆಯಲ್ಲಿಗೆ ಪೋದಪ್ಪೆನೆಂದು ಜನನೀಜನಕರಿಂ ಕೃತಾನುಜ್ಞೆಯಾಗಿ ಕಾದಂಬರಿ ಕಯ್ಗೆಯ್ದು ಕೆಲಂಬರಾಪ್ತ ಪರಿಚಾರಿಕೆಯರ್ವೆರಸು ಕೇಯೂರಕೋಪದಿಶ್ಯಮಾನಮಾರ್ಗೆಯುಮೆನಿಸಿಪತ್ರಲೇಖಾಹಸ್ತಾವಲಂಬಿನಿಯುಮಾಗಿ ಮಹಾಶ್ವೇತಾಶ್ರಮಕ್ಕೆ ವಂದು ನೆರೆದಿರ್ದ ರಾಜಲೋಕದ ನಡುವೆ ಜಲಧರಪಟಲಾಂತರಿತೇಂದುವಪ್ಪ ನಿಶಾಪ್ರಬಂಧಮನನುಕರಿಸಿ ತಿರೋಭೂತಚೇತನನಾದ ಚಂದ್ರಾಪೀಡದೇವನಂ ಕಂಡು ಕೆಟ್ಟೆನಿದೇನೆಂದು ತೊಟ್ಟನೆ ಮುಗ್ಧೆ ಮೂರ್ಛೆಗೆ ಸಂದು ನೆಲಕ್ಕೆ ಬೀೞ್ವನ್ನೆಗಂ ಪತ್ರಲೇಖೆಯುಂ ಕಾದಂಬರೀದೇವಿಯ ಕರತಲಮಂ ಬಿಟ್ಟು ನಿಶ್ಚೇತನೆಯಾಗಿ ಬಿದ್ದಳಿತ್ತಲನಂತರವೆಂತಾನುಂ ಕಿಱಿದು ಬೇಗಕ್ಕೆ ಕಾದಂಬರಿ ಲಬ್ಧಸಂಜ್ಞೆಯಾಗಿ

ಮರವಟ್ಟಂತೆ ವಿಮೂಢೆಯಂತೆ ಬರೆದಂತಾವಿಷ್ಟೆಯಾದಂತೆ ಕಂ
ಡರಿಸಿಟ್ಟಂತುಸಿರಿಕ್ಕಲುಂ ಮಱೆದು ಚಂದ್ರಾಪೀಡದೇವಾನನಾಂ
ಬುರುಹಸ್ತಂಭಿತದೃಷ್ಟಿ ಮೆಯ್ಯಱಿಯದೆಂತರ್ಮನ್ಯುಭಾರಾತಿಮಂ
ಥರೆ ಪೆಂಡಿರ್ಗಿದು ತಕ್ಕುದಲ್ತೆನಿಪವಸ್ಥಾಭೇದಮಂ ತಾಳ್ದಿದಳ್ ೨೭

ಅಂತು ತಾಳ್ದಿದ ಕಾದಂಬರಿಯ ಕಾಲ ಮೇಲೆ ಬಿದ್ದು ಮುಕ್ತಾರ್ತನಾದೆಯಾಗಿ ಮದಲೇಖೆಯಿಂತೆಂದಳ್

ಬಿಡು ನಿಜವೇನ್ಯ ಬಾಷ್ಪಬರವಂ ನುಡಿಗಂದುತುಮಿಂತು ದುಃಖಮಾಂ
ತೊಡೆ ಕಡೆಗೋಡಿವೋಗದೆ ಪೊನಲ್ ಪುರುಕರ್ಪ ತಟಾಕದಂದದಿಂ
ಮೊಡೆದಪುದಲ್ತೆ ನಿನ್ನ ಸುಮಕೋಮಲಮಪ್ಪೆರ್ದೆ ತಂದೆಯು ತಾಯು ಬಾಷ್ಪದಿಂ
ಬಿಡಿನೊಳದೆಂತುಮಿಲ್ಲ ತಿಳಿ ನೀಂ ಬಟಿಕಲ್ಲ ನೆಪೊಸ್ತ ಸುದ್ದಯುಂ ೧೮

ಎಂದು ನುಡಿಯೆ ವಿಹಸಿತವದನೆಯಾಗಿ ಕಾದಂಬರಿ ಮದಲೇಖೆಯ
ನಿಂತೆಂದಳ್

ಮರುಳೆ ನೀಂತಂಗೆಪೇಳ್ ಕಲ್ಲೆರ್ದೆಯೊಡೆಗುಮೇಂ ಮುಂದೆ ಮತ್ಕಾಂತನಿಂತಾ
ಗಿರೆಯುಂ ಪ್ರಾಣಂಗಳೆನ್ನಂ ಬಿಡವು ಬಿಡದೊಡೇನಾದುದೆಂತಾನು ವಿರಾಗಳ್
ದೊರೆಕೊಂಡತ್ತೀ ಮದೀಯ ಪ್ರಿಯತಮತನುವಿಂ ತಂದೆತಾಯ್ ಬಂಧುವರ್ಗಂ
ಪರಿವಾರಂ ಪಾಸದೇಕೀ ತನುವಿನ ಬಟಿಸಂದಿಂ ಕೃತಾರ್ಥರ್ಕಮಪ್ಪಂ ೧೯

ಅದಲ್ಲದೆಯುಂ

ಪಿಂವೆ ಸಮಸ್ತರಾಜ್ಯಪದಮಂ ಬಿಸುಟೆನ್ನಯ ದೂಸಱಿಂದವೆ
ಬಿಟ್ಟುಡೆನಗೊಪ್ಪುಗೊಟ್ಟು ನಿಜದೇಹಮನೀ ಮಹಿಪಂ ಗುರುತ್ವದಿಂ
ದೊಂದಿದನೀಗಳಾಂ ಬಱಿದೆ ಕಣ್ಬನಿಯಂ ಸುರಿಯುತ್ತುಮಿರ್ದೊಡಂ
ಬಂದಪುದೇನೊ ಪೇಳ್ ಕೆಳದಿ ಕೆಮ್ಮನೆ ಲಾಘವದಿಂದಮೊಂದುಮೇಂ ೨೦

ಅದು ಕಾರಣದಿಂ

ಸಾವುದೆ ಜೀವನಂ ದಲೆನಗೀ ಕಡುನಾಣ್ಗೆಡೆಯಾದ ಜೀವನಂ
ಸಾವೆಮ ತಂಗೆ ನೀನೆನಗೆ ಕೂರ್ಪುದು ನಿಕ್ಕುವಮಪ್ಪೊಡೆನ್ನಮೇಲ್
ಲಾಪರಿಸಿರ್ದ ಕೋರ್ಮೆಯನೆ ನಿನ್ನೊಳೆ ಮಾಡಿ ಮದೀಯ ಶೋಕದಿಂ
ಜೀವಮನೆಜ್ಜೆ ಪತ್ತುವಿಡದಂತಿರೆ ಮಾಡುವುದಾವುಪಾಯದಿಂ ೨೧

ಅದಲ್ಲದೆಯುಂ

ಅನುರಾಗದಿನಾನೆ ಕುಮಾ
ರನ ಪಟಮಂ ಬರೆದು ಸಜ್ಜವನೆಯೊಳ್ ಸಾರ್ಚಿ
ರ್ದನದಂ ಪೂಜಿಸುತಿರು ಕಾ
ಮನ ಪಟಮಂ ನೀಳ್ದು ಕಳೆ ವೃಥಾಪೂಜಿತಮಂ ೨೨

ಚಿರಕಾಲಂ ನಮೆದುವು ಪಂ
ಜರದೊಳ್ ಕಾಳಿಂದಿಯೆಂಬ ಸಾರಿಕೆಯುಂ ತ
ತ್ಪರಿಹಾಸನೆಂಬ ಗಿಳಿಯುಮ
ವೆರಡಂ ನೀಂ ತಂಗೆ ಬಿಟ್ಟು ಕಳೆ ಬಡವುಗಳಂ ೨೩

ಪದೆದೆನ್ನಯ ವೀಣೆಯನಿರಿ
ಪುದು ನಿನ್ನಯ ತೊಡೆಯ ಮೇಲೆ ಮತ್ತಂ ನಿನಗಾ
ವುದಪೇಕ್ಷಿತಮಾಗಿರ್ದ
ತ್ತದೆಲ್ಲಮಂ ನೀನೆ ಕೆಳದಿ ಕಯ್ಕೊಳ್ಳೀಗಳ್ ೨೪

ಆನಪ್ಪೊಡೆನ್ನ ಶರೀರಮಂ ಪ್ರಿಯತಮಶರೀರ ಸಂಯೋಗಾಹ್ಲಾದದಿನಾಱುಸಿದಪ್ಪೆನೆಂದು ತನ್ನಂ ಮದಲೇಖೆಯಿಂ ಬಿಡಿಸಿಕೊಂಡು ಲಬ್ಧಸಂಜ್ಞೆಯೆಂ ಚಿಂತಾಸ್ತಿಮಿತನಯನೆಯುಮಪ್ಪ ಮಹಾಶ್ವೇತೆಯುಂ ತಟ್ಕೈಸಿ ನಿರ್ವಿಕಾರವದನೆಯಾಗಿ

ಇನಿಯನ ಬರ್ಪುದಂ ನಿನಗೆ ಪಾರ್ದಿರವೇಳ್ಪುದು ಪುಂಡರೀಕದೇ
ವನೆ ಪತಿಯಪ್ಪನೆಂಬ ನುಡಿಯುಂ ಸಲೆ ಕಾರಣಮಾಗೆ ತಾಳ್ದು ನೀಂ
ತನುವನನೇಕಕಾಲವಿದನೆನ್ನಯ ಚಿಂತೆಯನಕ್ಕ ಮಾಣ್ಬುದಿಂ
ತೆನಗಿನಿತೊಂದು ಮೂಡುಗೆ ಭವಾಂತರದಲ್ಲಿ ಭವತ್ಸಮಾಗಮಂ ೨೫

ಎಂದನಂತರಂ

ಸುರಿಯೆ ಕಚಭಾರಹಸ್ತದಿ
ನೆರಲ್ಗಳ್ಗಾತ್ಮೋತ್ತಮಾಂಗದಿಂದರ್ಚಿಸಿದಳ್
ಸರಭಸಮಾಗಳ್ ಕಾದಂ
ಬರಿ ಚಂದ್ರಾಪೀಡದೇವ ಚರಣಾಂಬುಜಮಂ ೨೬

ಅಂತರ್ಚಿಸುತ್ತುಂ ವಿಗಳತ್ಸ್ವೇದಾರ್ದ್ರಾಂಗಳಪ್ಪ ಕರಕಮಲಂಗಳಿಂ ಪ್ರಿಯತಮನಂ ತೊಡೆಯ ಮೇಗಣ್ಗೆ ತೆಗೆದು ಮೊಗಮಂ ಬಿಡದೆ ನೋಡಿ ನಿಜಪ್ರಾಣಮಂ ಬಿಡಲುಜ್ಜುಗಂಗೆಯ್ವಾಗಳ್

ಅಮೃತಾಸಾರದಿನಾ ಪ್ರದೇಶಮನಿತುಂ ತ್ರೇಂಕಾಡಲಲ್ಲಿರ್ದ್ದರೆ
ಲ್ಲಮಿವೇಸೋ ಕಪಿತರ್ಪ್ಪದೀಗಳೆನುತುಂ ತಳ್ವೊಯ್ಯ ತಣ್ಪಿಂದಮೆ
ಯ್ದೆ ಮುಟ್ಟುಂಗುತ್ತಿರಲುಣ್ಮಿ ತೊವೊರ್ದಲೊಳವ್ಯಕ್ತಸ್ವರೂಪಂ ಸುಧಾಂ
ಶುಮಯೂಖೋಜ್ಜ್ವಲಮಂತರಿಕ್ಷತಲದೊಳ್ ಹೈಮಪ್ರಭಾಮಂಡಲಂ ೩೭

ಅಂತಾ ಪ್ರಭಾಮಂಡಲದ ದೆಸೆಯಿನಮೃತವೃಷ್ಟಿಯಂ ಪಸರಿಸುವಂತೆ
ದೊಂದು ದಿವ್ಯನಿನದಂ

ಒಸೆದಂದಾಂ ನಿನ್ನನಾಶ್ವಾಸಿಸಿದೆನೆಲೆ ಮಹಾಶ್ವೇತೆ ಮತ್ತಿಂದುಮಾಶ್ವಾ
ಸಿಸಲೆಟ್ಟಂದೆಂ ಮದೀಯಾಮೃತಮಯಕರಸಂದೋಹದಿಂ ನಿಚ್ಚಮಾನ
ರ್ಚಿಸುತ್ತಿರ್ದ್ದೆಂ ಪುಂಡರೀಕೋಜ್ಜ್ವಲವಪುವನದಿರ್ದ್ದತ್ತು ಮಲ್ಲೋಕದೊಳ್ನಿ
ನ್ನ ಸಮಾಯೋಗಾರ್ಥಮಿನ್ನುಂ ತೊಳಗಿ ಬೆಳಗುತುಂ ನಿತ್ಯರೂಪತ್ವ
ದಿಂದಂ ೩೮

ಇದು ದೇವರ್ ಯ್ಯೊಕ್ತ ಯೋಗೀಂದ್ರನ ತನುವಿನವೋಲ್ ಮುನ್ನಿನಂತಿರ್ಪ್ಪುದಂತ
ಲ್ಲದೆಯುಂ ಕಾದಂಬರೀದೇವಿಯ ಕರತಲಸಂಸ್ಪರ್ಶಮಂ ತಾಳಿ ಕೊಂಡಿ
ರ್ದ್ದಪು ದೇಹಂ ತೇಜೋಮಯವಿದು ಪತಿತೇಂ ನಿತ್ಯಮಾ ದೇಹಮಿಂ ದೇ
ಹದೆ ಚಂದ್ರಾಪೀಡದೇವಂ ಕತಿಪಯದಿನದಿಂದೇಕೆಯೊಳ್ ಕೂಡಿದಪ್ಪಂ ೩೯

ಅದಱಿನೀ ದೇಹಮನತಿಪ್ರಯತ್ನದಿನಾರಾಧಿಸುತ್ತಿರ್ಪ್ಪುದೆಂದು ನುಡಿ
ದು ಮಾಣ್ಬುದುಮಿದೇನೆನುತ್ತುಂ ಕಾದಂಬರಿವೆರಸು ಸಕಲರಾಜಲೋಕಂ
ವಿಸ್ಮಯಾಕ್ಷಿಪ್ತ ಹೃದಯರುಂ ಮಂದೀಕೃತ ಮರಣವ್ಯತಿಕರರುಮಾಗಿರ್ಪ್ಪುದು
ಮನಂತರಂ ಪತ್ರಲೇಖೆ ತತ್ಪ್ರಭಾಮಂಡಲಗಳಿತಹಿಮಸ್ಪರ್ಶದಿಂ ಲಬ್ಧ
ಸಂಜ್ಞೆಯಾಗಿ ಮರುಳ್ಗೊಂಡಂತಿಂದ್ರಾಯುಧಮಿರ್ಪ್ಪೆಡೆಗೆ ಪರಿತಂದು ಪರಿ
ವರ್ಧಕಹಸ್ತದಿಂದದಂ ತೆಗೆದು ವಾಹನಮಿಲ್ಲದೆ ಚಂದ್ರಾಪೀಡದೇವನೇ
ಕಾಕಿಯಾಗಿಂತು ದೂರಮೆಯ್ದುಲೆಮ್ಮನ್ನರಿರ್ಪ್ಪುದನುಚಿತಮೆಂದು ನುಡಿದಾ
ಯಿಂದ್ರಾಯುಧವನೊಡಗೊಂಡೆಚ್ಛೋದಸರದೊಳ್ ಮುಳುಂಗಲೊಡಂ

ಪೊರೆದು ಸರೋಜರೇಣುಗಳಿನೊಂದಱೊಳೊಂದು ತೊಡಂಕಿ ವಾಃಕಣೋ
ತ್ಕರದೊಡಗೂಡಿ ಕಣ್ಗೆ ಕಪಿತರ್ಪ್ಪ ಜಟಾಳಿಯನಿರ್ಕ್ಕಲಕ್ಕಮೋ
ಸರಿಸುತುಮಬ್ಜತಂತುವಿನ ಜನ್ನಿವರಂ ಸುರಭೂಜವಲ್ಕಮೊ
ಪ್ಪಿರೆ ಪೊಱಮಟ್ಟನಾ ಕೊಳದಿನಾಗಳದೊರ್ವ್ವ ಕುಮಾರತಾಪಸಂ ೪೦

ಅಂತು ಪೊಱಮಟ್ಟು ಸುಹೃದ್ವಿಯೋಗ ವಿಹ್ವಲಿತ ಹೃದಯನಪ್ಪ ಕಪಿಂಜಲನುದ್ಬಾಷ್ಪ ಪರ್ಯಾಕುಲ ವ್ಯಾಬದ್ಧಲಕ್ಷ್ಯದೃಷ್ಟಿಯಪ್ಪ ಮಹಾಶ್ವೇತೆಯನೆಯ್ದೆವಂದು

ಮಱುವುಟ್ಟಿಗನಾದನನೇ
ನೆಱಿವ್ರೋ ನೀನೆನ್ನನೆನೆ ಕಪಿಂಜಲಮುನಿಯೆಂ
ದಱಿದತಿಸಂಭ್ರಮದಿಂ ಬಂ
ದೆಱಗಿದಳಾ ಸತಿ ತದೀಯಚರಣದ್ವಯದೊಳ್ ೪೧

ಮುನಿಪತಿ ಲಜ್ಜೆಗಟ್ಟು ಬೆಸಗೊಂಡಪೆನೆಂತನೆ ಪುಂಡರೀಕದೇ
ವನ ಪೆಱಗಿಂತು ಜೀವಿಸುತುಮಿರ್ದಪಳೆಂ ಬೆಸಸಿಂ ಮಹಾನುಭಾ
ವನನೆರದುಯ್ದು ನಾವನಿರಿಸಿಟ್ಟನದೆಲ್ಲಿ ತದೀಯವಾರ್ತೆಯೇ
ನಿನಿತುವರಂ ವಿಲಂಬಿಸಿಯುಮೊರ್ವರೆ ಬಂದಿರಿದಾವ ಕಾರಣಂ ೪೨

ಎಂದ ಮಹಾಶ್ವೇತೆಗೆ ಕಪಿಂಜಲನಿಂತೆಂದಂ ನೀನೆಂದಂತು ಬಾಯ ಟಿದು ಪಟವಿಸುತ್ತಿರೆಯುಂ ನಿನ್ನನೇಕಾಕಿಯನೀಡಾಡಿ ವಯಸ್ಯಸ್ನೇಹದಿನಾಂ ಪುಂಡರೀಕನಂ ಕೊಂಡುಯ್ವ ಪುರುಷನ ಬೞಿಸಂದು ಮದೀಯಸಖನನೆತ್ತಲುಯ್ದಪೆಯೆಂಬುದುಮಾತನೆನಗೆ ಮಱುಮಾತುಗುಡದೆ ಗೀರ್ವಾಣಮಾರ್ಗದೊಳನೇಕ ವೈಮಾನಿಕಜನ ಪ್ರಣಮ್ಯಮಾನನುಂ ದಿವ್ಯಾಂಗನಾವಲೋಕ್ಯಮಾನನುಮಾಗಿ ಪೋಗುತ್ತುಮಂಬರಸರಃಕುಮುದಾಕರಮೆನಿಪ ತಾರಕಾಚಕ್ರಮನತಿಕ್ರಮಿಸಿ ಚಂದ್ರಲೋಕಮಂ ಪೊಕ್ಕು ಚಂದ್ರಕಾಂತಮಣಿಮಂಟಪದೊಳ್ ಪುಂಡರೀಕನ ಶರೀರಮನಿರಿಸಿ ನುಗುಳ್ದೆನ್ನಂ ನೋಡಿ

ಅಱಿಯಯ್ ಚಂದ್ರನೆನಾಂ ಕಪಿಂಜಲಕ ನೀನೀ ಪುಂಡರೀಕಾರ್ಥಮಿಾ
ತೆಱದಿಂ ಪಿಂದೆಬ್ದದೇಕೆ ಬಂದೆ ಗಡ ಲೋಕಾನುಗ್ರಹಂಗೆಯ್ವ ದೂ
ಸಱ್ಥಿನಾಂ ಬಂದುದಯಂಗೆಯುತ್ತುಮಿರಲೀ ಕಾಮಾತುರಂ ಸಾಯುತುಂ
ಬಱಿದಿಂತೆನ್ನನೆದೋಷಿಯಂ ಕುಱಿತು ಕೋಪೋದ್ರೇಕದಿಂ ನೋಡಿದಂ ೪೩

ಅಂತು ನೋಡಿ

ಎಲೆ ಚಂದ್ರಹತಕ ಮದನನ
ಬಲದಿಂದಂ ಮೇಲೆವರಿದು ಕೊಂದಿಂತೆನ್ನಂ
ನಿಲಲ್ ಱಿಯೆ ಯಿರ್ದೆ ನೀಂ ಮ
ರ್ತ್ಯಲೋಕದೊಳ್ ಪುಟ್ಟೆನುತ್ತೆ ಶಾಪಂಗೊಟ್ಟಂ ೪೪

ಇವನೆನಗೆ ನಿರಪರಾಧಂ
ಗೆವಿಚಾರದೆ ಶಾಪಮಿಾಯೆ ನೀನುಂ ಸುಖದುಃ
ಖವನೆನ್ನೊಡನೆನುಭವಿಸೆಂ
ದವಂಗೆ ಮುನಿದಾನುಮಂತು ಶಾಪಂಗೊಟ್ಟೆಂ ೪೫

ಅಂತು ಶಾಪವಿತ್ತಸ್ಮನ್ಮಯೂಖಸಂಭವೆಯರೆನಿಸಿದಚ್ಚರಸೆಯರೊಳು ದಯಿಸಿದ ಗೌರೀತನೂಜೆಯಪ್ಪ ಮಹಾಶ್ವೇತೆಯಿಂ ಸ್ವಯಂವೃತನಾದ ನಪ್ಪುದಱಿನೆಪಗತಾಮರ್ಷಣನಾಗಿ ಪುಂಡರೀಕನ ಶರೀರವಂ ಕಿಡದಂತು ತಂದು ಮತ್ತೇಜದಿಂದಾಪ್ಯಾಯಮಾನವಾಗೆ ಶಾಪಮೋಕ್ಷಪರ್ಯಂತ ಮಿರಿಸಿದಪೆಂ ನೀನುಮಿಾತನ ವೃತ್ತಾಂತಮನೆವರಯ್ಯನಪ್ಪ ಶ್ವೇತಕೇತು ವಿಂಗೆ ನಿವೇದಿಸಾ ಮಹಾನುಭಾವನೀತಂಗಾಯುಷ್ಕಾಮ ಹೋಮಾದಿ ಕಮನೊಡರ್ಚಿದಪನೆಂದೆನ್ನಂ ವಿಸರ್ಜಿಸುವುದುಮಾಂ ಸುಹೃಚ್ಛೋಕಾಂ ಧನೆಂ ಮಗುಟ್ದು ಮರ್ತ್ಯಮಾರ್ಗದೊಳ್ ಪರಿಯುತ್ತುಮೊರ್ವ ವೈಮಾನಿ ಕನಂ ಭರದಿಂ ದಾಂಟುವುದುಮಾತಂ ಕ್ರೋಧಾನಲದಿನೆನ್ನನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ

ಎಲೆ ದುಶ್ಶಿಕ್ಷಿತ ನಿನ್ನ ಕಣ್ಣೊಡೆದುವೇ ವಿಸ್ತೀರ್ಣಮಪ್ಪೀ ನಭ
ಸ್ಸ್ಥಲದೊಳ್ ಪೋಗುತ್ತುಮೆನ್ನನಿಂತುಱಿಪೆ ನೀಂ ನಿನ್ನೊಂದು ವಿದ್ಯಾತಪೋ
ಬಲದಿಂ ದಾಂಟಿವೆ ಪ್ರಾಹದಂತಿರದಱಿಂ ವಾಹತ್ವಮಂ ತಾಳ್ದಿ ಭೂ
ತಲದೊಳ್ ಪೋ ನೆಲಸೆಂದು ಕೊಟ್ಟನೆನಗಾ ವೈಮಾನಿಕಂ ಶಾಪಮಂ ೪೬

ಅಂತು ಶಾಪಂಗುಡಲಾಂ ನಡುನಡುಗಿ ಕಯ್ಗಳಂ ಮುಗಿದು ಮಹಾ ಪುರುಷಾ ನಿನ್ನನಾಂ ವಯಸ್ಯಶೋಕಾಂಧನೆಂ ಕಾಣದೆ ದಾಂಟಿದೆನಲ್ಲದವ ಜ್ಞೆಯಿಂ ದಾಂಟಿದನಲ್ಲೆನಾದೊಡಮೆನಗೆ ಶಾಪಾಂತಕಾರಣಮಂ ಬೆಸ ಸೆಂಬುದುಂ ನೀನಾವಂಗೆ ವಾಹನಮಾಗಿರ್ಪೆಯಾತಂ ಮಱುಮೆಯ್ಗ ನಲ್ಲ

ಸಮಯದೊಳಚ್ಛೋದ ಸರೋವರ ಸಲಿಲದೊಳ್ ಮುೞುಂಗೆ ವಿಗತಶಾಪ ನಪ್ಪೆಯೆಂದು ವೈಮಾನಿಕನೆನಗೆ ಪೇೞ್ವುದುಮಾನಾತಂಗೆ ಮತ್ತಮಿಂತೆಂದೆಂ

ಜನಿಯಿಸಿದಪರೆನ್ನಯ ಕೆಳೆ
ಯನುಮಾ ಚಂದ್ರಮನುಮಿನ್ನಿಳಾತಳದೊಳವರ್
ಜನಿಯಿಸಿದಲ್ಲಿಯೆ ಜನಿಯಿಸು
ವಿನಿತಂ ನೀಂ ದಯೆಯಿನೆನಗೆ ಮಾಡಲವೇೞ್ಕುಂ ೪೭

ತುರಂಗತ್ವಮೆನಗೆ ಮೂಡಿದೊಡಮೆನ್ನ ಕೆಳೆಯನೊಡಗೂಡಿ ಕಾಲಮಂ ಕಳಿಪುವಂತು ನಿನ್ನ ದಿವ್ಯಚಕ್ಷುಗಳಿಂ ನೋಡಿ ಬೆಸಸೆಂಬುದುಂ ಸದಯನಾಗಿ ತನ್ನೊಳ್ ಕಿಱಿದು ಬೇಗಂ ವೈಮಾನಿಕಂ ಜಾನಿಸಿ ತಿಳಿದೆನ್ನ ನಿಂತೆಂದನುಜ್ಜಯಿನಿಯೊಳಪತ್ಯಾರ್ಥಮನೇಕ ವ್ರತಾಚರಣತತ್ಪರನಪ್ಪ ತಾರಾಪೀಡನೆಂಬ ಚಕ್ರವರ್ತಿಗೆ ಸಕಲಕಲಾಭಿರಾಮನುಂ ವಿಬುಧಜನ ಸೇವ್ಯನುಂ ಕುವಲಯಾನಂದಕರನುಂ ಯಶಶ್ಚಂದ್ರಿಕಾಧವಳಿತಭುವನನು ಮೆನಿಸಿ ಚಂದ್ರಾಪೀಡನೆಂಬ ಪೆಸರಿಂ ಚಂದ್ರಮನೆ ಬಂದುದಯಿಸಿದಪ್ಪ ನಾತನ ಮಂತ್ರಿ ಶುಕನಾಸನೆಂಬಂಗೆ ನಿನ್ನ ಕೆಳೆಯನಪ್ಪ ಪುಂಡರೀಕಂ ವೈಶಂಪಾಯನನೆಂಬ ಪೆಸರಿಂ ಪುಟ್ಟಿದಪ್ಪನಾ ಚಂದ್ರಾವತಾರನೆನಿಸಿದ ರಾಜಕುಮಾರಂಗೆ ನೀಂ ವಾಹನವಾದಪ್ಪೆಯೆಂಬುದುಂ

ಅಂತಾ ವೈಮಾನಿಕ ವಚ
ನಾಂತದೊಳಾ ತುರಗರೂಪಮಂ ತಳೆದಾಕಾ
ಶಾಂತರದಿಂದಿೞಿದು ಸಮು
ದ್ರಾಂತರದೊಳ್ ಬಿೞ್ದೆನೆನ್ನ ಕರ್ಮಾಂತರದಿಂ ೪೮

ಅಂತು ಬೀೞ್ವುದುಂ ಪಾರಶೀಕಾಧಿರಾಜನೆನ್ನಂ ಕಂಡು ಪಿಡಿದುಯ್ದು ತಾರಾಪೀಡನರೇಂದ್ರಂಗೋಲೈಸೆ ತದೀಯನಂದನನೆನಿಸಿದ ಚಂದ್ರ ಮೂರ್ತಿಯಪ್ಪ ಚಂದ್ರಾಪೀಡಂಗೆ ವಾಹನಮಾಗಿರ್ದು ಕಿನ್ನರಮಿಥುನದ ಬೞಿಸಲ್ಕೆ ನೆವದಿಂ ನಿನ್ನಂ ಕಾಣಿಸಲೆಂದೀ ಚಂದ್ರಾವತಾರನನೀ ಪ್ರದೇಶಕ್ಕೆ ತಂದೆನೆಂಬುದುಂ ಹಾ ಮನಃಪ್ರಿಯ ಪುಂಡರೀಕ ಜನ್ಮಾಂತ ರಾವಿಸ್ಮೃತಮದನುರಾಗ ಮತ್ಪ್ರತಿಬದ್ಧಜೀವಿತ ಮನ್ಮಯಸಕಲಜೀವಿತ ಲೋಕ ಎಂದುದ್ಗತಶೋಕೆಯಾಗಿ

ಮುನ್ನವದೊರ್ಮೆ ಪಾತಕಿಯೆನಂತಿರೆ ಕೊಂದವಳೆಂ ಭವಾಂತರೋ
ತ್ಪನ್ನನೆಯಾಗಿಯುಂ ಮದನುರಾಗದಿನೆಟ್ಟರೆ ಮತ್ತೆ ಕೊಂದೆನಾಂ
ನಿನ್ನನೆ ನಿನ್ನನಿಂತು ಮಗುಟ್ದುಂ ಮಗುಟ್ದುಂ ಕೊಲವೇಟ್ಪುದೆಂದು ಪೇ
ಶನ್ನನಿದಿಂತು ಪುಟ್ಟಿಸಿದನೇ ವಿಧಿ ರಕ್ಕಸಿಯಂ ಮನಃಪ್ರಿಯಾ ೪೯

ಎಂದಿವು ಮೊದಲಾಗಿ ಬಹುಪ್ರಕಾರದಿಂ ಪಟಿವಿಸುವ ಮಹಾ
ಶ್ವೇತೆಯಂ ಕಪಿಂಜಲನಿಂತೆಂದಂ

ಹೃದಯಪ್ರಿಯನ ಸಮಾಗಮ
ನ ದೃಢಪ್ರತ್ಯಾಶೆಯಿಂದೆ ಘೋರತಪಃಕ್ಲೇ
ಶದಿನೊಂದಿ ನಿಂದೆಗೆಡೆಯ
ಲ್ಲದ ನಿನ್ನಂ ನೀನಿದೇಕೆ ನಿಂದಿಸಿದಪ್ಪಯ್ ೫೦

ಇದೆಲ್ಲಂ ಮದ್ವಯಸ್ಯಂಗಂ ಚಂದ್ರಾವತಾರಂಗಮೋರೊರ್ವರ
ಶಾಪದಿಂದಮೆ ಸಮನಿಸಿದುದು ನಿನ್ನ ದೋಷವಲ್ಲೆಂಬುದನಾನುಂ ನಿನಗೆ
ಪೇಟ್ದೆಂ ವಿಯತ್ತಳದೊಳಿರ್ದ ಚಂದ್ರನುಂ ತನ್ನ ದಿವ್ಯವಚನದಿನಾಱಿಸಿದು
ದುಮಂ ನೀನುಂ ಕಾದಂಬರಿಯುಂ ಕೇಳ್ದಿರದುಕಾರಣದಿನಶ್ರೇಯಸ್ಕರ
ಮೆನಿಪ್ಪ ಶೋಕಾನುಬಂಧಮನಿರ್ವರುಂ ಮಾಡಲಾಗದಭಿಲಷಿತಸಿದ್ಧಿ
ಗೆಂದಾವುದೊಂದು ಸದ್ವ್ರತಮನಾಚರಿಸುತ್ತಿರ್ದಿರದನೇ ನೀವನುಬಂಧಿಸು
ವುದದಲ್ಲದೆಯುಂ

ತಪದಿಂ ಸ್ಮರರಿಪುದೇಹಾ
ರ್ಧಪದದೊಳಾ ಗೌರಿ ನಿಂದವೋಲ್ ನಿಲ್ವಯ್ ನೀಂ
ತಪದಿಂದಿನಿಯನ ತೊಡೆಯೊಳ್
(ತಪದಿಂ ದೊರೆಕೊಳ್ಳದಿರ್ಪ ಫಲಮೊಂದುಂಟೇ) ೫೧

ಎಂದು ತಿಳಿಯವೇಟ್ದು ಮಹಾಶ್ವೇತೆಯಂ ಸಮಾಶ್ವಾಸಿಸಿದ
ಕಪಿಂಜಲನಂ ವಿಷಣ್ಣದೀನಮುಖಿಯಾಗಿ ಕಾದಂಬರಿಯಿಂತೆಂದಳ್

ಸಲಿಲಪ್ರವೇಶಮಂ ಪ
ತ್ರಲೇಖೆಯುಂ ನೀವುಮಲ್ತೆ ಮಾಡಿದಿರಂತಾ
ಲಲನೆಯದೇನಾದಳದಂ
ಜಲಕ್ಕನಾಗೆನಗೆ ಬೆಸಸಿಪಿರಾಗಳ್ ಮುನಿಪಾ ೫೨

ಎಂದು ಬೆಸಗೊಳ್ವುದುಂ ಕಪಿಂಜಲಕನೆಂದನಾಂ ಜಲಪ್ರವೇಶನಾನಂತರದ ವಾರ್ತೆಯನಱಿದೆನಿಲ್ಲದಱಿನೀ ಚಂದ್ರಾತ್ಮಕನಪ್ಪ ಚಂದ್ರಾಪೀಡನುಂ ಪುಂಡರೀಕಾತ್ಮಕನಪ್ಪ ವೈಶಂಪಾಯನನುಮೆತ್ತಿರ್ದರೆಂಬುದುಂ ಪತ್ರಲೇಖಾವೃತ್ತಾಂತಮೇನೆಂಬುದುಮನಱಿಯಲೆಂದೀಗಳಾಂ ಪ್ರತ್ಯಕ್ಷಲೋಕತ್ರಯನೆನಿಪ ಶ್ವೇತಕೇತು ಮಹಾಮುನಿಗಳಲ್ಲಿಗೆ ಪೋದಪ್ಪೆನೆಂದು ಗಗನತಳಕ್ಕೆ ನೆಗೆದು ಪೋದನನ್ನೆಗಮಿತ್ತ ಕಾದಂಬರಿ ಚಂದ್ರಾಪೀಡದೇವನಂ ನೋಡಿ ಕಣ್ಬನಿಗಳಂ ತೀವುವುದಂ ಮಹಾಶ್ವೇತೆ ನೋಡಿ ತಂಗೆ ನೀನಬಲಂ ತಳೆಯದಿರಾವಿರ್ವರುಂ ಸಮಸುಖದುಃಖವೃತ್ತಿಗಳಾದೆವದಱಿಂ ಪ್ರಿಯತಮ ಸಮಾಗಮ ಪ್ರತ್ಯಾಶೆಯಿಂ ಕರಣೀಯಮಾವುದದನೆ ಮಾಡವೇಳ್ಪುದದಱಿಂ

ಎನಗಿದು ದೈವಮೆಂದು ಮನದೊಳ್ ಪರಿಭಾವಿಸಿ ಕಲ್ಲ ಮಣ್ಣ ರೂ<br>
ಪನೆ ಗಡ ಪೂಜಿಸುತ್ತುಮಿರೆ ಸನ್ನಿದಮಾದಪುದೆಂದೊಡಕ್ಕ ನೆ<br>
ಟ್ಟನೆ ಮನುಜೇಂದ್ರಚಂದ್ರವೆಸರಿಂದೆಸೆವಗ್ಗದ ಚಂದ್ರಮೂರ್ತಿಯಂ<br>
ಮನವೊಸೆದರ್ಚಿಸುತ್ತುಮಿರೆ ಸನ್ನಿದನಪ್ಪುದಿದಾವ ಸಂದೆಗಂ ೫೩

ಎಂಬುದುಮದನೆ ಮನಂಗೊಂಡು ಶೀತವಾತಾತಪವರ್ಷಾದಿ ಸರ್ವದ್ವಂದ್ವ ದೋಷರಹಿತಮಪ್ಪದೊಂದು ರತ್ನಶಿಲಾತಲದೊಳ್ ಚಂದ್ರಾಪೀಡದೇವನಂ ನಿಲಿಸಿ ದಿವ್ಯವಸನ ಕುಸುಮಧೂಪಾನುಲೇಪನಾಭರಣಂಗಳಿನಲಂಕರಿಸಿ ತದೀಯಚರಣಂಗಳಂ ತೊಡೆಯ ಮೇಲಿಕ್ಕಿಕೊಂಡು ಪರಿಜನಮುಂ ರಾಜಲೋಕಮುಂ ಬೆರಸಂದಿನ ಪಗಲುಮನಿರುಳುಮಂ ಕಳೆದು ಮಱುದಿವಸಂ ಕಣ್ದೆಱೆದ ಚಿತ್ರದಂತಿರ್ದ ಚಂದ್ರಾಪೀಡನವಯವಂಗಳುಮನೆಲ್ಲಮನೆಟಿವಿನೋಡಿ ಕಾದಂಬರಿ ಕೆಲದೊಳಿರ್ದ ಮದಲೇಖೆಯುಂ ನೀನುಂ ಭಾವಿಸಿ ನೋಡೆಂಬುದುಮಾಕೆ ತದ್ದಿವ್ಯಾಕೃತಿಯ ಸಕಲಾಂಗಪ್ರತ್ಯಂಗಂಗಳಂ ನೋಡಿ

ನಗುವಂತಿರ್ದಪ್ಪುದಿಂತೀ ವದನಮುರುಳಿಗೊಂಡಿರ್ಪುದೀ ಕೇಶಮಿಾ ದೃ<br>
ಗ್ಯುಗಳಂ ಕರ್ನೆಯ್ದಿಲಂತಿರ್ದಪುದರುಣಿಮಮುಂ ಬೀಱುತಿರ್ದಪ್ಪುವೀ ಮಿಂ<br>
ಚುಗುರುಂ ಹಸ್ತಾಂಘ್ರಿಪದ್ಮಂಗಳುಮಧರಮುಮಿಾ ದೇಹಲಾವಣ್ಯಮಾದಂ<br>
ಮಿಗುತಿರ್ದತ್ತಾ ಮಹಾಭಾಗನ ನುಡಿಯಿದಱಿಂ ಸತ್ಯಮಾಗಿರ್ದುದಲ್ತೇ ೫೪

ಎಂದು ನುಡಿದ ಮದಲೇಖೆಯ ಮಾತಿನೊಳ್ ನಿರ್ಭರಾನಂದೆಯಾಗಿ ಕಾದಂಬರಿ ಮಹಾಶ್ವೇತೆಗಂ ಚಂದ್ರಾಪೀಡಚರಣತಳನಿಬದ್ಧಜೀವಿತಮಪ್ಪ ರಾಜಲೋಕಕ್ಕಂ ಪ್ರಿಯತಮಾಕೃತಿಯಂ ತೋಱಲೊಡಮವರ್ ವಿಸ್ಮಯೋತ್ಫುಲ್ಲಲೋಚನರುಮಾವಿಷ್ಕೃತಾನಂದರುಮಪ್ಪುದುಮನಂತರಂ ಸಖೀಜನಂಬೆರಸು ಚಂದ್ರಾಪೀಡದೇವನನಲಂಕರಿಸಿ ಶರೀರಸ್ಥಿತಿಕರಣಾರ್ಥಂ ಸಕಲರಾಜಲೋಕಮಂ ವಿಸರ್ಜಿಸಿ ಮಹಾಶ್ವೇತಾನುರೋಧದಿಂ ಕೃತಫಲಜಲಾಹಾರೆಯಾಗಿ ತದನಂತರಂ ಮದಲೇಖೆಗೆಂದಳೆನ್ನೆಗವೆನಗೀ ಮನೋಹರಂ ಸನ್ನಿದನಪ್ಪನನ್ನೆವರಮೀ ತೆಱದಿಂದಿರಲ್ವೇಡಿರ್ದುದಱಿಂ ವಿಸ್ಮಯಮಪ್ಪೀ ವೃತ್ತಾಂತಮನಾದ್ಯಂತಮಾಗಿ ತಾಯ್ತಂದೆಗಳ್ಗೆ ತಿಳಿಯವೇೞ್ದು ಸಮಾಧಾನಮಂ ಮಾೞ್ಪುದೆಂದಾಕೆಯುಂ ಬೇಗಂ ಪೋಗಲ್ವೇೞ್ದಂದಿನಂದದಿಂ ಚಂದ್ರಾಪೀಡಚರಣಕಮಲಂಗಳಂ ದೃಢಪ್ರತ್ಯಯದಿನಾರಾಧಿಸುತ್ತಿರ್ದಳನ್ನೆಗಮೊಂದು ದಿವಸಂ ಚಂದ್ರಾಪೀಡ ಚರಣಮೂಲೋಪವಿಷ್ಟೆಯಾದ ಕಾದಂಬರಿಯಲ್ಲಿಗೆ ಮೇಘನಾದಂ ಬಂದು ತಡೆದುದರ್ಕುತ್ಕಂಠಿತರಾಗಿ ತಾರಾಪೀಡದೇವನುಂ ವಿಲಾಸವತೀಮಹಾದೇವಿಯುಮಾರ್ಯ ಶುಕನಾಸನುಂ ವಾರ್ತಾಹರರನಟ್ಟಿದೊಡವರುಮರಸನಂ ಕಾಣಲೆಂದು ಬಂದಿರ್ದಪರಿಲ್ಲಿಗೆ ತಕ್ಕುದಂ ದೇವಿಯರೆ ಬಲ್ಲಿರೆಂದು ಬಿನ್ನವಿಸುವುದುಂ ಕಾದಂಬರಿ ಕಿಱಿದುಬೇಗಂ ತನ್ನೊಳೆ ಚಿಂತಿಸುತ್ತುಮೆಂತಾನುಂ ವಾರ್ತಾಹರರಂ ಬರವೇೞೆಂಬುದುಂ ಮೇಘನಾದಂ ತಂದು ಕಾಣಿಸೆ ಚಂದ್ರಾಪೀಡಚರಣಂಗಳ್ಗೆ ದೂರದೊಳೆ ಸರ್ವಾಂಗಾಲಿಂಗಿತ ಮಹೀತಳರಾಗಿ ಪೊಡವಟ್ಟು ಕುಮಾರನಂ ಕಾಣುತ್ತೆ ಕೌತುಕದಿಂ ಬಿನ್ನವದನರಾದ ವಾರ್ತಾಹರರಂ ನೀಡುಂ ನೋಡಿ ಕಾದಂಬರಿಯಿಂತೆಂದಳ್

ಇದು ಖೇದಪ್ರದಮಲ್ತು ವೃತ್ತಕಮಿದಾಶ್ಚರ್ಯಪ್ರದಂ ಮರ್ತ್ಯನೆಂ
ಬುದುಮೇಂ ಬೀ ವಿಭು ದೇವತಾತ್ಮನಿದನೀ ವಕ್ತ್ರೇಂದು ಪೇೞುತ್ತುಮಿ
ರ್ದುದೆ ದಲ್ ಪೇೞ್ವುದು ಪೋಗಿ ನೀವಿದಱನೀಗಳ್ ಬೇಗವಟ್ಟೋದ ತೀ
ರದೊಳಿರ್ದಂ ನೃಪಚಂದ್ರನೆಂಬಿದನೆ ರಾಜೇಂದ್ರಂಗೆ ನಿವ್ಯಾರ್ಕುಳಂ ೫೫

ಎಂಬುದುಮವರ್ ಕೆಲವಾನುಂ ದಿವಸಂಗಳಿನುಜ್ಜೈನಿಯನೆಯ್ದಿ ವಿಲಾಸವತೀಮಹಾದೇವಿವೆರಸಿರ್ದ ತಾರಾಪೀಡದೇವಂಗೆ ತಾಮಱಿದ

ವಾರ್ತೆಯಂ ಬಿನ್ನವಿಸಲೊಡಂ ನಿರತಿಶಯಶೋಕಾಕರಮುಂ ದುಶ್ಶ್ರವಮುಂ ವಿಸ್ಮಯೋತ್ಪಾದಕಮುಮತಿಕೌತುಕಜನಕಮುಮಪ್ಪ ವೈಶಂಪಾಯನನ ವೃತ್ತಾಂತಮಂ ತಾರಾಪೀಡದೇವಂ ಕೇಳ್ದು ಕೆಲದೊಳ್ ನಿರ್ವಿಶೇಷಾವಸ್ಥನಾಗಿರ್ದ ಶುಕನಾಸನ ಮೊಗಮಂ ನೋೞ್ಪುದುಮಾ ಮಂತ್ರಿಮುಖ್ಯಂ ತದವಸ್ಥನಾಗಿಯುಂ ಸುಹೃದ್ದುಃಖಾಪನೋದನಾರ್ಥಂ ಸ್ವಸ್ಥನಂದದಿಂ ನರೇಂದ್ರನನಿಂತೆಂದಂ

ಉದಯಿಕ್ಕುಂ ಪರಮೇಶ್ವರೇಚ್ಛೆಯೊಳೆ ಮೇಣ್ ಪ್ರಾಧಾನ್ಯದಿಂ ಮೇಣ್ ಸ್ವಕ
ರ್ಮದೆ ಮೇಣ್ ವಸ್ತುನಿಜಸ್ವಭಾವದೊಳೆ ಮೇಣ್ ವೈಚಿತ್ರ್ಯಮಂ ಕೂಡೆ ತಾ
ಳ್ದಿದ ಸಂಸಾರದೊಳೆಂದುಮಿಂತೆ ಸುಖದುಃಖಾದಿಪ್ರಸಂಗಕ್ಕೆ ಪು
ಟ್ಟಿದ ನಾನಾವಿಧಮಪ್ಪ ಭೂತನಿವಹಕ್ಕಾರಬ್ಧಕಾರ್ಯೋದಯಂ ೫೬

ತ್ರಿಜಗದ್ವಂದಿತನೆನಿಸಿ
ರ್ದ ಜನಾ ಜಮದಗ್ನಿಗಖಿಳಭುವನ ಪ್ರಭು ಪಂ
ಕಜನಾಭಂ ದಶರಥ ಭೂ
ಭುಜಂಗೆ ಸುತರಾದರೆಂಬುದಂ ಕೇಳೆಮೆ ದಲ್ ೫೭

ಜನಿಯಿಸುವರಲ್ತೆ ದೇವರ್
ಮನುಜರ್ಗದಱಿಂದೆ ಸಂದೆಯಂಬಡಲೇನಾ
ಮನುಜರ್ಗೇಂ ಕಿಱಿಯನೆ ನೀಂ
ವನರುಹನಾಭಂಗೆ ಚಂದ್ರನೇಂ ಕಿಱುಕುಳನೇ ೫೮

ಪಡೆದಾ ಕಾದಂಬರೀದೇವಿಗೆ ವರನೆ ಭವನ್ನಂದನಂ ಶಾಶ್ವತೈಶ್ವ
ರ್ಯದ ಪೆಂಪಂ ಲೋಕಪಾಲತ್ವದ ಮಹಿಮೆಯನುತ್ಸಾಹದಿಂ ತಾಳ್ದಿ ತದ್ದೇ
ಹದಿನಾದಂ ಭಕ್ತಿಯಿಂ ನಿನ್ನಡಿಗೆಱಗಿದಪಂ ತಾನೆ ಚಂದ್ರಂ ದಲೀ ಯಂ
ದುದಱಿಂ ಸ್ತೈಪಾವುದಾ ಶಾಪಮೆ ನಮಗೆ ವರಂ ಶೋಕಮಂ ಮಾಣ್ಬುದೀಗಳ್ ೫೯

ಎಂದು ಶುಕನಾಸಂ ತಿಳಿಯವೇೞೆ ತಾರಾಪೀಡನರೇಂದ್ರಂ ಶುಕನಾಸಂ ಬೆರಸು ವಿಲಾಸವತಿಮನೋರಮೆಯರೊಡನೆ ಗಮನಸಂವಿಧಾ

ನಮಂ ಮಾಡಿಯುದೆಲ್ಲಿಯುಂ ನಿಲ್ಲದೆ ಕೆಲದಿವಸಕ್ಕಚ್ಛೋದಮನೆಯ್ದಿ ಮೇಘನಾದಸಹಿತಂ ಬರುತಿರ್ದ ಚಂದ್ರಾಪೀಡಚರಣತಳನಿಬದ್ಧ ಜೀವಿತರಪ್ಪ ನಿಖಿಳರಾಜಪುತ್ರರಂ ಕಂಡು

ಎಂತುಟು ಮೇಘನಾದ ತೊಡಕಿಲ್ಲದೆ ಪೇೞ್ ಮಗನಿರ್ದದೊಂದು ವೃ
ತ್ತಾಂತಮನೆಂಬುದುಂ ಪ್ರತಿದಿನಂ ನೃಪಚಂದ್ರನ ದಿವ್ಯದೇಹದಿಂ
ಕಾಂತಿ ಪೊದಳ್ದು ಪರ್ವಿ ಗಗನಾಂತರಮಂ ಪುದಿದಿರ್ಪುದೀಗಳೇ
ನುಂ ತಡಪಿಲ್ಲ ಸನ್ನಿಹಿತನಾದಪನಲ್ತೆ ಭವತ್ತನೂಭವಂ ೬೦

ಎಂದು ಮೇಘನಾದಂ ಬಿನ್ನಪಂಗೆಯ್ಯೆ ಸಮುಪಜಾತ ಪ್ರತ್ಯಾಶೆಯಾಗಿರ್ದ ವಿಲಾಸವತೀಮಹಾದೇವಿಗಿಂತೆಂದಂ

ಅಮೃತಾಂಶುಮೂರ್ತಿಯೆನಿಸಿ
ರ್ದ ಮಗನನೀಕ್ಷಿಸಿ ಕೃತಾರ್ಥರಪ್ಪಂ ನಡೆ ಪೋ
ಪಮೆನುತ್ತೆ ಮಹಾಶ್ವೇತಾ
ಶ್ರಮಕ್ಕೆ ನಡೆತಂದನಂದು ತಾರಾಪೀಡಂ ೬೧

ಅನ್ನೆಗಮಿತ್ತ ಚಂದ್ರಾಪೀಡನ ಗುರುಜನದ ಬರವಂ ಮಹಾಶ್ವೇತೆ ಕೇಳ್ದು ಝೋಂಕನೆ ಕಣ್ಬನಿಗಳಂ ಸೂಸಿ

ಕರಗಿಸುತಿರ್ದಪೆಯೆನ್ನಂ
ಮರಣಮನೆನಗೇಕೆ ಮಾಡೆ ವಿಧಿಯೆನುತುಂ ನಿ
ತ್ತರಿಸದೆ ಲಜ್ಜಿಸಿ ಪೊಕ್ಕಳ್
ಪರಿದು ಮಹಾಶ್ವೇತೆ ನಿಜಗುಹಾಭ್ಯಂತರಮಂ ೬೨

ಗಂಧರ್ವರಾಜನಂದನೆಯುಂ ಮೋಹಾಂಧಕಾರಂ ಕವಿಯೆ ಚಂದ್ರಮೂರ್ತಿಯಪ್ಪ ಚಂದ್ರಾಪೀಡನ ಪಕ್ಕದೊಳ್ ಸಖೀಜನಹಸ್ತಾವಲಂಬಿತಶರೀರೆಯಾಗಿ ಮೂರ್ಛೆವೋಗಿರ್ದಳಿತ್ತ ಶುಕನಾಸಾವಲಂಬಿತಶರೀರನಾಗಿ ತಾರಾಪೀಡಂ ತದಾಶ್ರಮಮಂ ಪುಗುವುದುಮಲ್ಲಿ ತನ್ನ ಮಗನೆತ್ತವೋದನೆಂದು ನೀಡುಂ ನೋಡುತುಂ ಮನೋರಮಾವಲಂಬಿತಶರೀರೆಯಾಗಿ ವಿಲಾಸವತೀಮಹಾದೇವಿ ಪೊಕ್ಕು ಸಹಜಮಪ್ಪ ಕಾಂತಿಯೊಳೊಪ್ಪಂಬಡೆದು ಲೆಪ್ಪದಂತಿರ್ದ ಮಗನಂ ಕಂಡು

ಮಱುವಾತಂ ಕುಡು ವತ್ಸ ನಿನ್ನ ವಿನಯಂ ಪೇೞೆತ್ತವೋಯ್ತಿಗಳೀ
ತೆಱನೇಕಾದುದೊ ಕಂದ ಕಾಲ್ವಿಡಿದಪೆಂ ನಿಮ್ಮಯ್ಯನೀ ಬಂದನ
ಟ್ಱಱುಸಿನೊಳ್ ನೀನಿದಿರೆೞ್ದು ಕಾಲ್ಗೆಱಗು ಚಂದ್ರಾಪೀಡ ನೀಂ ಭಕ್ತಿಯಂ
ಮಱೆದಯ್ ನಿನ್ನಯ ಕೂರ್ಮೆಯೆಲ್ಲಿತೆನುತುಂ ಬಾಯ್ವಿಟ್ಟು
ಪುಯ್ಯಲ್ಚಿದಳ್ ೬೩

ಬಿಡದಾಲಿಂಗಿಸಿ ಪುತ್ರನಂ ಪದೆದು ಮೂರ್ಧಘ್ರಾಣಮಂ ಮಾಡಿ ಕ
ನ್ನಡಿಯಂತಿರ್ದ ಕದಂಪನೊತ್ತಿ ಕಡುಪಿಂದಿನ್ನೇವೆನಾನೆಂದು ಕೇ
ಸಡಿಯಂ ನೆತ್ತಿಯೊಳಿಟ್ಟುಕೊಂಡು ಪಿರಿದೊಂದಾಕ್ರಂದದಿಂ ಗಂಟಲಂ
ದೊಡೆವಂತಾಗಱುತಿರ್ದಳಿರ್ದೆನೆಗವೆಟ್ಟಿಂದಂ ಧರಾಧೀಶ್ವರಂ ೬೪

ಅಂತು ಬಂದಂತರಿತ ನಿಜಪೀಡನಪ್ಪ ತಾರಾಪೀಡಂ ಚಂದ್ರಾಪೀಡನಂ ಪ್ರಜಾಪೀಡಾಪಹರಣಕ್ಷಮಂಗಳಪ್ಪ ಬಾಹುದ್ವಯದಿನಪ್ಪಿ ವಿಲಾಸವತೀಮಹಾದೇವಿಗಿಂತೆಂದಂ

ಬಸಿಱೊಳ್ ಬಂದಂ ನಮ್ಮೊಂ
ದು ಸುಕೃತದಿಂ ದೇವತಾತ್ಮನೀ ಮಗನಂ ಮಾ
ನಿಸನೆಂದು ದೇವಿ ನೀಂ ಭಾ
ವಿಸಿ ಶೋಕಮನೇನನಪ್ಪುಕಯ್ಯದಿರೀಗಳ್ ೬೫

ಮತ್ತಂ ವೈಶಂಪಾಯನ ವಿಯೋಗದಿಂ ವಿಹ್ವಲಿತರಾದ ಮನೋರಮೆಯುಮಂ ಶುಕನಾಸನುಮಂ ನಾವೀಗಳಾವ ತೆಱದಿಂ ಸಂತೈಸಲ್ವೇಟ್ಪುದದಲ್ಲದೆಯುಂ ತ್ವದಾತ್ಮಜಾತಜೀವಿತ ಪ್ರಲಬ್ಧಾಭ್ಯುದಯ ಮಹೋತ್ಸವೆಯಪ್ಪ ಗಂಧರ್ವರಾಜತನೂಜೆ

ನಿನ್ನಯ ಸೊಸೆ ಕಾದಂಬರಿ
ಯುಂ ನಾಡೆಯುಮಾದ ಮನ್ಯುವಿಂದಂ ಮೂರ್ಛಾ
ಪನ್ನೆಯೆನಿಸಿರ್ದಳೆಚ್ಚಱ
ಸನ್ನೆವರಂ ದೇವಿ ತೊಡೆಯ ಮೇಲಿಟ್ಟೀಗಳ್ ೬೬

ಎಂದು ತಾರಾಪೀಡಂ ನುಡಿಯೆ

ಅತಿಸಂಭ್ರಮದಿಂದಂ ಸತಿ
ಸುತನಂ ಬಿಟ್ಟೆಲ್ಲಿದಳ್ ಮದನ್ವಯಜೀವ
ಪ್ರತಿಲಂಭನಹೇತುವೆನು
ತ್ತ್ರತಿಸಂಮೋಹದೊಳೆ ಹೃದಯಮಂ ತಾನೆಱಪಿ ೬೭

ಮಗಳೆ ತೆಱೆ ನೀಂ ಕಣ್ಣಂ ನೀನಿಲ್ಲದನ್ನೆಗವಾಸೆಯಿ
ಲ್ಲ ಗಡ ಬೞಿಯಂ ಚಂದ್ರಾಪೀಡಾಂಕನಂ ಪಿಡಿದಟ್ಟಱಿಂ
ದಗಲದಿನಿತುಂ ಕಾಲಂ ಪೊರ್ದಿರ್ದೆ ನೀನಮೃತಾಂಗಿಯಯ್
ಮಗುೞ್ದುಮದಱಿಂ ಕಂಡೆಂ ರಾಜೇಂದ್ರಚಂದ್ರನ ವಕ್ತ್ರಮಂ ೬೮

ಎಂದು ವಿಲಾಸವತೀಮಹಾದೇವಿ ನುಡಿಯೆ ಚಂದ್ರಾಪೀಡ ನಾಮ ಗ್ರಹಣದೊಳಂ ಪ್ರಿಯತಮಸ್ಪರ್ಶನಿರ್ವಿಶೇಷಮಪ್ಪ ಕರಸ್ಪರ್ಶದೊಳಂ ಮೂರ್ಛೆಯಿಂದೆೞ್ಚತ್ತು ನೋಡಿ ನಮ್ರಮುಖಿಯಾದ ಕಾದಂಬರಿಯಂ ಮದಲೇಖೆ ಮೆಲ್ಲನೆತ್ತಿ

ಪ್ರತಿಪತ್ತಿಮೂಢೆಯೆನಿಸಿ
ರ್ದ ತರುಣಿಯಂ ಗುರುಜನಕ್ಕೆ ಪೊಡೆವಡಿಪುದುಮಾ
ಸತಿಯಂ ಪರಸಿದರಾಯು
ಷ್ಮತಿ ನೀಂ ನಿಚ್ಚೆಯ್ದೆಯಾಗೆನುತ್ತವರಾಗಳ್ ೬೯

ಅಂತು ಪರಕೆಯಂ ಪರಸಿ ತಾರಾಪೀಡನರೇಂದ್ರಂ ಕಿಱಿದುಬೇಗ ಮಿರ್ದಲ್ಲಿಂ ಪೊಱಮಟ್ಟು ಮುನ್ನೆ ಕಲ್ಪಿತಮಾದ ನಿವಾಸಕ್ಕೆ ಪೋಗಿ ಪೆಱ ತೊಂದಾಶ್ರಮದೊಳೆಸೆವ ಶಿಲಾತಲಸನಾಥಮಪ್ಪ ತರುಲತಾಮಂಟಪ ದೊಳ್ ಕುಳ್ಳಿರ್ದು ಸಮದುಃಖಿಗಳಪ್ಪ ಮಂತ್ರಿಶುಕನಾಸನುಮನಖಿಲನಿಜಾ ನುಗತರಾಜಚಕ್ರಮುಮಂ ಕರೆದವರೆಲ್ಲರುಮನಿಂತೆಂದಂ

ಇದು ಶೋಕೋದ್ರೇಕದಿಂದಂ ನುಡಿದ ನುಡಿಯುನಲ್ವೇಡ ಮಚ್ಚಿತ್ತ ದೊಳ್ ತಾ
ಳ್ದಿದುದಂ ನಾನಾಡಿದಪ್ಪೆಂ ವಧುವೆರಸಿದ ಪುತ್ರಂಗೆ ಮದ್ರಾಜ್ಯಭಾರಾ
ಸ್ಪದಮಂ ಕೊಟ್ಟೊಂದು ಖಷ್ಯಾಶ್ರಮದೊಳೆ ತನುವಂ ಮುಪ್ಪಿನೊಳ್ ತೇದು ಮೋಕ್ಷಾ
ಸ್ಪದಮಂ ಕಯ್ಕೊಳ್ವೆನಾನೆಂದಿರೆ ವಿಧಿವಶದಿಂದಿಂತುಟೊಂದಾದುದೀಗಳ್ ೭೦

ಆರಿರ್ದೊಡದೇಂ ರಾಜ್ಯದ
ಭಾರಂ ನಿಮ್ಮಿಂದವಪ್ಪುಕಯ್ಯುದು ನೀವಾ
ಭಾರಮನಾಂ ಸುಖರಹಿತಶ
ರೀರದ ಪರಲೋಕಸುಖಮನಿನ್ ಸಾಧಿಸುವೆಂ ೭೧

ಎಂಬುದುಮಾ ಸಕಲರಾಜಲೋಕಂ

ಇದನೇನೆಂದಪ್ಪಿರೆಲ್ವಿತ್ತಖಿಲಭುವನಸಾಮ್ರಾಜ್ಯಮಂ ತಾನೆ ದಲ್ ತಾ
ಳ್ದಿದಪಂ ರಾಜೇಂದ್ರಚಂದ್ರಂ ಪೆಱಗಿದು ತಳೆಯಲ್ಕಕ್ಕುಮೇ ದೇವ ನೀವಾ
ದುದನಾನಾದಪ್ಪೆವೆಂದೆಲ್ಲರುಮನೆ ಪರಿವಾರಾನ್ವಿತಂ ರಾಜ್ಯದೊಳ್ ನಿ
ಲ್ಲದೆ ನಾವಿರ್ಪಂತಿರಿರ್ದಂ ಮುನಿವಿನುತತಪೋರಾಜ್ಯದೊಳ್ ಸಾರ್ವಭೌಮಂ ೭೨

---

## ೮. ಚಂದ್ರಾಪೀಡ ಕಾದಂಬರಿಯರ ಪುನಸ್ಸಮಾಗಮ

ಎಂದಾ ಹಾರೀತನಾಮಪ್ರಮುಖ ಮುನಿಸಮೂಹಕ್ಕೆ ಜಾಬಾಲಿಗಳ್ ಪೇ
ೞ್ವಂದುಂ ಮಂದಸ್ಮಿತಾಸ್ಯರ್ ಕಥೆಯ ರಸದೊಳೋಲಾಡುತುಂ [ಪೊೞ್ತನಿತಾ
ಯ್ತೆಂದುಂ ಮಚ್ಚಿತ್ತದೊಳ್ ಭಾವಿಸದೆ ಮಱೆದು ಪೇೞುತ್ತಮಿಂತಿರ್ಪಮೇ [ಪೇ
ೞೆಂದೆನ್ನಂ ನೋಡಿ ಕೇಳ್ ಶೂದ್ರಕನೃಪ ಕೆಲದೊಳ್ ಕೇಳ್ವವರ್ಗೆಂದ
ರಾಗಳ್ ೧

ಆಪೊನ್ ಶ್ವೇತಕೇತುವ್ರತಿಗೆ ಸುತನೆನಲ್ ಸಂದು ಕಾಮಿತ್ವದಿಂ ದೇವತ್ವಂಗೆಟ್ಟು ಮರ್ತ್ಯೋದ್ಭವನೆನಿಸಿ ಶುಕನಾಸಂಗೆ ಪುಟ್ಟಿರ್ದನೋ ಆ ವೈಶಂಪಾಯನಂ ಮಹಾಶ್ವೇತಾ ವಾಕ್ಸಾಮರ್ಥ್ಯದಿಂ ಗಿಳಿಯ ಬಸಿಱೊಳೀಯಂದದಿಂ ಬಂದನಲ್ತೇ

ಅಂತು ಮುನಿ ಪೇೞಲೆಟ್ಟ
ತ್ತಂತೆಪ್ರೊಲವಾಗೆ ಬಾಲ್ಯದೊಳವೆನ್ನಯ ಜ
ನ್ಮಾಂತರದೊಳ್ಸಾಧ್ಯ ವಿದ್ಯಾ
ಸಂತತಿ ಜಿಹ್ವಾಗ್ರದಲ್ಲಿ ನೆಲಸಿದುದಾಗಳ್ ೨

ಅದಲ್ಲದೆಯುಂ ವಿಜ್ಞಾತ ಸಕಲಾನ್ಯಜನ್ಮವೃತ್ತಾಂತನೆನಾಗಿ ತಾಯಂ ತಂದೆಯಂ ತಾರಾಪೀಡದೇವನುಮಂ ವಿಲಾಸವತೀಮಹಾದೇವಿಯುಮಂ ಚಂದ್ರಾಪೀಡದೇವನುಮಂ ಮುನ್ನಿನ್ನ ಕೆಳೆಯನಪ್ಪ ಕಪಿಂಜಲನುಮಂ ನೆನೆದಂ ಮಹಾಶ್ವೇತೆಯೊಳಾದ ಕೂರ್ಮೆ ನೂರ್ಮಡಿಸೆ ನೆನೆನೆನೆದೆನ್ನ ಕಾಮಪರತೆಗಾಂ ನೆಲದೊಳ್ ತಲೆಯಂ ಕುತ್ತಿ ಕಿಱಿದುಬೇಗಮಿರ್ದು ನಿಜಾಪಿನ್ನಯಶ್ರವಣಲಜ್ಜೆಯಿಂ ಕರಗುವಂತೆಯುಂ ಪಾತಾಳಮಂ ಪುಗುವಂತೆಯುಮಾಗಿಂತೆಂದೆನದೆಂತೆನೆ

ಮುನ್ನಿನ ಭವಮುಂ ಬಂಧುಗ
ಳಂ ನೆಱೆ ತಿಳಿವೆಱುತಮಾಯ್ತು ಭವದೀಯಪದಾ
ಸನ್ನತೆಯಿಂದಾದೊಡಮೇಂ
ಬಿನ್ನವಿಸಿದಪೆಂ ಮುನೀಂದ್ರ ನಾಣ್ಚದೆ ಮತ್ತಂ ೩

ಜಾತಿಸ್ಮರತೆ ವಿರಕ್ತಿಗೆ
ಪೇತುವೆನುತ್ತಿರ್ಪ್ಪುದುವೆ ಪುಸಿಯಾಗಿ ಮಹಾ
ಶ್ವೇತೆಯೊಳಾದೊಂದನುರಾ
ಗಾತಿಶಯಂ ಪೆರ್ಚಿದಪುದು ಮುನ್ನಿಂದೀಗಳ್

ಅದಲ್ಲದೆಯುಂ ಮದ್ವಿಪತ್ತಿಶ್ರವಣಮಾತ್ರದಿಂ ಸ್ಫುಟಿತಹೃದಯನಾದ ಚಂದ್ರಾಪೀಡನಲ್ಲಿ ಪುಟ್ಟಿದನೆಂಬುದಂ ಬೆಸಸಲ್ವೇೞ್ಕುಮಾಂ ತಿರ್ಯಗ್ಜಾತಿಯಾದೊಡಮಾತನಂ ನೋೞ್ಪಿ ಕೃತಾರ್ಥನಪ್ಪೆನೆಂಬುದುಮಾ ಮುನೀಂದ್ರನೆನ್ನಂ ಮುನ್ನಿನಂತೆ ನೋಡಿ ನಿಜಸ್ನೇಹವಚನದಿನೆನ್ನನಿಂತೆಂದಂ

ಮಱೆದಯ್ ತರಳತೆಯಿಂದೀ
ತೆಱನಾದುದನೆಲೆ ದುರಾತ್ಮ ಪಾಱಲ್ ಮತ್ತಂ
ಮಱುಗುತ್ತಿರ್ದಪೆಯಿನಿಸಂ
ಗಱಿ ಮೂಡಿದ ಬೞಿಕೆ ನೀನೆ ದಲ್ ಪೋದಪ್ಪಯ್ ೫

ಎಂದು ಜಾಬಾಲಿಗಳ್ ನುಡಿದು

ತ್ತವುತಿರ್ದತ್ತಲೆ ತಾರಾಸಮುದಯಮಿದೊ ಪಂಪಾಸರಸ್ತೀರಸುಪ್ತೋತ್ಥವಿಹಂಗಧ್ವನಿಪೀ ಪೊಣ್ಮುವುದು ವನಲತಾಳಿಪ್ರಸೂನಾವಳೀಗಂಧವಹಂ ಮೆಲ್ಪಿಂದೆ ದಲ್ ಮತ್ತಿರದೆಸೆವ ನಿಶಾಸಂಘಸಂಮುರ್ದದೊಂದುತ್ಸವದಿಂ ತಣ್ಗಂಪನೇ ಬೀಱಿದಪುದು ಬೆಳಗಾಯ್ತೀನನಿನ್ ಪೇೞ್ವೆನೀಗಳ್

ಎಂದು

ನಿಷ್ಠಾಪರಂ ಪ್ರಭಾತಾ
ನುಷ್ಠಾನನಿಮಿತ್ತಮಟ್ಟನಲ್ಲಿಂದಂ ತ
ದ್ಗೋಷ್ಠಿಯನುೞಿದು ಮುನೀಂದ್ರಗ
ರಿಷ್ಠಂ ಜಾಬಾಲಿನಾಮಧೇಯ ಮುನೀಂದ್ರಂ ೭

ಸಕಲಮುನಿವ್ರಜಮಿರೆ ತಾ
ನೆ ಕರುಣದಿಂ ಕೊಂಡುಪೋಗಿ ಮೆಲ್ಲನೆ ಹಾರೀ
ತಕುಮಾರಂ ತನ್ನಯ ಪ
ರ್ಣಕುಟೀರದ ಶಯನತಳದೊಳಿರಿಸಿದನೆನ್ನಂ ೮

ಅನ್ನೆಗಂ ಪ್ರಾಭಾತಿಕಕ್ರಿಯಾನಿಮಿತ್ತಂ ಹಾರೀತಂ ಪೋದನಿತ್ತ ಸಕಲ ಕಾರ್ಯಾಕ್ಷಮಮಪ್ಪ ತಿರ್ಯಗ್ಜಾತಿಯೊಳ್ ಬಿಬ್ದು ಚಿಂತಾಪೀಡಿತನಾಗಿ

ಪಡೆಯಲ್ ಬಾರದು ಮುನ್ನನಂತಭವದೊಳ್ ಮಾನುಷ್ಯಮಂ ಮತ್ತೆಯುಂ
ಪಡೆಯಲ್ ಬರ್ಕುಮೆ ವಿಪ್ರಜಾತಿಯನದಂ ಪೆತ್ತುಂ ಮುನೀಂದ್ರತ್ವಮಂ
ಪಡೆಯಲ್ ಬರ್ಕುಮೆ ಮತ್ತಮಾರ್ಗೆ ಪಡೆಯಲ್ ದೇವತ್ವಮಂ ನೋಡದಂ
ಪಡೆದಾನಿಂತಿರೆ ಶಾಪದಿಂದಕಟ ತಿರ್ಯಗ್ಜಾತಿಯೊಳ್ ಬಿಬ್ದನೇ ೯

ಶೋಕಶತಾಕುಲಮುಂ ದುಃ
ಖಾಕರಮುಮೆನಿಪ್ಪ ಮಾಯ್ದ ಮತ್ಕಾಯಮನಿ
ನ್ನೇಕೆ ಗಡ ಪಿಡಿದಪೆಂ ನಿ
ರ್ವ್ಯಾಕುಲದಿಂ ಬಿಡುವೆನೆಂದು ಚಿಂತಿಸುವಿನೆಗಂ ೧೦

ಚಿಂತಾಕುಲಿತನನಾಱಿಸು
ವಂತಿರೆ ಮೊಗಮಲರ್ದು ನಸುನಗುತ್ತುಂ ಹಾರೀ
ತಂತೊಟ್ಟನೆ ಪರ್ಣಕುಟೀ
ರಾಂತರಮಂ ಪೊಕ್ಕು ಪದಪಿನಿಂದಿಂತೆಂದಂ ೧೧

ಎಲೆ ವೈಶಂಪಾಯನ ತ
ನ್ನೊಲವಿಂದಂ ಬಂದನೀಗಳೞಿಸುತ್ತೆ ಕಪಿಂ
ಜಲನಿಲ್ಲಿಗೆ ನಿನ್ನಂ ಪಂ
ಬಲಿಸುತ್ತುಂ ಶ್ವೇತಕೇತುಯತಿಗಳ ಕೆಲದಿಂ ೧೨

ಎಂಬುದುಮಾಕ್ಷಣದೊಳುತ್ಪನ್ನಪಕ್ಷನಾದಂತೆಗೆಯ್ದು ನೋಡಲುತ್ಕಂಠಿತನಾಗಿ ಮದ್ವಯಸ್ಯನೆಲ್ಲಿರ್ದನಾವೆಡೆಯೆನೆ ಹಾರೀತಂ ಮತ್ತಾತಪಾದಮೂಲದಲ್ಲಿಗೆ ವಂದನೆಂಬುದುಮತ್ತಲೆ ಕಣ್ಣಾಗಿರೆ

ಬೞಲೆ ಪೆಗಲಿಂ ಚಂಚದ್ವಲ್ಕಾಂಚಲಂ ಪೆಗಲಿಂಗೆ ಬಂ
ದೞಲೆ ಜಡೆಗಳ್ ಮುಯ್ವಿಂ ಯಜ್ಞೋಪವೀತಮದೊಯ್ಯನಂ
ದ್ದೞಿಯೆ ಪರಿಪಟ್ಪ್ರೋರಂತಾಕಾಶಮಾರ್ಗದೆ ಬಂದು ಪಾ
ಡೞಿದ ಸಖನಂ ಮುಂದಾಂ ಕಂಡೆಂ ಕಪಿಂಜಲನಂ ನೃಪಾ ೧೩

ಅಂತು ಕಂಡು ಕಣ್ಣನೀರ್ಗಱಲುಣ್ಮೆ ಭೋಂಕನಿದಿರೇೞಲ್ಪುಗಂಗೆ ಯ್ದೆನ್ನ ಕೆಳೆಯನಪ್ಪ ಕಪಿಂಜಲನನಿಂತೆಂದೆಂ

ದೊರೆಕೊಂಡತ್ತು ಭವದ್ವಯಾಂತರದೊಳೀಗಳ್ ಕಾಣ್ಕೆ ಕಂಡೇನೊ ಚೆ
ಚ್ಚರಮೆೞ್ದಪ್ಪುವ ಕುಳ್ಳಿರಲ್ ಕುಡುವ ನಿನ್ನೀ ಸೇದೆವಟ್ಟಂಗಮಂ
ಕರದಿಂದೆತ್ತಿ ಬೞಲ್ಕೆಯಂ ಕಳೆವುದರ್ಕಾಂ ನೋಂತೆನಿಲ್ಲಣ್ಣ ನೀಂ
ಬರೆಯುಂ ಪಾಪಿಯನೇವೆನೆಂದು ಪಿರಿದುಂ ಶೋಕಾಂಧನಾಗಿರ್ಪಿನಂ ೧೪

ಎತ್ತಿ ಕರಂಗಳಿಂದೆ ನಿಜಬಾಷ್ಪನಿರುದ್ಧಮೆನಿಪ್ಪ ಕಣ್ಗಳಿಂ
ದೊತ್ತಿ ಶರೀರದೊಳ್ ಪುಗಿಸಿಕೊಂಡಪನೆಂಬಿನಮಾದಮಪ್ಪುತುಂ
ಚಿತ್ತದಲಂಪಿನಿಂ ಕಿಱುಳನಂತಿರಲೆನ್ನಯ ಮಾಯ್ದ ಕಾಲ್ಗಳಂ
ನೆತ್ತಿಯೊಳಿಟ್ಟುಕೊಂಡೞುತುಮಿರ್ದನೞಲ್ದನಸುಂ ಕಪಿಂಜಲಂ ೧೫

ಅಂತೞುತಿರ್ದನಂ ವಾಙ್ಮಾತ್ರಪ್ರತೀಕಾರನೆನಿಂತೆಂದೆಂ

ಮೊದಲೊಳ್ ಪೞಿದಯ್ ಸಂಸಾ
ರದ ತೊಡರಂ ನಿಂದೆ ಮುಕ್ತಿಪದದೊಳ್ ನಿನಗಿಂ
ತಿದು ತಕ್ಕುದೆ ಮೂಢರ ಮಾ
ರ್ಗದಿನೆನಗೆ ಜಡಂಗಿರ್ದೇಕೆ ಶೋಕಂಗೆಯ್ವಯ್ ೧೬

ಜನಕಂ ಕುಶಲದಿನಿರ್ದನೆ
ನೆನೆವನೆ ಮಾಯ್ದೆನ್ನ ವಾರ್ತೆಗೇಳ್ದೇನೆಂದಂ
ಮನದೊಳ್ ಖೇದಿಸಿದನೆ ಮುನಿ
ದನೆ ಪೇೞೆಂದೆನ್ನ ಕೆಳೆಯನಂ ಬೆಸಗೊಂಡೆಂ ೧೭

ಅನ್ನೆಗಂ ಹಾರೀತಶಿಷ್ಯೋಪನೀತಪಲ್ಲವಾಸನದೊಳ್ ಕುಳ್ಳಿರ್ದು ತನ್ನ ತೊಡೆಯ ಮೇಲೆನ್ನನಿರಿಸಿ

ತಂದೆಗೆ ಕುಶಲಂ ನಮಗಾ
ದಂದಮುಮಂ ದಿವ್ಯಚಕ್ಷುವಱಿದಿರ್ದಂ ನೀ
ನೊಂದರ್ಕಂ ಚಿಂತಿಸಬೇ
ಡೆಂದು ಕಪಿಂಜಲಕನೆನಗೆ ಮಗುೞ್ದಂ ನುಡಿದಂ ೧೮

ಅನ್ನೆಗಂ ಮಹದ್ದಂಗತ್ವಮುಮಂ ಪತ್ತುವಿಟ್ಟು ತಂದೆಯಲ್ಲಿಗೆ ವಂದೆನೆನ್ನೆಗಮನತಿ ದೂರದೊಳುದ್ಭಾಷ್ಪದೃಷ್ಟಿಯುಂ ವಿಷಣ್ಣದೀನವದನನುಂ ಸಭಯನುಮಾಗಿ ಪೊರ್ದಲೆನ್ನಂ ಕಂಡು

ಬಿಡು ಸ್ನೇಹಂಜಿಕೆಯುಂ ಕಪಿಂಜಲಕ ದೋಷಂ ನಿನ್ನದಲ್ತೇಕೆ ಪೇಳ್
ಪಡೆವಯ್ ದೋಷಮಿದೆನ್ನದೆಂದು ಮಱುಗುತ್ತಿರ್ದಂ ಮಗಂ ಪುಟ್ಟಿದಾ
ಗಡೆ ಮಾಡಲ್ ಬಗೆದಂದೆನಿಲ್ಲಿನಿಸುಮಾಯುಷ್ಕಾಮಮಂ ಯಜ್ಞಮಂ
ತಡವಂ ಮಾಡಿದೆನೀಗಳಿಂದೆ ಬಗೆ ನೀಂ ತತ್ಕಾರ್ಯಸಂಸಿದ್ಧಿಯಂ ೧೯

ಇದಱಿಂ ನೀನೊಂದುಮಂ ಚಿಂತಿಸದಿರೆಂದು ತಂದೆ ಬೆಸಸೆ ಭಯ ಮಂ ಪತ್ತುವಿಟ್ಟು

ಎನಗೆ ಪಸಾದಿಪೊಡೆ ಸಖಂ
ಜನಿಯಿಸಿದೆಡೆಯತ್ತಲೆಯ್ದುವಂತೆನಗಾಜ್ಞಾ
ಪನಮೀವುದೊಲವಿನಿಂ ನೀ
ಮೆನೆ ಜನಕಂ ಕೇಳ್ದು ಮುಗುಳ್ದು ಬೆಸಸಿದನಾಗಳ್ ೨೦

ಮಗನೆ ಶುಕಜಾತಿಯೊಳಗವ
ನೊಗೆದಿರ್ದಪನವನನಱಿಯಲಾಱಿಯ್ ನಿನ್ನಂ
ಮಿಗೆ ತಿಳಿಯಲಾಱನವನುಂ
ತೆಗೆಯದಱಿಂ ಗಮನಚಿಂತೆಯಂ ನೀನೀಗಳ್ ೨೧

ಎಂದು ನುಡಿದಿರ್ದಂದಿನ ಪೊಬ್ತುಱೆಯೊಳಯ್ಯನೆನ್ನಂ ಕರೆದು

ಕೇಳೆಲೆ ನೀಂ ಕಪಿಂಜಲ ಭವತ್ಸುಹೃದಂ ವಿಧಿಯೋಗದಿಂದೆ ಜಾ
ಬಾಲಿಮುನೀಂದ್ರನಾಶ್ರಮದನಾ ಶುಕದೇಹದೆ ಸೇರ್ದನಿಂದು ಮೇಣ್
ಮೇಳಿಸಿತಯ್ ಸಮಂತು ಜನನಾಂತರಸಂಸ್ಮರಣಂ ದಲಾತನೊಳ್
ತಾಳುತೆನೂನಹರ್ಷಮನೆ ಪೋಗವನಂ ನಡೆ ನೋಡಲೊಪ್ಪದಿಂ ೨೨

ಅದಱಿಂದಂ ನೀಮುರ್ ಪುಣ್ಯಾಶ್ರಮಮಂ ಪೇರಡೆ ಪಾತ್ರ ಸ್ವಿವಾದಂಗಳಂ ಬಿ
ತ್ತರಿಸುತ್ತುಂ ದೀರ್ಘಕಾಲಂ ಬಯಸಿಕೆಪ ಬಗೆಯಿಂದೀಗಳಾಂ ಮಾಡುವಾಯು
ಷ್ಯರಯಜ್ಞಂ ಪೂರ್ಣಮಪ್ಪನ್ನೆವರಮೊಸೆದು ಜಾಬಾಲಿ ಸಾಮೀಪ್ಯದೊಳ್ ಸಾ
ದಾಮೀರ್ ಪೇಱಿಂದನಾಲೋಚಿಸದಿರೆನುತೆ ಪೇಳ್ ನೀನಮಂಗೆಂಪರಾಗಳ್ ೨೩

ಇದಲ್ಲದೆ ಭವದೀಯವಿಯೋಗದುಃಖ ಸಮಾಕುಲಿತೆಯಾಗಿರ್ಪ ನಿನ್ನ ಜನನಿಯೆನಿಸಿದ ಲಕ್ಷ್ಮಿಯುಮಾಕಜ್ಜದೊಳ್ ಪರಿಚಾರಿಣಿಯಾಗಿರ್ದಪಳಾಕೆಯುಮೆನ್ನಂ ಮುದ್ದಿಸಿ ಜನಕನೊರೆದುದನೆ ಮಗುಳ್ದು ಮಗುಳ್ದು ಬೆಸಸಿದಳ್

ಇಂತ್ತೊರೆದು ಮೃದುಶಿರೀಷ ಸು
ಮಾಂತದವೋಲ್ ಸೂಕ್ಷ್ಮಮೆನಿಪ ತುಪ್ಪುಳ ತತಿಯಿಂ
ದಂತುರವಾದೆನ್ನಂಗಮ
ನಂತರಿಸದೆ ಕರದಿನೆಱವಿದಂ ಮನದಱಲಿಂ ೨೪

ಆಗಳಾತನ ಮನದ ಸಂತಾಪಮನಱಿದಾನುಂ ದುಃಖಿತಹೃದಯನಾಗಿ ಮಿತ್ರನಪ್ಪ ಕಪಿಂಜಲ ನೀಂ ನಿರ್ಭಾಗ್ಯನಾದೆನಗೋಸುಗಂ ಕುದುರೆವರಿಜಂ ತಳೆದು ಪರಾಧೀನನಾಗಿ ಪಲಕೋಟಲೆಗಳನನುಭವಿಸಿದೆ ಸೋಮಪಾನೋಚಿತಮಪ್ಪೀ ಮೊಗದೊಳ್ ನೊರೆವೆರೆದ ನೆತ್ತರುಗುವ ಬೆಟ್ಟಿತಪ್ಪ ಕಡಿಯಾಣದೇರ್ಗಳುಮಂ ಪೂಗೊಯ್ವ ಪದದೊಳ್ ಪೇಲಿ ಕೆಡೆವೆಳವಳ್ಳಿಯ ಸೋಂಕಿಂಗಂ ಬಱಲ್ವೊಡಲೊಳ್ ಚಮ್ಮಟ್ಟಿಗೆಗುತ್ತುಗಳುಮಂ ಚೆಂದಳಿರ ಮೆಲ್ವಾಸಿನೊಳ್ ಮಲಂಗುತ್ತಿರ್ದ ನಿನ್ನೀ ಬೆನ್ನೆಲ್ವಿನೊಳಾವಗಂ ಬಿಗಿದಿರ್ದ ಪಲ್ಲಣದೊತ್ತಿನಿಂದೊಗೆದ ಪಡ್ಡುಗಳುಮಂ ಜನ್ನಿವಾರಮಂ ತಳೆವೀ ಮೆಯ್ಯೊಳ್ ತೊವಲ್ವೊರಜೆಗಳ ಕಟ್ಟಿಂ ಪುಟ್ಟಿದ ಬೇನೆಯುಮನೆಂತು ಸೈರಿಸಿದೆಯೆಂದೀ ತೆಱದ ಪೂರ್ವವೃತ್ತಾಂತಾಲಾಪಂಗಳಿಂದಾಗಳಾಂ ತಿರ್ಯಗ್ಜಾತಿದುಃಖಮಂ ಮಱೆದು ಸಂತಸದಿನಿರ್ಪನ್ನೆಗಂ

ಗಗನಾಂಗಣ ಸೌಧಾಗ್ರದೊ
ಳೊಗುಮಿಗೆಯಿಂ ರಾಜಿಸಿರ್ಪ ಮಣಿಕಲಶಂಬೋಲ್
ಸೊಗಯಿಸಿದುದು ಮಿಗೆ ಮಧ್ಯಾ
ಹ್ನಗತಂ ರವಿಬಿಂಬಮಾಗಳಂಬರತಲದೊಳ್ ೨೫

ಆಗಳಾ ಹಾರೀತಂ ಕಪಿಂಜಲಂಗಮೆನಗಮುಚಿತಮಾದಾಹಾರದಿಂ ತಣಿಪಿದನನ್ನೆಗಂ ಕಪಿಂಜಲಂ ಕಿಱಿದು ಪೊಱ್ತಂ ಕಳೆದೆನ್ನಂ ಕೂರ್ತು ಕೆಳೆಯನೆ ತಾತಂ ತಾನೆಸಗುವಾಯುಷ್ಕರಯಜ್ಞಂ ಪೂರ್ಣಮಪ್ಪನ್ನೆಗಮಾ

ಪೂಜ್ಯನಪ್ಪ ಜಾಬಾಲಿಯಾಶ್ರಮದಿಂ ಚಲಿಸದಿರಾನುಮಾ ಕರ್ಮದೊಳೆ
ವ್ಯಗ್ರನಾಗಿರ್ಪೆನದಱಿಂದೀಗಳಾಂ ಪೋಪೆನೆಂದೆನ್ನಂ ತಿರಸ್ಕರಿಸಿ ವಿಸ್ಮ
ಯಾವಿಷ್ಟರಾದ ಮುನಿಕುಮಾರರುನ್ನಮಿತಾನನರಾಗಿ ನೋಡುತ್ತಿರೆ
ಗಗನಕ್ಕೊಗೆದದೃಶ್ಯನಾದಂ ಬೞಿಕ್ಕಂ ಹಾರೀತನೆನ್ನಂ ಕೆಲವಾನುಂ ದಿವಸಂ
ಪೋಷಿಸುತ್ತಿರಲೆನಗೆ ಗಱಿಗಳೊಗೆದು ಪಾಱುವನಿತು ಬಲಮುದಯಿಸೆ
ಮನದೊಳಿಂತಾಲೋಚಿಸಿದೆಂ

ಕ್ಷಮನಾದೆಂ ನಭದಲ್ಲಿ ಪಾಱಲುಱೆ ಚಂದ್ರಾಪೀಡನುತ್ಪತ್ತಿಯಾ
ಕ್ರಮಮುಂ ಮೇಣ್ ತಿಳಿವಿಂಗೆ ಬಂದುದದಱಿಂದಾ ರಾಜಚಂದ್ರಾಂಕನಂ
ನಿಮಿಷಂ ನೋಡದಿರಲ್ಕೆ ಮಾಱೆನೆಹಹಾ ಏನಾನುಮಕ್ಕೀಗಳಾಂ
ಗಮಿಪೆಂ ತಾನವನಲ್ಲಿಗೆಂದು ಮನದೊಳ್ ನಿಶ್ಚೈಸಿದೆಂ ಭೂಪತೀ ೨೬

ಅಂತು ನಿಶ್ಚೈಸಿ ಬೞಿಕೊಂದು ದಿನಂ ಪ್ರಾತರ್ವಿಹಾರಾರ್ಥಮುತ್ತ
ರಾಭಿಮುಖನಾಗಿ ಮೆಲ್ಲನೆ ಪೊಱಮಟ್ಟು ಬೞಲಿಕೆಯಿಂ ಬಸವೞಿದು ಪಾಱಲ
ಳವಿಲ್ಲದೆ ಸಮೀಪದೊಳಿರ್ದ ಹರಿತಪಲ್ಲವಭರಾವನಮ್ರಮಾದೊಂದು
ಜಂಬೂವೃಕ್ಷಮನಡರ್ದು ಕೞಿದು ಬೇಗಮಿರ್ದು ಚೇತರಿಸಿಕೊಂಡಲ್ಲಿಂ
ತಳರ್ದು

ಕುಳಿರಾತ್ತುಂ ಸುತ್ತಲುಂ ಕಬ್ಬಲಿಪ ತರುತಲಚ್ಛಾಯೆಯಿಂ ಸಾರ್ದು ಸಾರ್ದು
ತ್ಪಲಗಂಧೋದ್ಗಾರಿ ಪಂಪಾಸರದ ಸಲಿಲಮುಂ ಪೀರ್ದು ಪೀರ್ದೞಿ ಬೀಜಾ
ವಳಿಯಿಂ ತೀರದ್ರುಮಾಂಚೋಳಿತ ಫಲತತಿಯಿಂ ಕಾರ್ದು ಕಾರ್ದೊಯ್ಯನಲ್ಲಿಂ
ತಳರ್ದಾಂ ಮತ್ತೊಂದು ತಣ್ಪಂ ತಳೆದ ತರುತಲಸ್ಕಂಧದೊಳ್ ನಿಂದೆನಾಗಳ್ ೨೭

ಅಂತು ನಿಂದು

ಇನ್ನುಮಪರಾಹ್ಣದೊಳ್ ಕೞಿ
ದುಂ ನಡೆನೋಡುತ್ತೆ ಮನದೊಳಾಂ ಚಿಂತಿಸುತಿ
ರ್ದನ್ನೆಗಮುದ್ಧ್ವಶ್ರಮದಿಂ
ದಂ ನಡೆ ಮಾಯ್ದನಗೆ ನಿದ್ರೆ ಬಂದತ್ತಾಗಳ್ ೨೮

ಅಂತು ನಿದ್ರೆಗೆಯ್ದು ಕೞಿದುಬೇಗಕ್ಕೆಂತಾನುಮೆೞ್ಚತ್ತು ನೇಣ್ತಲೆ
ಯೊಳ್ ಸಿಲುಕಿರ್ದೆನ್ನಂ ಕಂಡಿದೆತ್ತಣಿಂ ಬಂದುದೆಂದು ನೋೞ್ಪನ್ನೆಗಂ

ಕೇವಲ ಕಾಲಾಯಸಪರಮಾಣುಗಳಿಂ ನಿರ್ಮಿಸಿದಂತೆ ರೌದ್ರಾಕಾರನಾದ ಕಾಲಪುರುಷನೊರ್ವನಂ ಕಂಡು ಭಯಂಗೊಂಡು ಮೆಲ್ಲನಿಂತೆಂದೆಂ

ಎಲೆ ನೀನಾರೇಕಿಕ್ಕಿದೆ
ಬಲೆಯಂ ಪೇಟಣ್ಣ ನಿನಗೆ ಮಾಂಸದೊಳಾದೊಂ
ದೊಲವರಮೆ ಪಿಡಿದೊಡಲ್ಲಯಿ
ಕೊಲಲೊಲ್ಲದೆ ಮಾಣ್ದೆಯೇನಿದಚ್ಚರಿಯಲ್ತೇ ೨೯

ಕರುಣಿಸಿ ಬಿಡು ವಲ್ಲಭಜನ
ನಿರೀಕ್ಷಣೋತ್ಸುಕನೆನೆನಗೆ ಪೋಪೆಡೆ ದೂರಾಂ
ತರಮುಂತುಂ ಪ್ರಾಣಿಗಳೆ
ಲ್ಲರಾಸೆಯುಂ ಬಗೆವೊಡೊಂದೆ ನೀನಱಿಯದುದೇ ೩೦

ಎಂಬುದುಮೆನ್ನನಾತನಿಂತೆಂದನೆಂ ಕ್ರೂರಕರ್ಮಜಾತಿಯಪ್ಪ ಚಂಡಾಲನೆನಪ್ಪೆನೆಂದೊಡಂ ಮಾಂಸಲೋಭಚಿತ್ತದೊಳ್ ಪಿಡಿದೆನಲ್ತಲ್ಲಿ ಗನತಿದೂರದೊಳ್ ಮಾತಂಗರ ಪಳ್ಳಿಯಿರ್ಪುದಲ್ಲಿಗೆನ್ನಾಳ್ದನೊಡೆಯ ನಾತನ ಮಗಳ್ ಕೌತುಕದಿಂ ನಿನ್ನಂ ಪಿಡಿದು ತರಲೆಂದು ಪಲಂಬರನಟ್ಟಿ ದೊಡೆನ್ನ ಪುಣ್ಯದಿಂ ನೀನೆನಗೆ ದೊರೆಕೊಂಡೆ ನಿನ್ನನೆನ್ನಾಳ್ದಿತಿಯಲ್ಲಿಗೊಪ್ಪಿ ಸುವೆನಲ್ಲಿಂ ಮೇಲೆ ಬಿಡುಗೆ ಬಿಡದಿರ್ಕೆ ನಿನ್ನಗಾಯಬ್ಬೆಯೊಡೆಯಳೆಂಬುದಂ ಪೇೞ್ವುದುಮದಂ ಕೇಳ್ದು ತೊಟ್ಟನೆ ನೆತ್ತಿಯಂ ಸಿಡಿಲ್ ಪೊಡೆದಂತಾಗೆ

ಪಡೆದಳನೇಕಲೋಕಜನವಂದಿತೆ ಲಕ್ಷ್ಮಿಯೆನಲ್ಕೆ ಮೋಹದಿಂ
ನಡಪಿದನೆನ್ನನಾ ತ್ರಿಭುವನಾರ್ಚಿತನಪ್ಪ ಮುನೀಂದ್ರನೆಂದುಮಿ
ರ್ಪೆಡೆ ಸುರಲೋಕಮಕ್ಕಟೆನಗೀ ಪೊಲೆವಟ್ಟಿನ ಮೇಲೆ ಬೀೞ್ವುದೊಂ
ದಡಸಿದುದಾವ ಪಾಪಮನೆ ಮಾಡಿದೆನಿಂತಿರೆ ಮಂದಭಾಗ್ಯನೆಂ ೩೧

ಎಲೆ ಪುಂಡರೀಕ ಬಿಡು ಜ
ನ್ಮಲೋಭಮಂ ನಿನ್ನ ಗೆಯ್ದ ಕರ್ಮಂ ವಿಹಿತಂ
ತಲೆಯೊಳನುಭವಿಸುವೀ ಕೋ
ಟಲೆಯಿಂ ಗರ್ಭದೊಳೆ ಕರಗೆನೇಕೆಯೊ ಮೊದಲೊಳ್ ೩೨

ರಕ್ಷಿಸಲಾಗದೇ ಜಗದಭೀಷ್ಟಫಲಪ್ರದೆ ತಾಯೆ ಲಕ್ಷ್ಮಿ ಪೇ
ಕ್ಷಕನಾದ ನಿನ್ನ ಮಗನಂ ಪರಿರಕ್ಷಿಪುದಿಲ್ಲಿ ವಿಶ್ವರ
ಕ್ಷಾಕ್ಷಮ ತಾತ ನೀಂ ಮಗುಳ್ದು ಬಂದು ಕಪಿಂಜಲ ಮಾಳ್ಪುದೆನ್ನ ಕ
ರ್ಮಕ್ಷಯಮುಮಂ ಭವಾಂತರದೊಳಾದೊಡಮಕ್ಕುಮೆ ಮತ್ಸಪಿತಾಹಿತಂ ೩೩

ಎಂದಿವು ಮೊದಲಾಗಿ ಪಲವುಮಂ ಪ್ರಲಾಪಿಸುತ್ತುಮಾ ಮಾತಂಗನ
ನಿಂತೆಂದೆಂ

ಜಾತಿಸ್ಮರನಾದೆಂ ಮುನಿ
ಜಾತಿಯನಾಂ ಮುನ್ನ ಶಾಪದಿಂದಂ ತಿರ್ಯ
ಗ್ಜಾತಿಗೆ ಬಿದ್ದೆಂ ಬಿಡು ದುಃ
ಖಾತುರನೆಂ ನಿನಗೆ ಪುಣ್ಯಮಕ್ಕುಮಗಣ್ಯಂ ೩೪

ಎಂದಡಿಗಡಿಗೆ ಕಾಲಮೇಲೆ ಬೀಳ್ವುದುಮಪಂ ಬೆಟ್ಟವೆಟ್ಟನಿಂತೆಂದಂ

ಮುನಿಯೋ ಯಕ್ಷನೊ ಗಂಧ
ರ್ವನೊ ರಾಕ್ಷಸನೋ ಪಿಶಾಚನೋ ನೀನಿನ್ನಾ
ವನುಮೆಂದಱಿಯೆಂ ಮತ್ಸ್ವಾ
ಮಿನಿಗುಯ್ದೊಪ್ಪಿಸುವೆನೀಗಳಿಸತನೆ ಬಲ್ಲಂ ೩೫

ಎಂದೆನ್ನಂ ಪಿಡಿದುಕೊಂಡು ದಕ್ಷಿಣಾಭಿಮುಖನಾಗಿ ಪೋಪುದುಂ
ಬೇಡವಟ್ಟಮುಮಂ ಕಂಡು ಕಂಟಣಿಸುತ್ತುಂ

ಬರುತ್ತಿರೆ ಕಂಡು ದೂರದೊಳೆ ತನ್ನಯ ಜಾತಿಗೆ ತಕ್ಕುದಲ್ತೆ ನಲ್
ಕರುಣಮನಿಪ್ಪ ಕೆಯ್ಯ ಪಸಿದೊಳ್ ಪಿಡುವಂತುಟದೊಂದೆಪಳ್ಳೆ ಪೇಳ್
ದೊರೆಕೊಳೆರಾಕ್ಷಸೋಂ ಪ್ರೀತಿಗೆನ್ನಯ ಪುಣ್ಯದೊಳೆಂದು ಭಾವಿಸು
ತ್ತಿರದಿರದೆಯ್ದೆ ದಂ ಪೊರೆಯನಾ ಪೊಲೆವಟ್ಟಿನೊಳಿರ್ದ ಕನ್ನೆಯಂ ೩೬

ಅಂತೆಯ್ದಿ ಗಂಟಜೊಳೆ ಪೊಡವಟ್ಟು ಮೆಲ್ಲನೆ ನೀಡೆ ಲೇಸುಗೆಯ್ದ
ಯೆಂದೆನ್ನಂ ಕರತಲದೊಳ್ ತಳೆದು

ಬಯ್ದುದೆಡೆಯೆಲ್ಲಮುಂ ನೀ
ನೆಯ್ದಿದೆ ಮತ್ತಿರಪೆ ಮಗನೆ ಮಾಣದೆ ಪೇೞ
ನ್ನೆಯ್ದಿದಪೆಯೆಲ್ಲಿಗೆಟ್ಟಿ ಕಱ
ನುಯ್ದಪೆನಾಂ ಕಾಮಪರತೆಯಿಂದಂ ಕೆಟ್ಟಯ್ ೩೭

ಎಂದಾ ಚಂಡಾಲಕನ್ನಿಕೆ ರೋಷಮಂಬೊರೆದ ಪಂದೊವಲ ಪಂಜರ ದ್ದೊಳಿರ್ಪ ಮುಕ್ತಾಶ್ವೇತಾಪಲೋಕನಕ್ಕೆ ತಗೆಯಂ ಮಾಡುವಂತೆ ಪಡಿಯುಂ ಕೆತ್ತಗುಟಿಯುಸಿಕ್ಕಿ ನೀನಿಂತಿರೆಂದು ನಿವೃತ್ತಾಂತರಾತ್ಮೆಯಂತೆ ನುಡಿದು ಪಿರಿದಿರ್ದೊರ್ಪಾನ್ನುಮಾ ಪಂಜರದ ಪಡಕೆಯೊಳಿರ್ದೆನ್ನೊಳಿಂತೆಂದೆಂ

ನುಡಿದೆನಪ್ಪೊಡೆ ಲೇಸಾಗಿ ನುಡಿಯಲ್ಕೆ ಬಲ್ಲುದೀಗಿಳಿಯೆಂದು ಕನೆ ಯೆನ್ನಂ ಬಿಡದಿರ್ಕುಮದಱಿಂದಮಾ ಕನ್ನಿಕೆ ನುಡಿಯಿಸಿದೊಡಮೆಂತುಂ ನುಡಿಯದಿರ್ಪೆಂ ನುಡಿಯದಿರ್ದೆನಪ್ಪೊಡೆ ಕಡುಮುಳಿಸಿಂದಂ ಪಿರಿದಪ್ಪವಸ್ಥೆಯನೆಯ್ದುಸುಗುಂ ನುಡಿಯ ದೆಂತುಮೇಂಬಾರ್ತೆಯೆಂದು ಪೇೞ್ ಬಿಡುಗುಮೋ ಪೇೞೆನುತ್ತೆ ಬಗೆಯುತಿರ್ದೆಂ ೩೮

ಸುರಲೋಕದ್ರಷ್ಟನೆಂ ಮರ್ತ್ಯರೊಳುದಯಿಪ ತಿರ್ಯಕ್ತ್ವದೊಳ್ ನಿಲ್ವ ಚಂಡಾಲರ ಕಯ್ಯೊಳ್ ಬೀೞ್ವ ತೋಲ್ಪಂಜರದ ಪಡಕೆಯೊಳ್ ನಿಲ್ವ ದುರ್ವಾರದುಃಖೋತ್ಕರಮೆಲ್ಲಂ ನೋಡಲೆನ್ನಿಂದ್ರಿಯನಿಷಕದ ದೋಷಂ ದಲಿನ್ ಮಾಱದಂತಾ ಗಿರಿಸಲ್ಕೇಡ್ಕೊಂಡವಂ ನಿಗ್ರಹಿಪ ನಿಯಮದಿಂ ಮೌನದಿಂದಿರ್ದೆನಾಗಳ್ ೩೯

ಅಂತು ನಿಖಿಲೇಂದ್ರಿಯನಿಗ್ರಹಕ್ಕೆ ನಿಶ್ಚಯಂಗೆಯ್ವೆನಗೆ ಮರಣಮೆ ಶರಣಮೆಂದಾ ದಿವಸಮನನಶನದೊಳ್ ಕಳೆಯಲಾ ಕನ್ನೆ ಕಂಡು ಪಲತೆಱದ ಪಕ್ವ ಫಲಂಗಳುಮಂ ಸುರಭಿಶೀತಲ ಜಲಂಗಳುಮಂ ತಾನೆ ತಂದು ನೀಡೆ ಯುಮೊಲ್ಲದಿರಲೆನ್ನನಿಂತೆಂದಳ್ ನಿರ್ವಿಕಾರಚಿತ್ತವೃತ್ತಿಗಳಪ್ಪ ಪಕ್ಷಿಗಳ್ ಪಸಿವುಂ ನೀರಡ್ಕೆಯುಮಾಗಲುಪಯೋಗಿಸಮುದೊಂದುವಿಲ್ಲೆ ತಾ ನುಂ ಭೋಜ್ಯಾಭೋಜ್ಯವಿವೇಕನೆನಾಂ ಜಾತಿಸ್ಮರನಾಹಾರಮಂ ಪರಿಪರಿಸು ವೆನೆಂಬೆಯಪ್ಪೊಡೆ ಭಕ್ಷ್ಯಾಭಕ್ಷ್ಯರಹಿತಮಪ್ಪ ತಿರ್ಯಗ್ಜಾತಿಯೊಳ್ ಪುಟ್ಟಿದ ನಿನಗೆಯುಮಭಕ್ಷ್ಯಮೊಂದುಮಿಲ್ಲಂ ಮೊದಲೊಳುತ್ಕೃಷ್ಟಜಾತಿಯೊಳ್ ಪುಟ್ಟಿ ತಿರ್ಯಗ್ಜಾತಿಗೆ ಬಿಟ್ಟಂಪೇ ನಿನ್ನ ವಿವೇಕಮೆಱಿದಂತುಟೆ ವಲಮಿನ್ ನಿನಗೆ ಜಾತಿಗೆ ತಕ್ಕಂತಾಹಾರಮನಾಚರಿಸೆ ದೋಷಮಿಲ್ಲಮಲ್ಲದೆಯುಂ ಭಕ್ಷ್ಯಾಭಕ್ಷ್ಯನಿಯಮಿತರ್ಗಾಪದ್ವಿಷಯದೊಳ್ ಪ್ರಾಣಸಂಧಾರಣಾರ್ಥಮಭೋ

ಷ್ಯೋಪಭೋಗಮುಂಟೇಗಳೆತ್ತಾ ನುಮಾನಿತು ದನೊಲ್ಲೆನೆಂಜೆಯಪ್ಪೊಡೆ
ಚಂಡಾಲಭಾಂಡದಿಂ ಭೂಮಿಪತಿತವಾದಂಬುವುಂ ಪವಿತ್ರಮೆಂಬುದುಂಟದ
ಱಿಂ ಕ್ಷುತ್ಪಿಪಾಸೆಗಳಿನಾಯಾಸಂಬಡದೆ ಮುನಿಜನೋಚಿತಮಪ್ಪ ನವಫಲಂಗ
ಳನುಪಭೋಗಿಸೆಂದು ನುಡಿಯೆ

ನಯದಿಂದಂ ತಿಳಿವುಟ್ಟಿರಲ್ಕನಗೆ ಪೇೞಲ್ ಕೇಳ್ದು ಚಂಡಾಲಜಾ
ತಿಯೊಳೀ ವಾಕ್ಯಮುಮೀ ವಿವೇಕಮುಮದೆಂತಾದತ್ತೊ ಪೇೞೆಂದು ವಿ
ಸ್ಮಯಮುತ್ತೆಂದುದುಗೆಯ್ವೆನೆಂಬ ಬಗೆಯೊಳ್ ಬಾಷ್ಪಾವೆಸೆಯಿಂ ಕ್ಷುತ್ಪಿಪಾ
ಸೆಯುಮಂ ತಾಳ್ದಿರಲಾಱದಾಱಿಸಿದೆನಾಂ ತ [ದ್ಭಕ್ಷ್ಯ] ಪಾನಂಗಳಿಂ ೪೦

ಅಂತು ಕೆಲವುದಿವಸಮಿರ್ಪನ್ನೆಗಂ

ಇನೋದಯದೊಳೊರ್ಮೆ ಕಣ್ದೆಱೆದು ನೋಡುತುಂ ಕಂಡೆನಾಂ
ಕನತ್ಕನಕಪಂಜರಸ್ಥಿತನನೆನ್ನನಾ ಕನ್ನೆ ಮು
ನ್ನಿನಂತೆ ನಿಜರೂಪದಿಂದಮೆಸೆದಿರ್ದಳಂತಿಲ್ಲ ಕೇ
ಳನಂತರಮೆ ತೋಱತಿಂದ್ರಪುರದಂತಿರಾ ಪಕ್ಕಣಂ ೪೧

ಅಂತದಂ ಕಂಡು ವಿಸ್ಮಿತಾಂತರಂಗನಾಗಿ ಮೌನಮಂ ಬಿಟ್ಟು ಕನ್ನೆ
ಯಂ ಬೆಸಗೊಳಲುಜ್ಜುಗಂಗೆಯ್ವನ್ನಮೆನ್ನನೊಡಗೊಂಡು ದೇವರ ಶ್ರೀ
ಪಾದಂಗಳಂ ಕಾಣಲೆಂದು ಬಂದಳ್

ಈ ಕನ್ನೆಯಾರ್ಗೆ ಪೆಸರೇ
ನೇಕೆನ್ನಂ ಪಿಡಿದು ತರಿಸಿದಳ್ ಸೆಱೆಯೊಳ್ ಮ
ತ್ತೇಕಿಕ್ಕಿದಳೆಗಳ್ ತಾ
ನೇಕಿಲ್ಲಿಗೆ ತಂದಳಱಿಯೆನಿದನವನಿಪತೀ ೪೨

ಎಂದು ಶೂದ್ರಕಮಹಾರಾಜಂಗಾ ಪ್ರಪಂಚಮೆಲ್ಲಮಂ ಪೇೞೆ ಕೇಳ್ದತಿ
ಕುತೂಹಲಿತನಾಗಿ ಚಂಡಾಲಕನ್ಯೆಯುನೊಡಗೊಂಡು ಬಾಯೆಂದು
ಮುಂದಿರ್ಪ ಪಡಿಯಱತಿಗೆ ಬೆಸಸುವುದುಮವಳ್ ಪೋಗಿ ಬೇಗದಿನೊಡ
ಗೊಂಡು ಬರೆ

ಪೂಣ್ದು ಟಿದರ ಮೆಯ್ವೆಳಗೆನೆ
ಕಣ್ಗಳ್ ಕೋರಯ್ಸೆ ತೊಳಗಿ ಬೆಳಗುತ್ತುಂ ಮುಂ
ದಣ್ಗಾಗಿ ನಡೆದು ನೃಪನಂ
ಜಾಣ್ಗೊಂಡ ನಿಜಪ್ರಗಲ್ಭವಚನದೆ ನುಡಿದಳ್ ೪೩

ವಿದಿತಾಶೇಷಕಲಾಕಲಾಪ ಭುವನಾಲಂಕಾರ ಕಾದಂಬರೀ
ಹೃದಯಾನಂದನ ರೋಹಿಣೀರಮಣ ತನ್ನಾತ್ಮೀಯ ವೃತ್ತಾಂತಮಂ
ವಿದಿತಂ ಪೇೞುತುಮೀ ದುರಾತ್ಮನಿರೆ ಕೇಳುತ್ತಿರ್ದೆ ನೀಂ ಕೇಳ್ದೆ ದಲ್
ಮೊದಲಿಂ ಪೂರ್ವಭವಾಂತರೋದಿತ ಭವದ್ವೃತ್ತಾಂತ ಸಂತಾನಮಂ ೪೪

ಮತ್ತಮೀ ದುರ್ಬುದ್ಧಿಯೀ ಜನ್ಮದೊಳಂ ಗುರುಗಳಿಂ ನಿಷಿದ್ಧನಾಗಿಯುಂ ತಂದೆಯ ಮಾತಂ ಮೀಱಿ ವಧೂನಿರೀಕ್ಷಣೋತ್ಸುಕತೆಯಿಂ ಪಾಱಿ ಪೋಗುತ್ತುಮಿರೆ

ಮಗನಿಂತೀ ಶುಕನೀ ದುರಾತ್ಮಕನ ತಾಯಿಂ ಶ್ರೀಯೆನಾಂ ದಿವ್ಯ ಚ
ಕ್ಷುಗಳಿಂದೀತನ ತಂದೆ ಪ್ರೋಗಱಿದಿವಂ ತಿರ್ಯಕ್ತ್ವದೊಳ್ ನಿಲ್ವನೆ
ನ್ನೆಗಮಾಯುಷ್ಕರಮಾದ ಯಜ್ಞಮನಿದಂ ಪೂರ್ಯೈಸದಾನಿರ್ಪನ
ನ್ನೆಗಮೀಗಳ್ ಸೆಱೆಯಿಕ್ಕಿಯಿನ್ ನಿಲಿಪುದೆಂದೆನ್ನಲ್ಲಿಗಿಂತಟ್ಟಿದಂ ೪೫

ಅದಱಿನೀತಂಗೆಂತೆಂತು ವಿರಕ್ತಿಪುಟ್ಟುಗುಮಂತಂತೆ ವಿನಯವೃತ್ತಿನಿಮಿತ್ತವಿನಿತುಮಂ ಮಾಡಿದೆನೀಗಳಾ ಯಜ್ಞಾವಸಾನಸಮಯಮಾಗಿರ್ದುದಱಿನೀ ಸಮಯದೊಳ್ ಸಮಸುಖದುಃಖಿಗಳಾಗಲಿವೇಟ್ಕುಮದಱಿಂದೀತನ ಜನ್ಮಾಂತರಸಹಾಯನಪ್ಪ ನಿನ್ನಲ್ಲಿಗೊಡಗೊಂಡು ಬಂದೆಂ ನೀಪಿರ್ವರುಂ ಜನ್ಮ ಜರಾಮರಣ ವ್ಯಾಧಿದುಃಖಬಹುಳಂಗಳಪ್ಪ ತನುಗಳಂ ಬಿಟ್ಟು ದಿವ್ಯದೇಹಂಗಳಂ ಕಯ್ಕೊಂಡು ಇಷ್ಟಜನಸಮಾಗಮ ಸುಖಮನನುಭವಿಸಿಂ ಮರ್ತ್ಯಲೋಕಸಂಪರ್ಕಪರಿಹಾರಾರ್ಥಮೀ ಚಂಡಾಲವೇಷಮಂ ತಳೆದಿರ್ದೆನಿನ್ ಪೋಪೆನೆಂದು

ಝಣಝಣಿತ ಮೇಖಲಾಕಲಿತಹಾರಕೇಯೂರ ಭೂ
ಷಣಪ್ರಭೆ ದಿಗಂತಮಂ ಬೆಳಗೆ ರಾಜರಾಜದ್ಗೃಹಾಂ

ಗಣಸ್ಥಿತಜನಕ್ಕೆ ವಿಸ್ಮಯಮನಾಗಿಸುತ್ತುಂ ನಭೋಂ
ಗಣಕ್ಕೊಗೆದಳೆಂದು ಲಕ್ಷ್ಮಿ ಕಡುಮಿಂಚಿದೊಂದೆಂಬಿನಂ ೪೬

ಅನಂತರಮಾ ಶೂದ್ರಕಮಹಾರಾಜನಾ ವಚನಮಂ ಕೇಳ್ದು ಜಾತಿಸ್ಮರನಾಗಿ ಗಿಳಿಯು ಮೊಗಮಂ ನೋಡಿ

ನೀಂ ಪುಂಡರೀಕನಯ್ ವೈ
ಶಂಪಾಯನ ಪೂರ್ವಜನ್ಮಸಂಬಂಧಯ್ ಕಂ
ಡೆಂ ಪುಣ್ಯದಿಂದಮಿರ್ವರು
ಮಿನ್ ಪಡೆದಪಮೊಡನೆ ಶಾಪಮೋಕ್ಷದ ಫಲಮಂ ೪೭

ಎನ್ನನಿತ್ತು ಸುಖಮಂ ಸಖಂಗೆ ಮಾ
ಡ್ಪೆಂ ನಿರಾಕುಳಮೆನುತ್ತುಮಾಗಳಿ
ತ್ತಂ ನೃಪಂ ಪದಪಿನಿಂ ಮಹಾತ್ಮನಾಂ
ಕಿಂ ನ ದೇಯಮೆನೆ ತನ್ನ ಜೀವಮಂ ೪೮

ಗಿಳಿಯಿತ್ತ ಮಹಾಶ್ವೇತಾ
ವಿಳೋಕನೋತ್ಕಂಠೆಯಿಂದೆ ಜೀವಂ ಬಿಟ್ಟ
ತ್ತೆಳಸುತ್ತಿರಲಮೃತಕರ ಮಂ
ಡಳಮಧ್ಯದ ಪುಂಡರೀಕ ದೇಹಮದಾಗಳ್ ೪೯

ಉದಯಂ ರಾಜೇಂದ್ರಚಂದ್ರಾತ್ಮಕನೆನಿಸಿದ ಚಂದ್ರಂಗೆ ಸಾರ್ತಂದುದಿನ್ನೆ
ಮ್ಮ ದಯಂ ಲೋಕತ್ರಯಕ್ಕೆಂಬುದನಱಿಪುವೆನಾಂ ರಾಗದಿಂದೀಗಳೆಂಬಂ
ದದೆ ರಕ್ತಾಶೋಕಚೂತದ್ರುಮ ಸಮುದಿತಬಾಲಪ್ರವಾಳಧ್ವಜಂ ಬಂ
ದುದು ಚಂಚಚ್ಚಂಚರೀಕಪ್ರಕರ ಶುಕಕುಲಾಲಾಪ ಕಾಂತಂ ವಸಂತಂ ೫೦

ವಿರಹಿಗಳಂ ಬೆರ್ಚಿಸಲೆದೆ
ಪರಮಾಸ್ತ್ರಂ ಮನುಮತಂಗೆನಿಪ್ಪ ವಸಂತಂ
ಬರಲೊಡನೊರ್ಮೆಯೆ ಗಂಧ
ರ್ವರಾಜಸುತೆ ಮನದೊಳಾಗಳಾಕುಲೆಯಾದಳ್ ೫೧

ಸುರಭಿಜಲಂಗಳಿಂದಮಭಿಷಿಕ್ತನನಾ ನೃಪರೂಪಚಂದ್ರನಂ
ತರದೊಳೆ ಮಾಡಿ ಕೇಸಡಿಗಳಂ ಹರಿಚಂದನದಿಂದಮೂಡಿ ಕೇ
ಸರದ ತುಱುಂಬನಿಕ್ಕಿ ಸಿರಿಕಂಡಮನೊಯ್ಯನೆ ಪೂಸಿ ಕಂಪಿನೊಳ್ ಪೂ
ರೆದ ವಸಂತಧೊಳ್ಮುಗುಳ ತಣ್ಗೊಡವಂ ತುಡಿಸಲ್ಕೊಡರ್ಚಿದಳ್

ಅಳಿಪಿನೊದವಿಂ ನೀಡುಂ ಪೀರ್ವಣ್ಣಂದದಿಂ ನಡೆ ನೋಡಿ ಸಂ
ಗಳಿಸೆ ನಿಡುಸುಯ್ ರೋಮಾಂಚಂ ಪೊಣ್ಮೆ ಘರ್ಮಜಲಂ ಪೊದ
ಳ್ದಿಟಿಯೆ ನಡುಗುತ್ತಕ್ಕಂ ಕಂಡಪ್ಪಳೆಂದು ಮೃಗಾಕ್ಷಿ ಪೆ
ಳ್ಪಳಿಸಿ ದೆಸೆಯುಂ ನೋಡುತ್ತುಂ ಪೊರ್ದಿದಳ್ ನೃಪಚಂದ್ರನಂ ೫೩

ಅದಲ್ಲದೆಯುಂ

ಉಟಿಯುಲೆನಸುಂ ಲಜ್ಜಾಭಾರಂ ಸಮುಂಚಿತ ಸಾಧ್ವಸಂ
ಕಟಿಯಲೆಡೆವೆತ್ತಾಗಳ್ ಸಾರಾರುಮಿಲ್ಲದಿರಲ್ಕೆ ಕಂ
ಡೆಳಸಿ ನಿಲಿಸಲ್ ತನ್ನಂ ತಾನಾಱದೊಯ್ಯನೆ ಕಣ್ಮಲರ್
ಮಲರೆ ನೃಪನಂ ಭೋಂಕಲ್ ಮೇಲ್ವಾಯ್ದು ತಳ್ತಿರದಪ್ಪಿದಳ್ ೫೪

ಆಗಳ್ ತದಾಲಿಂಗನಾಮೃತವರ್ಷದಿಂ ಜೀವಂ ಬಂದು ರಾಜೇಂದ್ರ ಚಂದ್ರಂ ಪಸೆಯೊಳ್ ಮುನ್ ನಿದ್ರೆಗೆಯ್ದೆಚ್ಚಱುವರಸನವೊಲೆಚ್ಚತ್ತಿನ್ನೆವರಂ ನಿನ್ನ ಕರತಲಸ್ಪರ್ಶದಿನಾಪ್ಯಾಯಿತಶರೀರನಾಗಿಯುಂ ಶಾಪದೋಷದಿಂ ಪ್ರತ್ಯುಜ್ಜೀವಿತನಾಗದಾನೀಗಳ್ ಮಹಾಶ್ವೇತೆಯ ಪ್ರಿಯತಮನಪ್ಪ ಮದೀಯವಯಸ್ಯಂಬೆರಸು ವಿಗತದೋಷನಾಗಿ ನಿನ್ನ ದೊಸಱೊಳಿಲ್ಲಿ ನಿಲಿಸಿದ ಮದೀಯ ದೇಹಕ್ಕವತರಿಸಿದೆನೆಂದು ಚಂದ್ರಮನನುಭೂತಪೂರ್ವಮಪ್ಪ ಗಂಭೀರ ಪೂರ್ವವಚನದಿಂ ನುಡಿದು ಗಂಧರ್ವರಾಜನಂದನೆಯನಾನಂದಿಸುತ್ತುಮಿರ್ಪುದುಂ

ಕುಳಿರುತ್ತಿರ್ಪಮೃತಾಂಶುಮಂಡಲದೊಳಿರ್ದಾದಂ ಸುಧಾಮೋದಮಂ
ತಳೆದಂಗಂ ಬೆಳಗೆಂಪನಾಳ್ದಿರೆ ಮಹಾಶ್ವೇತಾಂಗನಾ ಮೌಕ್ತಿಕಾ
ವಳಿ ವಕ್ಷಸ್ಥಲದೊಳ್ ತೆಱಂಬೊಳೆಯಲಾಗಳ್ ಪುಂಡರೀಕಂ ಕಪಿಂ
ಜಳಕಂ ಕಯ್ಗುಡಲಿಷ್ಟಮಿತ್ರನೆ ಬರುತ್ತಿರ್ದಂ ಮರುನ್ಮಾರ್ಗದಿಂ ೫೫

ಮನದೊಂದಾಹ್ಲಾದದಿಂದಂ ಗಗನತಲದಿನೆೞ್ತಂದು ರಾಜೇಂದ್ರ ಚಂದ್ರಾಂ
ಕನ ಪಾದಾಂಭೋಜಯುಗ್ಮಕ್ಕೆಱಗೆ ತೆಗದು ತಚ್ಛ್ವೇತಸುತಂ ಪುಂಡರೀಕಾನ
ಬ್ಜಸ್ರಿಜನ್ಮಾಗ್ರಜನ್ಮ ಸಂಬಂಧವಿನೊಗೆದ ಸುಹೃತ್ಸ್ನೇಹದಿಂ ಮುತ್ತಜಂ ಪಿಂ
ತನೆಬಂದಯ್ ನೀನೆನುತ್ತೆಲ್ಕಱೊಳೆ ಕೆಳೆಯನೊಳ್ ಮಾತನಾಡುತ್ತುಮಿರ್ದಂ ೫೬

ಅನ್ನೆಗಂ ಕೇಯೂರಕಂ ಚಿತ್ರರಥಸಂಸರ್ಗ ತನ್ನ ಹೋತ್ಸವಮಂ ಪೇೞಲ್ಕೆ ಪೋದನಿತ್ತ ಮೃತ್ಯುಂಜಯಜಪವ್ಯಗ್ರನಾಗಿ ವಿಲಾಸವತೀಪ್ರಮುಖಾ ದೇವಿವೆರಸಿರ್ದ ತಾರಾಪೀಡನಲ್ಲಿಗೆ ಮದಲೇಖೆ ಪರಿತಂದು ವೈಶಂಪಾಯನಂಬೆರಸು ಯುವರಾಜಂ ಪ್ರತ್ಯುಜ್ಜೀವಿತನಾದನೆಂದು ಪೇೞ್ವುದುಮತ್ಯಾನಂದರಭಸದಿಂ ಬರುತ್ತಿರ್ದ ತನ್ನ ತಂದೆಯಂ ಕಂಡು ರಾಜೇಂದ್ರಚಂದ್ರಂ ಸಾಷ್ಟಾಂಗಪ್ರಣಾಮಪುರಸ್ಸರಂ ಪಾದಾರವಿಂದಕ್ಕೆಱಗಿದಾಗಳ್

ನಿನಗಾಂ ತಂದೆಯುನಾದೆನೆಮ್ಮ ಬಸಿಱಿಂದಂ ಬಂದೆ ನೀನೆಂಬ ಪೆಂ
ಪೆನಗೇಂ ಸಾಲದೆ ಕಂದ ಚಂದ್ರನೆನಲುಂ ತ್ರೈಲೋಕ್ಯದಿಂ ವಂದನೀ
ಯನೆ ಎಂದಂದೆಮಗಲ್ತೆ ವಂದ್ಯನಪ್ಪೊಲೆಂದಾನಂದದಿಂದಾತ್ಮನಂ
ದನನಂ ಚಂದ್ರನನಪ್ಪಿದಂ ತೆಗೆದು ತಾರಾಪೀಡಚಕ್ರೇಶ್ವರಂ

ಅಂತು ತಪ್ಪೆೞ್ಕೆಸೆ ನಿರ್ಭರಹರ್ಷಪರವಶೆಯಪ್ಪ ತಾಯುಂ ಚಂದ್ರಾಪೀಡಂ ನೋಡಿ

ಪೊಡವಡೆ ತಾಯ್ ಬಸಿಱೊಳಗಿಡ
ಲೊಡರಿಸಿದಪಳೆರದೆ ಮಗುೞ್ದು ಮೆನೆ ಪೊಲೆವಾಲ್ಗಳ್
ಬಿಡದೆೞ್ದು ಪಾಯೆ ಪದಪಿಂ
ದಡಿಗಡಿಗಾತ್ಮಜನನಾದವಪ್ಪಿದಳಾಗಳ್ ೫೮

ಅನಂತರಂ ಮನೋರಮಾಸಮೇತನಪ್ಪ ಶುಕನಾಸನಲ್ಲಿಗೆ ವಂದು

ವಿನಯಭರದಿಂದೆ ನಮಿತಾ
ನನನೆನಿಸಿದ ಪುಂಡರೀಕನಂ ವೈಶಂಪಾ
ಯನನೆಂದವಧರಿಸಿಂ ನೀ
ವೆನುತುಂ ಕಾಣಿಸಿದನಂದು ಚಂದ್ರಾಪೀಡಂ ೫೯

ಅಂತಾ ಸಮಯದೊಳ್ ಕಪಿಂಜಲಕಂ ಶುಕನಾಸನನಿಂತೆಂದಂ

ನಪಪಲ್ ಮುಂ ಪಿತ್ತ್ರಪಾಪೀತನನಿನಿತೆಡರಿಂ ಪುಂಡರೀಕಾಖ್ಯನಂ ಪೇ
ಜ್ಪೊಪೆ ವೈಶಂಪಾಯನಂ ತನ್ನಯ್ಯ ಮುಗನದಱಿಂ ಸ್ನೇಹಮೊಟ್ಟೈಸೆ ತನ್ನಿ
ರ್ದೆಡೆಗೀಗಳ್ ಮುಕ್ತಶಾಪಂ ನಿಜತನುವೆರಸಾನಂದದಿಂ ಬಂದನೀತಂ
ಗೊಪೆಯುರ್ ತಾವೆಂದು ಪೇಟ್ಬಿಟ್ಟದನಿದನೊಲವಿಂ ಶ್ವೇತಕೇತುಪ್ರತೀಶಂ ೬೦

ಎಂಬುದುಂ ವಿನಯವಿನಮಿತನಪ್ಪ ಪುಂಡರೀಕನ ಮೇಲೆ ಕಯ್ಯನಿಕ್ಕಿ
ಶುಕನಾಸನಿಂತೆಂದಂ

ಸಕಲಾರಾಧ್ಯರ್ ತಾವಿಂ
ತು ಕರುಣದಿಂದೆನಗೆ ಬೆಸಸಿಯಟ್ಟಿದರೆಂದಂ
ದು ಕಪಿಂಜಲ ಪೇಪೆನ್ನಿಂ
ದೆ ಕೃತಾರ್ಥರುಮೊಳರೆ ಮತ್ತೆ ಭುವನತ್ರಯದೊಳ್ ೬೧

ಎಂದಿವು ಮೊದಲಾಗಿ ಪೂರ್ವಜನ್ಮಸ್ಮರಣಾಲಾಪಂಗಳಿಂದಂ ಪರ
ಸ್ಪರಾಲೋಕನಸುಖೋತ್ಫುಲ್ಲಲೋಚನರಾಗಿರಲಿತ್ತ ಕಣ್ಗೊಳಿಪ ಬೆಳಗಪ್ಪು
ದುಂ ಪ್ರಭಾತ ಸಮಯದೊಳಖಿಲಗಂಧರ್ವಲೋಕಮೊಡನೆ ಬರೆ ಮದಿರಾ
ಮಹಾದೇವಿವೆರಸು ಚಿತ್ರರಥನುಂ ಗೌರಿವೆರಸು ಹಂಸನುಂ ಬಂದು
ಜಾಮಾತೃದರ್ಶನೋತ್ಫುಲ್ಲವದನರ್ ತಾರಾಪೀಡಶುಕನಾಸರೊಳತಿಶ್ಲಾಘ್ಯ
ಸಂಬಂಧಬಂಧುರವಚನಂಗಳಂ ನುಡಿಯುತ್ತುಮಾನಂದಪರಂಪರೆಯನೆಯ್ದಿ
ಕಿಱಿದುಬೇಗಮಿರ್ದು ರಾಜಾಧಿರಾಜನಂ ಗಂಧರ್ವರಾಜನಿಂತೆಂದಂ

ಇವಗಾತ್ಮೋಚಿತಮಾಗಿ ಮುನ್ನಮೆ ವಿವಾಹಂ ಸಂದುದಿನ್ ಲೌಕಿಕ
ವ್ಯವಹಾರಕ್ಕೆಸಗಲ್ಕೆವೇಳ್ಪುದದಱಿಂದಂ ಹೇಮಕೂಟಕ್ಕೆ ವಂ
ದು ವಿವಾಹೋತ್ಸವಮಂ ನೆಗಟ್ಟಿ ಪಿರಿದೊಂದುತ್ಸಾಹಮಂ ಮಾಳ್ಪುದಿ
ನ್ನೆವಗೆಂದೞ್ಕಱೊಳಿಂತಿದಂ ನುಡಿದನಾ ಗಂಧರ್ವಲೋಕೇಶ್ವರಂ ೬೨

ಅಂತು ನುಡಿಯೆ ತಾರಾಪೀಡನರೇಂದ್ರನಿಂತೆಂದಂ

ಭವದೀಯಶ್ಲಾಘ್ಯಸಂಬಂಧಮೆ ದಲಿದುವೆ ಕೃತಸಾರ್ದುದಿಂದೆಂದು ಪೇಚ್ದಿ
ನ್ನೆವಗಿಲ್ಲಿಂ ಬಿಟ್ಟು ಮತ್ತಂ ಸುಖವೆನಿಪುದದೇಂ ಪುತ್ರನಿಕ್ಷಿಪ್ತರಾಜ್ಯ
ರ್ಗವಗಿನ' ಮತ್ತೆಟ್ಟರಲ್ಕಾಗದು ಸದನ ಸುಖಾವಾಪ್ತಿಯಂ ಮಾಡು ನೀನೆ
ಲ್ಲವನತ್ಯುತ್ಸಾಹದಿಂ ನಿನ್ನಳಿಯನನೊಡಗೊಂಡೆಯ್ದು ಗಂಧರ್ವರಾಜಾ ೬೩

ಎಂಬುದುಂ ನಿಮಗೆಂತು ಸಂತಸಮಂತೆ ನೆಗೞ್ವೆನೆಂದು ರಾಜೇಂದ್ರ
ಚಂದ್ರಂಬೆರಸುತ್ಸಾಹಾನ್ವಿತನಾಗಿ ಹೇಮಕೂಟಕ್ಕೆ ಬಂದು ಮಂಗಳಾನಕ
ರವಂಗಳಿನೆಸೆವ ವಿವಾಹಮಂಟಪಕ್ಕೆಯ್ತಂದು

ಏೞೆಯಂ ತ್ರೈಲೋಕ್ಯರಾಜ್ಯಕ್ಕೆನಿಸಿದ ವಿಭುವಿಂಗೇನನಿತ್ತೀಗಳೊಲ್ದಾ
ನೆೞೆವ್ವೆಂ ಕಾದಂಬರೀದೇವಿಗೆ ಬಟಿವಟಿ ಗಂಧರ್ವರಾಜ್ಯಂ ದಲೆಂದ
ಟ್ಟುೞಿನೀನ್ ಕಯ್ಕೊಳ್ವುದೆಂದಾತ್ಮಜೆಯನೊಲವಿನಿಂದಿತ್ತು ಸಾಕ್ಷ್ಯಕ್ಕೆ ಕಯ್ನಾ
ರೆಱೆದಂ ರಾಜೇಂದ್ರಚಂದ್ರಂಗೊದವಿದ ಪದಪಿಂದಂದು ಗಂಧರ್ವರಾಜಂ ೬೪

ಪಿರಿದುಂ ವಿಭೂತಿಯಿಂ ಚಿ
ತ್ರರಥಾನುಜನೆನಿಪ ಹಂಸನುಂ ನಿಜರಾಜ್ಯಂ
ಬೆರಸು ಮಹಾಶ್ವೇತೆಯನಾ
ದರದಿಂದಂ ಪುಂಡರೀಕದೇವಂಗಿತ್ತಂ ೬೫

ಅನಂತರಮಭಿವಾಂಛಿತಪ್ರಾಣೇಶ್ವರಪ್ರಾಪ್ತಿಸಮುತ್ಸುಕೆಯುಮಖಿಲ
ಪರಿವಾರಪರಿವೃತೆಯುಮಪ್ಪ ಕಾದಂಬರಿ ವಿಷಾದಮನಪ್ಪುಕಯ್ದು ಮನು
ಜೇಂದ್ರಚಂದ್ರನಂ ನೋಡಿ

ಜೀವಂ ಬಂದುದು ಸಕಲ
ರ್ಗೀವೇೞ್ವೆಂ ಪತ್ರಲೇಖೆಯಂ ಕಂಡಪೆವಿ
ಲ್ಲೆ ವಧುವೊರ್ವಳದೆಲ್ಲಿದ
ಳೀವಡೆಯೊಳ್ ಸಿಂದಳರಸ ಪೇೞೆನಗೀಗಳ್ ೬೬

ಎನೆ ಮನುಜೇಂದ್ರಚಂದ್ರನಿಂತೆಂದಂ

ಸಮಸುಖದುಃಖಮಂ ತಳೆವ ರೋಹಿಣಿ ತಾನಿವನಿತ್ತ ಶಾಪದಾ
ಕ್ರಮವನೆ ಕೇಳ್ದು ಪ್ರಾಣಿಸೆಯುಮೆನ್ನಯ ಮೋಹದೆ ಮರ್ತ್ಯರೂಪದಿಂ
ದಮೆ ಬಟಿಸಂದಳೊಲ್ದು ಮಗುಳ್ದಂ ಬರೆ ಪಿಂತೆಯೆ ಮತ್ತೆ ಬಲ್ಪಿನಿಂ
ದಮೆ ನಿಲಿಸಿಟ್ಟೆನೆಯ್ದೆ ನಿಜಲೋಕದೊಳಾಕೆಯನಲ್ಲಿ ಕಂಡಪಯ್ ೬೭

ಎಂದು ನರೇಂದ್ರಚಂದ್ರನುಸಿರಲ್ ವಧು ರೋಹಿಣಿ ಬನ್ನೊಳಂತೆ ಬಂ
ದಂದಮುನಾತ್ಮವಲ್ಲಭನೊಳಾದನುರಕ್ತತೆಯುಂ ಮಹತ್ತ್ವಮಂ
ಸ್ಪಂದ ಪತಿವ್ರತಾಚರಣಮುಂ ಋಜುವೃತ್ತಿಯನೆಂದು ಭಾವಿಸು
ತ್ತೊಂದುಮನೆಂದಳಿಲ್ಲ ಬಟಿಯುಂ ಪಿರಿದುಂ ತನಗಾದ ಲಜ್ಜೆಯಿಂ ೬೮

ತದನಂತರಂ ರಾಜೇಂದ್ರಚಂದ್ರಂ ಮಱುದಿವಸಂ ಮಾವಂದಿರಂ ಬೀಳ್ಕೊಂಡು ವಧೂಸಮೇತಂ ಪರಿತ್ಯಕ್ತಸಕಲಕಾರ್ಯರಪ್ಪ ಮಾತಾಪಿತೃಗಳಲ್ಲಿಗೆ ವಂದು ತತ್ಪಾದಪ್ರಣತನಾಗಿ ತದಿಯಾಶೀರ್ವಾದಶತಸಹಸ್ರಂಗಳಂ ತಲೆಯೊಳಾಂತು ನಿಜಸಮಾನೀಕೃತ ಸಕಲರಾಜಲೋಕ ಸಮನ್ವಿತನುಜ್ಜಯಿನ್ಯಭಿಗಮನಕೃತಾಭ್ಯನುಜ್ಞನಾಗಿ

ನಯದಿಂ ಗಂಧರ್ವರಾಜಾತ್ಮಜೆಯೆಡದೊಳಿರಲ್ ಪುಂಡರೀಕಂ ಮಹಾಶ್ವೇ
ತೆಯ್ಯನೋಂಕಿಂದಾದಲಂಪಿಂ ಬಲದೊಳಗಿರೆ ಪೌರಾವನೀಪಾಲಪುತ್ರ
ಪ್ರಯುತಂ ನಾನಾವಿಮಾನಾವಳಿ ಮಣಿಕಿರಣವ್ಯಾಪ್ತದಿಕ್ಚಕ್ರನುಜ್ಜೈ
ನಿಯನಂದೆಯ್ತಂದು ಪೊಕ್ಕಂ ವಿಬುಧಕುವಲಯಾನಂದಚಂದ್ರಂ ನರೇಂದ್ರಂ ೬೯

ಅವಿಭಕ್ತಸ್ನೇಹೆಯಂ ರೋಹಿಣಿಯನೊಸೆಯಿಸಲ್ ಸೋಮಲೋಕಕ್ಕ ದೊರ್ಮೊ
ರ್ಮೆ ವಯಸ್ಯಂ ಪುಂಡರೀಕಂ ಬೆರಸಮಳಸರಃಪಂಕಜಾಮೋದ ಲಕ್ಷ್ಮೀ
ಭವನಕ್ಕೊರ್ಮೊರ್ಮೆ ಕಾದಂಬರಿಯೊಲವಿನೊಳಂಹೇಮಕೂಟಕ್ಕದೊರ್ಮೊ
ರ್ಮೆ ವಿಶೇಷಸ್ನೇಹಮಂ ಮಾಡುವನನುದಿನಮೆಟ್ಟಂದು ರಾಜೇಂದ್ರ ಚಂದ್ರಂ ೭೦

ಪ್ರಿಯದಿಂ ರಾಜೇಂದ್ರಚಂದ್ರಂ ಪ್ರಿಯತಮೆಯೆನೆ ಸಂದಿರ್ದ ಕಾದಂಬರೀ ಕಾಂ
ತೆಯೊಳ್ ಕಾದಂಬರೀಕಾಂತೆಯುಮೊಸೆದು ಮಹಾಶ್ವೇತೆಯೊಳ್ ತನ್ಮಹಾಶ್ವೇ
ತೆಯನೊಲ್ದು ಪುಂಡರೀಕಾಹ್ವಯನಮಲತರ ಪ್ರೇಮದಿಂ ಪುಂಡರೀಕಾ
ಹ್ವಯನಂ ರಾಜೇಂದ್ರಚಂದ್ರಾಂಕನುಮಗಲದೆ ಕೂಡಿರ್ದರುತ್ಸಾಹದಿಂದಂ ೭೧

ಕ್ಷಿತಿಯೊಳ್ ಸೌವರ್ಣಕಾಂತಿ ಪ್ರಸರಮೆಸದಳಂ ಪರ್ವೆ ಸಂದಿರ್ದುದಂತಾ
ಕೃತಿ ಮುನ್ನಂ ಬಾಣವಾಣೀಪ್ರಿಯನ ವಚನದಿಂ ಮತ್ತೆ ಕರ್ಣಾಟಭಾಷಾ
ಚತುರತ್ವಂಬೊರ್ದಿ ಕಾದಂಬರಿ ಪಸರಿಸಿ ರಾಜೇಂದ್ರಚಂದ್ರಾಂಕನೊಳ್ ಸಂ
ಗತಿವೆತ್ತಾದಂ ತ್ರಿಲೋಕೀಸಹಚರಿಯೆನೆ ತಾಂ ಸಂದುದಾಚಂದ್ರತಾರಂ ೭೨

ಇದು ಚೋದ್ಯಂ ಕವಿಹೃದ್ಗತಂ ನವರಸಂ ನಿರ್ದೋಷಮೆಂದೀಗಳಾ
ದುದು ಕಾದಂಬರಿ ಸೇವ್ಯಮಾದುದನಿತುಂ ತಾನೆಯ್ದೆ ಭೂಭಾಗದೊಳ್
ವಿದಿತ ಶ್ರೀಕವಿನಾಗವರ್ಮನ ವಚಃಸಂದೋಹದಿಂ ದೋಷಮೊಂ
ದದಲಂಕಾರದ ವಸ್ತು ಬಂಧಮಿದು ತಾನೇಂ ಮಾಡದೇಂ ಗೆಯ್ಯದೋ ೭೩

ಸಂಪೂರ್ಣ

# ಶಬ್ದಕೋಶ

## ಅ

| | | |
|---|---|---|
| ಅಕ್ಷಮ | ೮-೮ ಗದ್ಯ | ಅಸಮರ್ಥ |
| ಅಕ್ಷಮಣಿ | ೧-೭೧ | ಜಪಸರದ ಮಣಿ |
| ಅಕ್ಷವಲಯ | ೩-೨೭ | ಜಪಸರ |
| ಅಕ್ಷಾವಳಿ | ೪-೪೫ ಗದ್ಯ | ,, |
| ಅಗರು | ೪-೬೮ | ಸುಗಂಧವುಳ್ಳ ಒಂದು ಗಿಡದ ಚಕ್ಕೆ |
| ಅಗಿ | ೨-೫೦ | ಹೆದರು |
| ಅಗುರ್ವು | ೪-೮೮ | ಆಧಿಕ್ಯ, ಹೆಚ್ಚಿಕೆ |
| ಅಗ್ರ | ೭-೫೩ | ಶ್ರೇಷ್ಠ |
| ಅಗ್ಗಲಿಸು | ೧-೪೧, ೪-೭೮, ೪-೯೧ | ಹೆಚ್ಚಾಗು |
| ಅಗ್ಗಳ | ೩-೪೪, ೪-೩ ಗದ್ಯ | ಆಧಿಕ್ಯ, ಹೆಚ್ಚು |
| ಅಗ್ಗಳಿಸು | ೧-೧೭, ೪-೯೨ ಗದ್ಯ | ಹೆಚ್ಚಾಗು |
| ಅಘಮರ್ಷಣ | ೧-೬೮ ಗದ್ಯ. ೪-೮ ಗದ್ಯ | ಪಾಪಪರಿಹಾರಕವಾದ ಪ್ರಾರ್ಥನೆ |
| ಅಚ್ಚರಸಿ | ೪-೦ ಗದ್ಯ | ಅಪ್ಸರಃ ಸ್ತ್ರೀ |
| ಅಚ್ಚರಸೆ | ೭-೪೫ ಗದ್ಯ | ,, |
| ಅಚ್ಛ | ೪-೬೧ | ಸ್ವಚ್ಛವಾದ, ಶುದ್ಧವಾದ |
| ಅಜಿನ | ೧-೭೧ | ಚರ್ಮ |
| ಅಟ್ಟಹಾಸ | ೩-೧೨ | ಗಟ್ಟಿಯಾದ ನಗು [ವುದು |
| ಅಡಕಿಲ್ | ೫-೩೭ | ಪೇರಿಸುವುದು, ಒಂದರಮೇಲೊಂದನ್ನಿಡು |
| ಅಡಗು | ೧-೪೯ | ಮಾಂಸ |
| ಅಡಪ | ೪-೩೬ | ಸಂಚಿ, ಚೀಲ |
| ಅಡಪವಳಿತಿ | ೫-೯೦ | ಸಂಚಿಯ ಊಳಿಗದವಳು |
| ಅಡಸು | ೧-೫೫, ೬-೧೫, ೮-೩೧ | ಮೇಲೆಬೀಳು, ಒದಗು, ಉಂಟಾಗು |
| ಅಡು | ೪-೬೭ | ಬೇಯಿಸು |
| ಅಣಂ | ೧-೯, ೪-೨೦ | ಸ್ವಲ್ಪವೂ |
| ಅಣ್ಪು | ೪-೯೬ ಗದ್ಯ | ಲೇಪನ |
| ಅತನು | ೩-೨೩ | ಮನ್ಮಥ, ಕಾಮ |
| ಅತ್ರಪಾತ್ಮಿಕೆ | ೭-೧೦ | ನಾಚಿಕೆ ಇಲ್ಲದವಳು |
| ಅದವಳಿಲ್ | ೪-೯೨ ಗದ್ಯ | ವ್ಯಥೆ |
| ಅಧಿಗತ | ೨-೨ ಗದ್ಯ | ಪಾಠಮಾಡಿದ, ಕಲಿತ |
| ಅಧಿಗಮನ | ೨-೨೮ ಗದ್ಯ | ಅಭ್ಯಾಸ, ಕಲಿಯುವಿಕೆ |
| ಅಧ್ಯಾರೋಪಣ | ೫-೧೦೩ | ಆರೋಪಿಸುವುದು |
| ಅಧ್ವ | ೮-೨೮ | ಮಾರ್ಗ, ದಾರಿ |
| ಅಧ್ವರ | ೧-೭೪ | ಯಜ್ಞ |
| ಅನಃ | ೧-೬೯ | ಅಗ್ನಿ |

| | | |
|---|---|---|
| ಅನಾರತ | ೫-೯೬ | ಅನವರತ, ಯಾವಾಗಲೂ |
| ಅನಿಲ | ೨-೩೭ | ವಾಯು |
| ಅನಿವ | ೬-೩೧ ಗದ್ಯ, ೬-೩೨ | ಬಲಾತ್ಕಾರ |
| ಅನಿವಿಸು | ೬-೩೧ ಗದ್ಯ | ಬಲಾತ್ಕರಿಸು |
| ಅನೀಕ | ೧-೪೬ | ಸಮೂಹ |
| ಅನು | ೫-೬ | ಸಿದ್ಧತೆ |
| ಅನುಗೆಯ್ | ೪-೫೦, ೭-೧೦ | ಸಿದ್ಧಪಡಿಸು, ಹವಣಿಸು |
| ಅನುರೋಧ | ೭-೫೪ ಗದ್ಯ | ಬಲಾತ್ಕಾರ |
| ಅನುವಿಸು | ೪-೧೨೪, ೫-೧೦೪ | ಸಿದ್ಧಪಡಿಸು |
| ಅನ್ನಳ್ | ೭-೬ | ಅಂಥವಳು (ಮನದನ್ನಳ್-ಪ್ರಿಯಳು) |
| ಅನ್ನರ್ | ೬-೨೨ | ಅಂಥವರು (ಮನದನ್ನರ್-ಪ್ರಿಯರು) |
| ಅನ್ವಯ | ೭-೨೮ | ವಂಶ |
| ಅಪಗತ | ೭-೧೪ ಗದ್ಯ, ೭-೪೫ ಗ. | ಕಳೆದುಹೋದ |
| ಅಪತ್ಯ | ೧-೬೫, ೪-೩ ಗದ್ಯ | ಮಗ |
| ಅಪನೀತ | ೫-೫೮ ಗದ್ಯ | ತೆಗೆದುಹಾಕಿದ, ತೆಗೆದ |
| ಅಪನೋದ | ೨-೧೧ ಗದ್ಯ, ೭-೫೫ ಗ. | ಪರಿಹಾರ |
| ಅಪವರ್ಗ | ೪-೬೩ | ಮೋಕ್ಷ |
| ಅಪಾಂಗ | ೫-೨೫ | ಕಡೆಗಣ್ಣು |
| ಅಪೇತ | ೭-೧೪ ಗದ್ಯ | ಕಳೆದುಹೋದ, ಇಲ್ಲದ |
| ಅಪ್ಪುಕಯ್ | ೧-೭೨, ೨-೨೯ ಗದ್ಯ | ಅಂಗೀಕರಿಸು, ಹೊಂದು |
| ಅಪ್ರಾಕೃತ | ೫-೨ | ಅಸಾಮಾನ್ಯ |
| ಅಬ್ಜಾಕರ | ೧-೬೭ | ಸರೋವರ |
| ಅಬ್ಬೆ | ೫-೯೮ | ತಾಯಿ |
| ಅಬ್ರಹ್ಮಣ್ಯಂ | ೪-೮೯ | ಬ್ರಾಹ್ಮಣನು ವಿಪತ್ತೊದಗಿತೆಂದು ಕೂಗಿ ಕೊಳ್ಳುವುದು |
| ಅಭಿಧಾನ | ೧-೩೫ | ಹೆಸರು |
| ಅಭಿಷವ | ೩-೩೬ | ಅಭಿಷೇಕ |
| ಅಭ್ಯರ್ಹಿತ | ೫-೬೫ ಗದ್ಯ | ಮಾನ್ಯ, ಗೌರವಾರ್ಹ |
| ಅಭ್ಯಂತರ | ೧-೪೨ | ಒಳಗೆ |
| ಅಭ್ರಾಳಿ | ೧-೨೮ | ಮೋಡಗಳ ಗುಂಪು |
| ಅಭ್ರಂಕಷ | ೧-೪೯ ಗದ್ಯ | ಮುಗಿಲುಮುಟ್ಟುವ |
| ಅಮರ್ತ್ಯ ಮಾರ್ಗ | ೪-೧೦೩ | ಆಕಾಶ ಮಾರ್ಗ (ಅಮರ್ತ್ಯ—ದೇವತೆ) |
| ಅಮರ್ದು | ೪-೪೦ | ಅಮೃತ |
| ಅಮರ್ಷಣ | ೭-೪೫ ಗದ್ಯ | ಕೋಪ |
| ಅಮೃತಾಂಶು | ೮-೫೫ | ಚಂದ್ರ |
| ಅಮೇಯ | ೧-೩೮ | ಅಳತೆಗೆ ಮೀರಿದ |
| ಅಮ್ಮ | ೧-೫೩ | ತಂದೆ |
| ಅರಲ್ | ೭-೩೬ | ಹೂವು |
| ಅರಿದು | ೫-೧೦೩ | ಅಸಾಧ್ಯ |

| | | |
|---|---|---|
| ಅರ್ಣವ | ೨-೧೯ | ಸಮುದ್ರ |
| ಅಜಗುಲಿ | ೧-೫೧, ೪-೫೭ | ಧರ್ಮಘಾತುಕ, ಪಾಪಿ |
| ಅಲಕ್ತ | ೫-೪೧ | ಅರಗು |
| ಅಲರ್ | ೧-೬೮ ಗದ್ಯ | ಹೂವು |
| ಅಲರ್ವಸೆ | ೫-೮೯ | ಹೂವಿನ ಹಸೆ |
| ಅಲೆ | ೪-೯೧ | ಪೀಡಿಸು |
| ಅಲಂಪು | ೫-೯೨ | ಸಂತೋಷ |
| ಅಲುಂಬು | ೧-೭೧ | ತೊಳೆ |
| ಅವಕುಂಠಿತ | ೪-೯೬ ಗದ್ಯ | ಮುಸುಕು ಹಾಕಿದ |
| ಅವಗೃಹ್ಯಮಾಣ | ೭-೯ ಗದ್ಯ | ಹಿಡಿಯಲ್ಪಡುವ |
| ಅವಜ್ಞೆಗೆಯ್ | ೪-೧೧ ಗದ್ಯ, ೭-೪೬ ಗ. | ಕಡೆಗಣಿಸು, ಅಲಕ್ಷ್ಯಮಾಡು |
| ಅವತರಿಸು | ೨-೪೨ ಗದ್ಯ | ಇಳಿ |
| ಅವತಂಸ | ೪-೧೪ | (ಕಿವಿಯ) ಆಭರಣ |
| ಅವಧಾರಿಸು | ೫-೪೦ ಗದ್ಯ, ೫-೫೦ | ಭಾವಿಸು, ತಿಳಿ |
| ಅವನತ | ೫-೮ ಗದ್ಯ | ಬಾಗಿದ |
| ಅವನಮ್ರ | ೮-೨೬ ಗದ್ಯ | ,, |
| ಅವಸರ | ೪-೭೩ ಗದ್ಯ, ೫-೮ | ಸಮಯ |
| ಅವಿತಥ | ೨-೧೬ ಗದ್ಯ, ೪-೧೨೩ | ಸತ್ಯ, ನಿಜ |
| ಅವಿನ್ನಾಣ | ೫-೭೮ ಗದ್ಯ | ಸಂ.-ಅಭಿಜ್ಞಾನ, ಗುರುತು |
| ಅಸಮಾಸ್ತ್ರ | ೪-೯೧ | ಮನ್ಮಥ |
| ಅಸಿ | ೪-೬೪ | ಕತ್ತಿ |
| ಅಸಿತ | ೧-೫೫ | ಕಪ್ಪಾದ |
| ಅಸಿಯಳ್ | ೨-೫೧ | ಕೋಮಲೆ |
| ಅಸು | ೧-೬೧ | ಪ್ರಾಣ |
| ಅಸ್ಖಲಿತ | ೧-೨೪ | ದೃಢವಾದ |
| ಅಹಮಹಮಿಕೆ | ೭-೩ | ನಾನು ಮುಂದು ತಾನು ಮುಂದು ಎಂದು ಬರುವಿಕೆ |
| ಅಳವಿ | ೧-೪೩ ಗದ್ಯ, ೩-೪೬ | ಅಳತೆ |
| ಅಳವು | ೩-೧೪ | ಸಾಮರ್ಥ್ಯ |
| ಅಳಿನಿ | ೪-೮ | ಹೆಣ್ಣು ದುಂಬಿ |
| ಅಳಿಪು | ೮-೫೩ | ಲೋಲುಪತೆ, ಗೀಳು |
| ಅಳೀಕ | ೬-೩೫ | ಸುಳ್ಳು |
| ಅಳುರ್ | ೧-೬೦, ೧-೮೧, ೪-೩೫, ೪-೫೭ | ವ್ಯಾಪಿಸು, ಹರಡು |
| ಅಳ್ಕು | ೫-೩೨ | ಹೆದರು |
| ,, | ೪-೩೯ | ಶಕ್ತಿಗುಂದು, " ಸುಸ್ತಾಗು |
| ಅೞರ್ | ೧-೫೭, ೧-೬೦, ೬-೧೭ ಗದ್ಯ, ೭-೫೨ ಗದ್ಯ | ವ್ಯಥೆ, ವ್ಯಥೆಪಡು |
| ಅೞಿ | ೧-೪೪ | ನಾಶವಾಗು |

| | | |
|---|---|---|
| ಅಟಿಯಾಸೆ | ೭-೨೦ ಗದ್ಯ | ಹೀನವಾದ ಆಸೆ |
| ಅಱ್ಕಱು | ೧-೪೫ | ಅಕ್ಕರೆ, ಪ್ರೀತಿ |
| ಅಱ್ತು | ೧-೩೧ | ಪ್ರೀತಿ, ಆಸಕ್ತಿ |
| ಅಱ್ತೆಗೆ | ೨-೧೦ | ಪ್ರೀತಿಯುಳ್ಳವಳು |
| ಅಱ್ದು | ೬-೧೮ | ಅದ್ದು |
| ಅಂಗ | ೫-೧೦೪, ೪-೧೦೨ | ರೀತಿ |
| ಅಂಗಚಿತ್ತ | ೬-೧೧ ಗದ್ಯ | ಬಹುಮಾನ |
| ಅಂಗಯಷ್ಟಿ | ೬-೪ | ಯಷ್ಟಿ-ಹಾರ; ಯಷ್ಟಿಯಂತಿರುವ ಅಂಗ |
| ಅಂಘ್ರಿಪ | ೪-೧೪ | ಮರ |
| ಅಂಚಲ | ೨-೪೩ ಗದ್ಯ, ೪-೪೬ | ಸೆರಗು |
| ಅಂಚಿತ | ೧-೧೦ | ಸ್ಪಷ್ಟವಾದ, ಸುಂದರವಾದ |
| ಅಂಚೆ | ೩-೧೬ | ಹಂಸೆ |
| ಅಂಜಲ | ೪-೧೨೪ | ಬೊಗಸೆ |
| ಅಂಜುಳಿ | ೩-೪೫ ಗದ್ಯ | ,, |
| ಅಂತರಾಯ | ೬-೩೭ ಗದ್ಯ | ಅಡ್ಡಿ, ವಿಘ್ನ |
| ಅಂತರಿತ | ೭-೬೪ ಗದ್ಯ | ದೂರವಾದ |
| ಅಂತರಿತೆ | ೩-೪೭ | ದೂರವಾದವಳು |
| ಅಂತರಿಸು | ೮-೨೪ | ತಡಮಾಡು |
| ಅಂತು | ೪-೩೪ | ಕೊನೆ, ಸಂ.-ಅಂತ |
| ಅಂಶು | ೩-೨೩ | ಕಿರಣ, ಕಾಂತಿ |
| ಅಂಶುಕ | ೧-೧೮, ೪-೪೭ | ವಸ್ತ್ರ |

## ಆ

| | | |
|---|---|---|
| ಆಕಲಿತ | ೧-೬೮ ಗದ್ಯ, ೮-೪೬ | ಕೂಡಿದ |
| ಆಕುಲ | ೬-೧೯ | ವ್ಯಥೆ |
| ಆಕುಲೆ | ೮-೫೧ | ವ್ಯಥೆಯನ್ನು ಹೊಂದಿದವಳು |
| ಆಕೇಕರ | ೨-೪೨ | ಅರೆತೆರೆದ ಕಡೆಗಣ್ಣ ನೋಟ |
| ಆಕ್ಷಿಪ್ತ | ೨-೫೫ ಗದ್ಯ, ೭-೩೯ ಗದ್ಯ, ೪-೧೨೪ ಗದ್ಯ | ಕೂಡಿದ |
| ಆಗಡೆ | ೪-೪೮ | ಅಗಲೆ |
| ಆತಪ | ೭-೫೩ ಗದ್ಯ | ಬಿಸಿಲು |
| ಆತಪತ್ರ | ೨-೫೯ | ಕೊಡೆ |
| ಆತುರ | ೨-೪೪, ೮-೩೪ | ಪೀಡಿತ |
| ಆದಂ | ೧-೧೩ | ಹೆಚ್ಚಾಗಿ |
| ಆನಕ | ೮-೬೩ ಗದ್ಯ | ಭೇರಿ |
| ಆಪಗಾ | ೨-೫೭ | ನದಿ |
| ಆಪೀಡ | ೨-೨೭ | ಶಿರೋಭೂಷಣ |
| ಅಪೂರ | ೫-೪೨ | ತುಂಬುವಿಕೆ |
| ಆಪ್ಯಾಯಮಾನ | ೭-೪೫ ಗದ್ಯ | ಹಿತ |

| | | |
|---|---|---|
| ಆಭೋಗ | ೧-೭೪ | ವಿಸ್ತಾರ |
| ಆಮಳಕ | ೧-೩೩, ೧-೭೫ | ನೆಲ್ಲಿಯಕಾಯಿ |
| ಆಯತನ | ೩-೨೧, ೬-೨೯ ಗದ್ಯ | ಮನೆ, ಆಲಯ |
| ಆರ್ | ೨-೪೬, ೭-೪ ಗದ್ಯ | ತುಂಬು |
| ಆರೋಗಿಸು | ೫-೮೫ | ಊಟಮಾಡು |
| ಆರ್ದ್ರ | ೧-೩೨, ೭-೩೬ ಗದ್ಯ | ಒದ್ದೆಯಾದ |
| ಆರ್ಯೆ | ೧-೨೧, ೪-೩೮ ಗದ್ಯ | ಒಂದು ಪದ್ಯಜಾತಿ |
| ಆಱಿಸು | ೭-೧೯ | ಸಮಾಧಾನಪಡಿಸು |
| ಆಱು | ೪-೨೮ | ಸಮರ್ಥನಾಗು |
| ಆಲಜಾಲ | ೭-೨೦ ಗದ್ಯ | ಆಗದ ಹೋಗದ ಕಲ್ಪನೆ |
| ಆಲಿ | ೪-೨೯ | ಕಣ್ಣು |
| ಆವಿಷ್ಟೆ | ೭-೨೨ ಗದ್ಯ | ಆವೇಶವನ್ನು ಹೊಂದಿದವಳು |
| ಆವಿಳ | ೨-೩ | ಕಲುಷಿತವಾದ |
| ಆಶ್ವಾಸಿಸು | ೪-೧೨೩ | ಸಮಾಧಾನಪಡಿಸು |
| ಆಸತ್ತು | ೪-೨೭ | ಆಯಾಸಪಟ್ಟು (ಧಾ.-ಆಸಱು) |
| ಆಸನ್ನತೆ | ೮-೩ | ಸಾಮೀಪ್ಯ |
| ಆಸವ | ೪-೮ | ಮದ್ಯ |
| ಆಸಾರ | ೭-೩೭ | ಜಡಿಮಳೆ |
| ಆಸ್ಫಾಲನ | ೩-೩೮ | ತಟ್ಟುವಿಕೆ |
| ಆಸ್ವಾದಿಸು | ೧-೩೨ | ರುಚಿನೋಡು |
| ಆಹ್ವಯ | ೨-೧, ೩-೧೫ ಗ., ೫-೮೩ | ಹೆಸರು |
| ಆಳ್ | ೪-೧೦೪ | ಹೊಂದು |
| ಆಳವಾಳ | ೧-೭೩ | ಪಾತಿ |
| ಆಂದೋಳಿತ | ೮-೨೭ | ತೂಗಾಡಿಸಲ್ಪಟ್ಟ |

## ಇ

| | | |
|---|---|---|
| ಇಕ್ಕುವಡು | ೫-೮೫ ಗದ್ಯ | ಪೆಟ್ಟುತಾಳು |
| ಇಡಿ | ೩-೪೩, ೪-೩೧ | ದಟ್ಟವಾಗು |
| ಇತರೆ | ೫-೫೮ ಗದ್ಯ | ಹೀನಗುಣವುಳ್ಳವಳು, ಸಾಮಾನ್ಯೆ |
| ಇನಿವಿರಿದು | ೫-೮೦ | ಇನಿತು+ಪಿರಿದು |
| ಇನ್ನರ್ | ೪-೧೦೮ | ಇಂಥವರು |
| ಇರುಳ್ | ೫-೬೪ | ರಾತ್ರಿ |
| ಇರ್ಪು | ೫-೪೩, ೫-೭೮ ಗದ್ಯ, ೬-೧೬ | ದ್ರುವ |
| ಇರ್ಮೆ | ೭-೪೪ | ಎರಡು ಬಾರಿ |
| ಇಱುಂಬು | ೧-೪೦, ೧-೭೩ | ಇಕ್ಕಟ್ಟು, ಒತ್ತು, ಗುಂಪು |
| ಇಳಿಸು | ೨.೨ | ಹೀಯಾಳಿಸು |
| ಇಂಗಡಲ್ | ೪-೧ | ಕ್ಷೀರಸಮುದ್ರ |
| ಇಂಚರ | ೩-೧೬ | ಇಂಪಾದ ಸ್ವರ |

| | | |
|---|---|---|
| ಇಂದೂಪಲ | ೫-೮೫ | ಚಂದ್ರಕಾಂತ ಶಿಲೆ |
| ಇಂಧನ | ೪-೧೦೦ | ಕಟ್ಟಿಗೆ, ಸೌದೆ |

## ಈ

| | | |
|---|---|---|
| ಈಡಾಡು | ೭-೪೨ ಗದ್ಯ | ಬಿಡು, ಬಿಸುಡು |
| ಈಷದಾವಲಿತ | ೧-೭೬ ಗದ್ಯ | (ಈಷತ್+ಆವಲಿತ) ಸ್ವಲ್ಪ ತಿರುಗಿದ |
| ಈಟ್ಕೊಳ್ | ೧-೧೩ | ಸೆಳೆದುಕೊಳ್ಳು |
| ಈಂಟು | ೧-೩೧ | ಕುಡಿ |

## ಉ

| | | |
|---|---|---|
| ಉಕ್ಕೆವ | ೪-೧೧೧ | ಠಕ್ಕು, ಮೋಸ |
| ಉಗು | ೧-೭೦ | ಸ್ರವಿಸು, ಸುರಿ |
| ಉಗ್ಗಡ | ೧-೬೭ | ಆಧಿಕ್ಯ |
| ಉಗ್ಘಡಿಸು | ೫-೪೩ ಗದ್ಯ | ಪರಾಕು ಹೇಳು (ನೆಲನನುಗ್ಘಡಿಸು= ಪಾದಾವಧಾನವನ್ನು ಹೇಳು) |
| ಉಜ್ಜಳಿಕ್ಕೆ | ೭-೧೪ | ಪ್ರಕಾಶ, ಉಜ್ಜ್ವಲವಾದ ಕಾಂತಿ |
| ಉಜ್ಜುಗ | ೫-೫, ೫,೨೮ ಗದ್ಯ | ಉದ್ಯೋಗ |
| ಉಣ್ಮು | ೧-೪೯, ೧-೬೭ | ಉಂಟಾಗು |
| ಉತ್ಕ | ೪-೭೮ | ಮೈಮರೆತ |
| ಉತ್ಕರ | ೮-೩೯ | ಸಮೂಹ |
| ಉತ್ಕಲಿಕೆ | ೫-೭೪ | ಆತ್ಯೌತ್ಸುಕ್ಯ |
| ಉತ್ಕಂಠ | ೫-೩೦ ಗದ್ಯ | ,, |
| ಉತ್ತಮಾಂಗ | ೭-೩೬ | ತಲೆ |
| ಉತ್ತವಳಿಕೆ | ೪-೧೨೦ | ಔತ್ಸುಕ್ಯ |
| ಉತ್ತು | ೮-೪೦ | ಹೊಂದಿ (ಧಾ..ಉಟು=ಹೊಂದು, ಸೇರು) |
| ಉತ್ತುಂಗ | ೪-೧ | ಉನ್ನತ, ಶ್ರೇಷ್ಠ |
| ಉತ್ಥ | ೧-೪೬ | ಎದ್ದ |
| ಉತ್ಸಾರಿತ | ೬-೩ ಗದ್ಯ | ದೂರಕ್ಕೆ ಕಳುಹಲ್ಪಟ್ಟ |
| ಉತ್ಸೃಷ್ಟ | ೪-೫೬ ಗದ್ಯ | ಬಿಡಲ್ಪಟ್ಟ |
| ಉತ್ಸೇಧ | ೧-೪೯ ಗದ್ಯ | ಔನ್ನತ್ಯ, ಎತ್ತರ |
| ಉದಗ್ರ | ೨-೩೯ | ಎತ್ತರವಾದ |
| ಉದಧಿ | ೫-೮೪ ಗದ್ಯ | ಸಮುದ್ರ |
| ಉದಾರತೆ | ೧-೨ | ೧. ವಿಸ್ತಾರ, ೨. ಔದಾರ್ಯ |
| ಉದ್ಗತ | ೧-೧೮, ೨-೨೬, ೭-೪೮ಗ. | ಹೊರಹೊಮ್ಮಿದ, ಮೇಲಕ್ಕೆದ್ದ |
| ಉದ್ಗಾರಿ | ೫-೫೮, ೬-೧೧ ಗ., ೮-೨೭ | ಹೊರಸೂಸುವ |
| ಉದ್ಘೃಷ್ಟ | ೨-೨ | ಉಜ್ಜಲ್ಪಟ್ಟ |
| ಉದ್ದೇಸ | ೪-೧೫ | ಉದ್ದೇಶ |

| | | |
|---|---|---|
| ಉದ್ವೇಗ | ೩- ೯ | ವ್ಯಥೆ, ಕಳವಳ |
| ಉದ್ವೇಜನ | ೭- ೮ | ,, |
| ಉದ್ಭೇದ | ೫-೭೬ | ಹೊರಹೊಮ್ಮುವುದು |
| ಉನ್ನಮಿತ | ೧-೨೦ ಗದ್ಯ | ಎತ್ತಿದ |
| ಉಪಕರಣ | ೫-೬೨ | ಸಾಧನ |
| ಉಪದಿಶ್ಯಮಾನ | ೨-೪೫ ಗದ್ಯ | ತೋರಿಸಲ್ಪಡುವ |
| ಉಪಧಾನ | ೫-೫೮ | ದಿಂಬು |
| ಉಪನೀತ | ೮-೧೭ ಗದ್ಯ | ತರಲ್ಪಟ್ಟ |
| ಉಪಪ್ಲವ | ೨- ೩ ಗದ್ಯ | ಪೀಡೆ, ತೊಂದರೆ |
| ಉಪರತ | ೪-೫೬ ಗದ್ಯ, ೪-೧೦೪ ಗ. ಸತ್ತ | |
| ಉಪರೋಧಿಸು | ೩-೪೫ ಗದ್ಯ | ತಡೆ, ಅಡ್ಡಿಮಾಡು |
| ಉಪಲ | ೨-೫೭ | ಕಲ್ಲು |
| ಉಪಶಮ | ೪-೨೧ | ಶಾಂತಿ |
| ಉಪಹಾರ | ೧-೭೩ ಗದ್ಯ | ಪೂಜೆ, ಬಲಿ |
| ಉಪಾರೂಢ | ೨-೩೫ ಗದ್ಯ, ೫-೫ ಗದ್ಯ | ಬೆಳೆದ, ಹೆಚ್ಚಿದ |
| ಉಪಾಲಂಭನ | ೪-೯೬ ಗದ್ಯ | ನಿಂದೆ |
| ಉಪ್ಪವಡಿಸು | ೫-೬೫ ಗದ್ಯ | ಏಳು |
| ಉಬ್ಬೆಗ | ೩-೩೪, ೪-೫೨ | ಉದ್ವೇಗ, ಕಳವಳ |
| ಉಮ್ಮಳ | ೩-೪೫ | ವ್ಯಥೆ, ಕಳವಳ |
| ಉರುಳಿಗೊಳ್ | ೭-೫೪ | ಉಂಡೆಯಾಗು |
| ಉಱದೆ | ೭-೪೬ | ಲಕ್ಷ್ಯಮಾಡದೆ (ಧಾ.-ಉಱು) |
| ಉಲಿ | ೫-೮೪ | ಧ್ವನಿಮಾಡು |
| ಉಳಿ | ೧-೫೬, ೪-೩೧ | ಅಡಗು, ಬಚ್ಚಿಟ್ಟುಕೊಳ್ಳು |
| ಉಂತೆ | ೫-೧೧ | ಸುಮ್ಮನೆ, ಹಾಗೆ |

## ಊ

| | | |
|---|---|---|
| ಊಡು | ೧-೩೩ | ಊಟಮಾಡಿಸು, ತಿನ್ನಿಸು |
| ,, | ೮-೫೨ | ಲೇಪಿಸು |
| ಊದು | ೭-೧೮ | ಬೀಸು |

## ಋ

| | | |
|---|---|---|
| ಋಜು | ೫-೪೬, ೮-೬೮ | ಸರಳವಾದ |

## ಎ

| | | |
|---|---|---|
| ಎಕ್ಕಾವಳಿ | ೪-೯೬ | ಒಂಟೆಳೆಯ ಮುತ್ತಿನಹಾರ |
| ಎಗ್ಗ | ೪-೬೪ | ದಡ್ಡ |
| ಎಡರ್ | ೮-೬೦ | ಪ್ರತಿಬಂಧಕ, ತೊಂದರೆ |
| ಎನಸುಂ | ೧-೮೧, ೨-೩೪, ೫-೩೦, ೫-೯೧ | ಹೆಚ್ಚಾಗಿ |

ಎನ್ನಂ ೫-೬೩ ಎಂಥವನು
ಎನ್ನೊಂದಿಗರ್ ೪-೬೬ ನನ್ನಂಥವರು
ಎಮೆ ೬-೧೩ ರೆಪ್ಪೆ
ಎಯ್ತರ್ ೪-೧೧೦ ಬರು
ಎಯ್ದೆ ೧-೪೯ ಗದ್ಯ, ೪-೬೭ ಚೆನ್ನಾಗಿ, ಪೂರ್ತಿಯಾಗಿ
ಎರಳೆ ೪-೫೩ ಜಿಂಕೆ
ಎರೆ ೧-೫೫ ಆಹಾರ (ತಿರ್ಯಗ್ಜಂತುಗಳ ಗ್ರಾಸ)
ಎಱಕೆ ೧-೪೭ ರೆಕ್ಕೆ
ಎಱೆಯ ೧-೬, ೮-೬೪ ಒಡೆಯ
ಎಱಂಕೆ ೧-೫೬ ಗದ್ಯ ರೆಕ್ಕೆ
ಎಲರ್ ೪-೩೦ ಗಾಳಿ
ಎಲವ ೧-೪೧ ಬೂರುಗದ ಮರ
ಎಸಕ ೬-೯ ಕೆಲಸ
ಎಸಗು ೬-೨೦ ಧ್ವನಿ ಕೇಳಿಸು
ಎಸೆ ೩-೨೦, ೩-೩೩, ೪-೩೦ ,,
ಎಳವೆ ೧-೫೭, ೪-೩೩ ಬಾಲ್ಯ
ಎಳಸು ೧-೯, ೮-೪೯ ಬಯಸು, ಅಪೇಕ್ಷಿಸು
,, ೩-೪೬, ೫-೬೭ ವ್ಯಾಪಿಸು
ಎೞರ್ ೧-೫೬ ಗದ್ಯ, ೩-೧೮ ನೇತಾಡು, ಜೋಲು ಬೀಳು
ಎಱವು ೪-೪೧, ೫-೮೯, ೫-೯೨ ತಡವು, ಸವರು
ಎೞ್ತರ್ ೧-೧೫, ೫-೮೩ ಬರು
ಎೞ್ಬಟ್ಟು ೩-೪ ಒಡಿಸು

## ಏ

ಏಗಂ ೬-೨೪ ನಿಶ್ಚಯವಾಗಿಯೂ
ಏಣ ೧-೭೩ ಜಿಂಕೆ
ಏಱ್ ೮-೨೪ ಗದ್ಯ ಪೆಟ್ಟು, ಗಾಯ
ಏವರ್ ೪-೧೧೪ ಯಾರು, ಏನು ಮಾಡುವವರು
ಏವುದು ೫-೬೦, ೬-೧ ಯಾವುದು, ಏನುಮಾಡುವುದು, ಏನುಫಲ
ಏವೆಂ ೮-೧೪ ಏನು ಮಾಡಲಿ

## ಐ

ಐಕಿಲ್ ೪-೭೯ ಮಂಜುಗಡ್ಡೆ

## ಒ

ಒಗುಮಿಗೆ ೮-೨೫ ಆಧಿಕ್ಯ
ಒಗೆ ೧-೪೯ ಹುಟ್ಟು, ಉಂಟಾಗು
ಒಟ್ಟೈಸು ೮-೬೦ ಒಟ್ಟುಗೂಡು
ಒಡರಿಸು ೨-೧೨, ೬-೫ ಪ್ರಯತ್ನಿಸು

| | | |
|---|---|---|
| ಒಡರ್ಚು | ೮-೫೨ | ಪ್ರಯತ್ನಿಸು |
| ಒತ್ತಂಬ | ೧-೪೯ | ಬಲಾತ್ಕಾರ |
| ಒದವು | ೧-೨೧ | ಒದಗು, ಉಂಟಾಗು |
| ಒಯ್ಯನೆ | ೧-೬೮ | ಮೆಲ್ಲಗೆ |
| ಒರೆ | ೭-೨೫ | ಹೇಳು |
| ಒರ್ಮೊದಲ್ | ೫-೨೦ | ಒಂದೇ ಸಲ |
| ಒಱಲ್ | ೬-೩೦ | ಪ್ರೀತಿಸು |
| ಒಲವರ | ೮-೨೯ | ಪ್ರೀತಿ, ಪಕ್ಷಪಾತ |
| ಒಲವು | ೫-೨೩ | ಪ್ರೀತಿ |
| ಒಸಗೆ | ೨-೨೫ ಗದ್ಯ | ಉತ್ಸವ |
| ಒಸರ್ | ೫-೬೬ | ಸ್ರವಿಸು, ಸುರಿ |
| ಒಸೆ | ೮-೨೩ | ಪ್ರೀತಿಸು |
| ಒಸೆಯಿಸು | ೮-೭೦ | ಸಂತೋಷಗೊಳಿಸು |
| ಒಂದು | ೧-೯, ೫-೩೦ | ಹೊಂದು, ಸೇರು |

## ಓ

| | | |
|---|---|---|
| ಓಜೆ | ೩-೧೯ | ರೀತಿ, ಕ್ರಮ |
| ಓಪ | ೪-೭೬ | ಪ್ರಿಯ |
| ಓರಂತೆ | ೪-೬೭ | ಒಂದೇ ಸಮನಾಗಿ |
| ಓರಂದದೆ | ೧-೭೫ | ,, |
| ಓಲೈಸು | ೭-೪೮ ಗದ್ಯ | ಸೇವೆ ಸಲ್ಲಿಸು |
| ಓಷಧಿ | ೨-೫೭ | ವನಸ್ಪತಿ, ಮೂಲಿಕೆ |
| ಓಸರಿಸು | ೪-೪೧ | ಓರೆವಾಡು |
| ಓಳಿ | ೬-೨೮ | ಸಮೂಹ |

## ಕ

| | | |
|---|---|---|
| ಕಕ್ಷ್ಯ | ೫-೧೫ ಗದ್ಯ | ತೊಟ್ಟಿ |
| ಕಟಕ | ೨-೩೯ | ಕಡಗ |
| ,, | ೫-೭೪ ಗದ್ಯ | ಸೈನ್ಯ |
| ಕಟೀಸೂತ್ರ | ೧-೩೬ ಗದ್ಯ | ಒಡ್ಯಾಣ, ಡಾಬು |
| ಕಡುಪು | ೩-೩, ೭-೬೪ | ಬಲ |
| ಕಡೆಪ | ೧-೪೮ | ಕಡೆಯುವಿಕೆ |
| ಕಣಿ | ೪-೫೯ | ಗಣಿ |
| ಕಣ್ಬೊಲ | ೭-೧೭ | ಕಣ್ಣಿಗೆ ಕಾಣುವಷ್ಟು ಪ್ರದೇಶ |
| ಕತಿಪಯ | ೬-೧೫ ಗದ್ಯ | ಕೆಲವು |
| ಕದರ್ಥನೆ | ೫-೮೦ | ಕಾಡುವಿಕೆ |
| ಕದಂಪು | ೪-೧೮ | ಕೆನ್ನೆ |
| ಕದಂಬಕ | ೪-೭೮ | ಸಮೂಹ |
| ಕದಿರ್ | ೩-೨೮, ೫-೮೧ | ಕಿರಣ |

| | | |
|---|---|---|
| ಕನ್ನಡವಕ್ಕಿ | ೧-೨೯ | ಗಿಳಿ |
| ಕನ್ನೆವಾಡ | ೫-೩೧ ಗದ್ಯ,೫-೬೩ಗದ್ಯ | ಅಂತಃಪುರ |
| ಕಪ್ಪುರ | ೫-೭೮ | ಪಚ್ಚಕರ್ಪೂರ |
| ಕಯ್ಗಣ್ಮು | ೫-೭೪ ಗದ್ಯ | ಹೆಚ್ಚಾಗು |
| ಕಯ್ಗೆಯ್ | ೭-೨೬ ಗದ್ಯ | ಅಲಂಕರಿಸು |
| ಕಯ್ವಾರ | ೫-೧೦೩ | ಹೊಗಳಿಕೆ |
| ಕರುಮಾಡ | ೨-೪೭ | ಉಪ್ಪರಿಗೆ |
| ಕರುವಿಡು | ೬-೩೦ | ಎರಕ ಹೊಯ್ಯು |
| ಕರಂ | ೧-೩೨ | ಹೆಚ್ಚಾಗಿ |
| ಕರಂಕ | ೧-೨೭ ಗದ್ಯ | ಸಣ್ಣ ಪೆಟ್ಟಿಗೆ |
| ಕರ್ಚು | ೧-೭, ೩-೨೪ | ತೊಳೆ |
| ಕರ್ಣಪೂರ | ೪-೧೨ | ಕಿವಿಯ ಆಭರಣ |
| ಕಱುತ್ತು | ೪-೧೧೯ | ಕೋಪಿಸಿ, ಧಿಕ್ಕರಿಸಿ |
| ಕಱಂಗು | ೪-೩೫ | ಕಪ್ಪಾಗು |
| ಕಲ | ೧-೧೦, ೫-೮೪ | ಇಂಪಾದ, ಮಧುರಾಸ್ಫುಟವಾದ |
| ಕಲಾಪ | ೨.೩೪ | ನವಿಲಿನ ಪುಚ್ಛ |
| ,, | ೫-೮೪, ೮-೪೪ | ಸಮೂಹ |
| ಕವಲ್ಗಣ್ | ೧-೪೦ | ಕೊಂಬೆ ಕವಲೊಡೆದಿರುವ ಸ್ಥಳ |
| ಕವಿ | ೧-೨ | ೧. ನೀರು ಹಕ್ಕಿ, ೨. ಕಾವ್ಯಕರ್ತೃ |
| ಕಳ್ | ೪-೩೯ | ಮದ್ಯ |
| ಕಳಕಂಠ | ೧-೩೧ | ಕೋಗಿಲೆ |
| ಕಳೆದುಕೊಳ್ | ೪-೩೬ ಗದ್ಯ, ೬-೧೧ ಗ. | ತೆಗೆದುಕೊಳ್ಳು, ಇಸುಕೊಳ್ಳು |
| ಕೞಲ್ | ೧-೪೪ | ಶಿಥಿಲವಾಗು |
| ಕೞಿ | ೧-೪೩ ಗದ್ಯ | ನಾಯಿ |
| ಕಾಕಲಿ | ೩-೧೯ | ಮೃದುಗಾನ |
| ಕಾಪು | ೬-೩೪ | ಕಾವಲು, ರಕ್ಷಣೆ |
| ಕಾರ್ | ೮-೨೭ | ಅಗಿ, ಮೆಲ್ಲು |
| ಕಾರ್ಗಾಲ | ೧-೪೮ | ಮಳೆಗಾಲ |
| ಕಾಲಾಯಸ | ೮-೨೮ ಗದ್ಯ | ಕಬ್ಬಿಣ |
| ಕಿನಿಸು | ೭-೨೨ ಗದ್ಯ | ಕೋಪ |
| ಕಿಱುಕುಳ | ೭-೫೮ | ಅಲ್ಪ |
| ಕಿಱುಳ | ೮-೧೫ | ,, |
| ಕಿಶೋರಕ | ೨-೨೮ | ಮರಿ |
| ಕಿಸಲಯ | ೧-೭೦ | ಚಿಗುರು |
| ಕಿಱ್ವಾಳವಳ್ | ೧-೨೮ | ಬಿಚ್ಚುಕತ್ತಿಯನ್ನು ಹಿಡಿದ ರಾಜನ ಅಂಗ ರಕ್ಷಕರು |
| ಕೀರ | ೧-೧೨ | ಗಿಳಿ |
| ಕೀಱ್ | ೧-೫೫ | ಘೀಳಿಡು, ಶಬ್ದಮಾಡು |
| ,, | ೨-೩೯ | ಕಡಿವಾಣ |

| | | |
|---|---|---|
| ಕೀೞ್ಪಡು | ೫-೬೨ ಗದ್ಯ | ಹೀನೈಸಿಕೊಳ್ಳು |
| ಕುಜಾತ | ೪-೪ | ಮರ |
| ಕುಟ್ಟಿಮ | ೧-೧೭ ಗದ್ಯ | ನೆಲಗಟ್ಟು |
| ಕುಡಿತೆ | ೧-೬೮, ೭-೪ | ಬೊಗಸೆ |
| ಕುಡುಮಿಂಚು | ೮-೪೬ | ಕೊಂಕಾದ ಮಿಂಚು, ಬಳ್ಳಿಮಿಂಚು |
| ಕುತ್ತು | ೮-೨ ಗದ್ಯ, ೮-೨೪ ಗದ್ಯ | ಬಡಿ, ಹೊಡೆತ |
| ಕುಭೃತ್ | ೧-೭ | ರಾಜ |
| ಕುರುಳ್ | ೪-೪೧ | ತಲೆಯ ಕೂದಲು |
| ಕುಳಿರ್ | ೫-೮೭, ೮-೫೫ | ತಣ್ಣಗಿರು |
| ಕುಳಿ | ೧-೪೪ | ಗುಂಡಿ, ತಗ್ಗು, ಗುಳಿ |
| ಕೂರ್ | ೫-೪೬, ೭-೩೧ | ಪ್ರೀತಿಸು |
| ಕೂರ್ಮೆ | ೪-೮೭ | ಪ್ರೀತಿ |
| ಕೃಪಣ | ೪-೯೬ ಗದ್ಯ | ದೀನ |
| ಕೆಚ್ಚನೆ | ೭-೪೫ ಗದ್ಯ | ಕೆಂಪಗೆ |
| ಕೆಡೆ | ೭-೨೩ | ಬೀಳು |
| ಕೆತ್ತು | ೪-೮೨, ೬-೧೩ | ಅದಿರು, ನಡುಗು |
| ಕೆಮ್ಮಗೆ | ೪-೬೪ | ಸುಮ್ಮನೆ, ನಿಷ್ಫಲವಾಗಿ |
| ಕೆಮ್ಮನೆ | ೩-೪೫ | ,, |
| ಕೆಳೆಯ | ೭-೪೭ ಗದ್ಯ | ಗೆಳೆಯ, ಸ್ನೇಹಿತ |
| ಕೇಯೂರ | ೮-೪೬ | ತೋಳು ಬಂದಿ |
| ಕೇಸಡಿ | ೭-೬೪, ೮-೫೨ | ಕೆಂಪಾದ ಅಡಿ |
| ಕೈರಾತ | ೧-೪೬ | ಕಿರಾತರಿಗೆ ಸಂಬಂಧಪಟ್ಟ |
| ಕೊಳ್ | ೩-೩೪ | ತಾಗು, ಆಕ್ರಮಿಸು |
| ಕೋಟರ | ೧-೪೨ | ಪೊಟ್ಟರೆ |
| ಕೋಡು | ೧-೪೦ | ಕೊಂಬೆ |
| ಕೋರಯ್ಸು | ೮-೪೩ | ಕುಕ್ಕು |
| ಕೌಳುಡೆ | ೫-೧೮, ೫-೩೭ | ಮೆತ್ತೆ, ದಿಂಬು |
| ಕಂಟಣಿಸು | ೮-೩೫ ಗದ್ಯ | ಕುಗ್ಗು, ಎದೆಗೆಡು |
| ಕಂಡರಿಸು | ೨-೪೭. ೪-೫೬ ಗದ್ಯ | ಕೊರೆ, ಕಡೆತಕ್ಕೆಕೊಡು |
| ಕಂತು | ೧-೯ | ಮನ್ಮಥ |
| ಕಂಧರ | ೧-೭೬ ಗದ್ಯ | ಕುತ್ತಿಗೆ |
| ಕಾಂತ | ೮-೫೦ | ಮನೋಹರ |
| ಕುಂಚ | ೪-೩೯, ೫-೩೯ | ನವಿಲುಗರಿಯ ಕಟ್ಟು |
| ಕುಂಚಿಗೆ | ೩-೨೪ | ತೂಲಿಕೆ, "ಬ್ರಷ್ಷು" |
| ಕೊಂಡು | ೧-೪೭ | ಧಾ.-ಕೊಳ್; ಮಳೆ ಕೊಂಡು ಬಿಟ್ಟ ತೆಱಂ = ಮಳೆ ಬಂದು ಬಿಟ್ಟರೀತಿ |
| ಕ್ರಂದನ | ೪-೮೮ | ಅಳು |
| ಕ್ರಾಂತಿ | ೬-೧೮ | ತಳಮಳ |
| ಕ್ಷಪಿತ | ೫-೨೩ ಗದ್ಯ | ಕ್ಷೀಣವಾದ |

| | | |
|---|---|---|
| ಕ್ಷಪಯಿಸು | ೪-೧೧೫ | ಕ್ಷೀಣವಾಗುವಂತೆ ಮಾಡು |
| ಕ್ಷಮ | ೭-೭೪ ಗದ್ಯ | ಸಮರ್ಥ |
| ಕ್ಷುಣ್ಣ | ೨-೨೧ | ತುಳಿಯಲ್ಪಟ್ಟ, ಅನುಸರಿಸಿದ |
| ಕ್ಷುಭಿತ | ೧-೨೭ ಗದ್ಯ | ತಳಮಳ ಹೊಂದಿದ, ಅಲ್ಲಕಲ್ಲೋಲವಾದ |
| ಕ್ಷ್ಮಾಧರ | ೧-೭೪ | ಬೆಟ್ಟ |

## ಖ

| | | |
|---|---|---|
| ಖಲೀನ | ೨-೩೯ | ಕಡಿವಾಣ |
| ಖುರ | ೨-೩೯ | ಗೊರಸು |

## ಗ

| | | |
|---|---|---|
| ಗದ್ಗದಿಕಾ | ೭-೯ ಗದ್ಯ | ಅಸ್ಪಷ್ಟ ಧ್ವನಿ |
| ಗಭೀರ | ೧-೨ | ೧. ಆಳ, ೨. ಗಂಭೀರ |
| ಗರಿಷ್ಠ | ೮-೭ | ಶ್ರೇಷ್ಠ |
| ಗರ್ಹಿತ | ೧-೧೬ | ನಿಂದಾಸ್ಪದ |
| ಗವ್ಯೂತಿ | ೬-೨೯ ಗದ್ಯ | ಸುಮಾರು ಎರಡು ಮೈಲ |
| ಗಹನ | ೧-೮೩, ೪-೮೪ | ಅಡವಿ |
| ಗಬಗೈಸು | ೧-೫೮ | ತ್ವರೆಗೊಳ್ಳು |
| ಗಬಪು | ೧-೩೩, ೩-೪೧ | ಹರಟು |
| ಗಾಡಿ | ೫-೯ | ಸೌಂದರ್ಯ |
| ಗಾತ್ರ | ೨-೧೫ | ದೇಹ |
| ಗಾವರ | ೩-೧೯ | ಧ್ವನಿ |
| ಗುಡಿಗಟ್ಟು | ೭-೨೬ ಗದ್ಯ | ಉತ್ಸಾಹಹೊಂದು (ಗುಡಿ = ಬಾವುಟ) |
| ಗುಣಪಣ | ೫-೫೫ | ಸದ್ಗುಣವೆಂಬ ಹಣ |
| ಗುಣ್ಪು | ೧-೩೭ | ಆಳ |
| ಗುಲ್ಮ | ೪-೮೮ | ಪೊದೆ |
| ಗೆತ್ತು | ೪-೨೫ | ಭಾವಿಸಿ, ಭ್ರಮಿಸಿ (ಧಾ.-ಗಿಱು) |
| ಗೇಯ | ೩-೨೦ | ಗಾನ, ಸಂಗೀತ |
| ಗೋಣ್ | ೧-೫೬ ಗದ್ಯ | ಕುತ್ತಿಗೆ |
| ಗೋರಿ | ೪-೫೩ | ಮೃಗಗಳನ್ನು ಮೋಹಿಸುವ ಗಾನ |
| ಗೋಷ್ಠಿ | ೮-೭ | ಸಭೆ |
| ಗೋಸನೆ | ೭-೧೪ | ಸಂ.-ಘೋಷಣ, ಸಾರುವುದು |
| ಗಂಧವಹ | ೮-೬ | ವಾಯು, ಗಾಳಿ |
| ಗೆಂಟು | ೬-೧೧ ಗದ್ಯ, ೬-೨೯ ಗ. | ದೂರ |

## ಘ

| | | |
|---|---|---|
| ಘನ | ೧-೪೬ | ಮೋಡ |
| ಘರ್ಮೋದ | ೫-೨೫ | ಬಿಸಿ ನೀರು |
| ಘಟಿಲನೆ | ೪-೮೯ | ಬೇಗ |
| ಘೂರ್ಣಿಸು | ೨-೧೯ | ಮೊರೆ, ಭೋರೆಂದು ಶಬ್ದವಾಗು |

## ಚ

| | | |
|---|---|---|
| ಚಕ್ರವಾಳ | ೧-೩೮ | ಮಂಡಲ, ಸುತ್ತುವಳಯ |
| ಚಮ್ಮಟಿಗೆ | ೮-೨೪ ಗದ್ಯ | ಸಂ.-ಚರ್ಮಪಟ್ಟಿಕಾ, ಬಾರುಕೋಲು |
| ಚರ್ಚೆ | ೪-೭೯ ಗದ್ಯ | ಲೇಪನ |
| ಚಾಟು | ೪-೯೬ ಗದ್ಯ | ಕುಶಲೋಕ್ತಿ, ಪ್ರಿಯವಚನ |
| ಚುಬುಕ | ೨-೪೫ | ಗಲ್ಲ |
| ಚೆಚ್ಚರ | ೩-೭ | ಬೇಗ |
| ಚಂಚತ್ | ೧-೧ | ಚಲಿಸುವ, ಅಲ್ಲಾಡುವ |
| ಚಂಚರೀಕ | ೮-೫೦ | ದುಂಬಿ |
| ಚಂಚು ಪುಟ | ೧-೪೫ | ಕೊಕ್ಕು |
| ಚಂಡಿಕೆ | ೧-೧೫ | ತಲೆಯ ಕೂದಲು |
| ಚಂದ್ರಾತಪ | ೫-೪೫ | ಬೆಳ್ದಿಂಗಳು |

## ಛ

| | | |
|---|---|---|
| ಛನ್ನ | ೧-೨೮ | ಮುಚ್ಚಿದ |
| ಛಲ | ೫-೭ ಗದ್ಯ | ವ್ಯಾಜ, ನೆವ |
| ಛವಿ | ೧-೩೧ | ಬಣ್ಣ, ಕಾಂತಿ |

## ಜ

| | | |
|---|---|---|
| ಜಕ್ಕವಕ್ಕಿ | ೫-೬೫ | ಚಕ್ರವಾಕಪಕ್ಷಿ |
| ಜಡಿ | ೬-೩೧ ಗದ್ಯ | ಗದರಿಸು |
| ಜರಠ | ೧-೩೮ | ಮುದಿ |
| ಜರ್ಜರಿತ | ೧-೩೭ ಗದ್ಯ | ಶಿಥಿಲವಾದ, ಒಡೆದ, ಚೂರಾದ |
| ಜಲಕ್ಕನೆ | ೭-೫೨ | ಬೇಗ |
| ಜವ | ೧-೫೩ | ಯಮ |
| ,, | ೧-೬೪ | ವೇಗ |
| ಜಾನಿಸು | ೭-೪೭ ಗದ್ಯ | ಧ್ಯಾನಿಸು |
| ಜಾಮಾತೃ | ೮-೬೧ ಗದ್ಯ | ಅಳಿಯ |
| ಜಾಯಾ | ೧-೪೨ | ಹೆಂಡತಿ |
| ಜೀವನ | ೧-೨ | ೧. ನೀರು, ೨. ಬದುಕು |
| ಜೇವೊಡೆ | ೧-೫೫ | ಹೆದೆಯ ಪೆಟ್ಟು |
| ಜೊನ್ನ | ೫-೪೪ | ಸಂ.-ಜ್ಯೋತ್ಸ್ನಾ, ಬೆಳ್ದಿಂಗಳು |
| ಜೋಗಪಟ್ಟಿಗೆ | ೩-೩೯ | ಸಂ.-ಯೋಗಪಟ್ಟಿಕಾ, ಧ್ಯಾನಕಾಲದಲ್ಲಿ ಯೋಗಿಗಳು ಬೆನ್ನು ಮೊಳಕಾಲುಗಳನ್ನು ಸೇರಿಸಿ ಕಟ್ಟುವ ಬಟ್ಟೆ |
| ಜಂಬು | ೮-೨೬ ಗದ್ಯ | ನೇರಿಳೆ |
| ಜ್ಯಾ | ೩-೧೯ | ಬಿಲ್ಲಿನ ಹೆದೆ |

## ಝ

| | | |
|---|---|---|
| ಝೋಂಪಿಸು | ೫-೬೪ | ತೂಕಡಿಸು |

## ಡ

| | | |
|---|---|---|
| ಡಾವರ | ೪-೨೦ | ದಗೆ, ದಾಹ |
| ಡೋಲಾಯಮಾನ | ೫-೩೭ ಗದ್ಯ | ತೂಗಾಡುವ |

## ತ

| | | |
|---|---|---|
| ತಗುಳ್ | ೧-೩೬ ಗದ್ಯ, ೪-೭ | ಆರಂಭಿಸು, ಮೊದಲು ಮಾಡು |
| ತಗೆ | ೫-೭೪ | ತಡೆ ಮಾಡು |
| ,, | ೮-೩೭ ಗದ್ಯ | ಅಡ್ಡಿ |
| ತಣಿ | ೧-೩೧ | ತೃಪ್ತಿಹೊಂದು |
| ತನಿ | ೬-೧೩ | ಹೆಚ್ಚಾಗಿ |
| ತನಿಗಂಪು | ೪-೧೦೪ | ಹೆಚ್ಚಾದ ಸುಗಂಧ |
| ತಮಾಲ | ೪-೩೫ | ಹೊಂಗೆಮರ |
| ತರ | ೧-೭೩ | ಕ್ರಮ |
| ತರಳ | ೫-೨೨ | ಚಂಚಲವಾದ |
| ತರಳತೆ | ೮-೫ | ಚಾಂಚಲ್ಯ |
| ತರಂಗಿಣಿ | ೫-೮೭ | ನದಿ |
| ತವು | ೮-೬ | ಕ್ಷೀಣವಾಗು |
| ತಳರ್ | ೪-೨೫ ಗದ್ಯ | ಹೊರಡು |
| ತಳವೆಳಗಾಗು | ೪-೫೮ | ಬೆರಗಾಗು |
| ತಳಿರ್ | ೧-೪೦ | ಚಿಗುರು |
| ತಳೆ | ೭-೫೨ ಗದ್ಯ | ಹೊಂದು |
| ತಳ್ವೊಯ್ | ೨-೩೧ | ತಾಗು |
| ತಳ್ವು | ೬-೧೦ | ಸಾವಕಾಶ, ತಡ |
| ತಪ್ಕೈಸು | ೨-೨೫ | ಆಲಂಗಿಸು |
| ತಟ್ಪುರ್ | ೩-೨೦ | ತಪ್ಪಲು |
| ತಾಣ | ೧-೪೦ | ಸ್ಥಾನ |
| ತಾರಕ | ೪-೧೭ | ನಕ್ಷತ್ರ |
| ತಾರಹಾರ | ೪-೩೮, ೫-೪೫ | ಮುತ್ತಿನ ಹಾರ |
| ತಾರಾಚಲ | ೩-೪ | ತಾರ(ಬೆಳ್ಳಿ) + ಅಚಲ=ಕೈಲಾಸಪರ್ವತ |
| ತಾರೆ | ೬-೫ | ಕಣ್ಣಿಗುಡ್ಡೆ |
| ತಾಳವೃಂತ | ೧-೮೪, ೫-೯೬ | ಬೀಸಣಿಗೆ |
| ತಾಳ್ದು | ೭-೫೬ | ತಾಳು, ಹೊಂದು |
| ತಾಟವಣ್ | ೧-೪೫ | ತಾಳೆಯಹಣ್ಣು |
| ತಿಣ್ಣ | ೧-೬೩ | ದುರ್ಭರ, ಹೆಚ್ಚು |
| ತಿರೋಹಿತ | ೫-೮೪ ಗದ್ಯ | ಮರೆಯಾದ |

| | | |
|---|---|---|
| ತಿರ್ಯಕ್ | ೧-೨೧, ೮-೪ ಗದ್ಯ | ಪಶುಪಕ್ಷಿ |
| ತಿಱು | ೭-೧೬ | ಹೂ ಕೊಯ್ಯು |
| ತಿಳಿಪು | ೧-೧೯ | ಮುನಿಸು, ತಿಳುಹು |
| ತೀವು | ೧-೩೭, ೩-೪೦ | ತುಂಬು |
| ತುಡುಗೆ | ೬-೧೧ ಗದ್ಯ | ಆಭರಣ |
| ತುಱುಗರ್ | ೬-೧೩ | ಸಮೂಹ |
| ತುಹಿನಗಿರಿ | ೧-೨೮ | ಹಿಮಾಲಯ ಪರ್ವತ |
| ತೆಕ್ಕನೆ | ೭-೦ ಗದ್ಯ | ಹೆಚ್ಚಾಗಿ |
| ತೆರಳ್ | ೧-೫೬ ಗದ್ಯ | ಒಟ್ಟುಗೂಡು |
| ತೆಱಂಬೊಳೆ | ೪-೧೨, ೮-೫೫ | ಸ್ಪಷ್ಟವಾಗಿ ಹೊಳೆ |
| ತೊಟ್ಟಗೆ | ೬-೨೧ | ಬೇಗ |
| ತೊಟ್ಟನೆ | ೧-೫೧ ಗದ್ಯ | ,, |
| ತೊಟ್ಟು | ೪-೫೪, ೬-೩೫ | ಹಿಡಿದು, ತೊಡಗಿ, (ಧಾ. ತುಡು); ಅಂದು ತೊಟ್ಟು = ಅಂದಿನಿಂದ |
| ತೊಡರ್ಪು | ೭-೧೦ ಗದ್ಯ | ಸಿಕ್ಕು, ತೊಡರು |
| ತೊಡವು | ೮-೫೨ | ಆಭರಣ |
| ತೊರೆ | ೧-೫೫ | ಸುರಿ, ಸ್ರವಿಸು |
| ತೊೞಲ್ | ೬-೩೩ ಗದ್ಯ | ಸುತ್ತಾಡು |
| ತೊೞ್ತು | ೪-೯೪ | ತೊತ್ತು, ಸೇವಕ |
| ತೋರ | ೬-೧೪ | ದೊಡ್ಡ |
| ತೋರ್ಕೆಗೊಡು | ೫-೩೦ | ನಜರಾಗಿ ಕೊಡು, ಕಾಣಿಕೆ ಒಪ್ಪಿಸು |
| ತೋಱ್ | ೮-೩೯ | ತೊಗಲು |
| ತಂಬುಲ | ೫-೨೭ | ತಾಂಬೂಲ |
| ತಾಂಡವ | ೧-೩೮ | ಕುಣಿತ |
| ತೇಂಕಾಡು | ೪-೯೬ ಗದ್ಯ | ತೇಲು |
| ತೇಂಕು | ೫-೪೨ | ,, |
| ತೊಂಗಲ್ | ೪-೯೬ ಗದ್ಯ | ಗುಂಪು, ಸಮೂಹ |
| ತ್ರಾಣ | ೬-೧೯ ಗದ್ಯ | ರಕ್ಷಣೆ |
| ತ್ರಿದಶ | ೧-೧೨, ೬-೩೧ | ದೇವ |

## ದ

| | | |
|---|---|---|
| ದಕ್ಷಿಣ | ೧-೨೦ | ಬಲಗಡೆಯ |
| ದಡ್ಡು | ೮-೨೪ ಗದ್ಯ | ಜಡ್ಡು, ಕಾಯಿಗಟ್ಟಿಕೊಳ್ಳುವುದು |
| ದರ್ | ೫-೩೯ | ನಿಶ್ಚಯವಾಗಿ |
| ದಳತ್ | ೫-೫೮ | ಬಿರಿಯುವ |
| ದಾನ | ೨-೧೭ | ಮದಜಲ |
| ದಾಮ | ೫-೪೫ ಗದ್ಯ | ಹಾರ |
| ದಾವ | ೪-೬೫ | ಅಡವಿ |
| ದಿಟ್ಟಿ | ೫-೨೦ | ದೃಷ್ಟಿ, ನೋಟ |

| | | |
|---|---|---|
| ದಿವ | ೪-೧೬ | ಸ್ವರ್ಗ, ಆಕಾಶ |
| ದುಗುಲ | ೪-೧೧೭ | ಸಂ..ದುಕೂಲ, ರೇಷ್ಮೆಯ ಬಟ್ಟೆ |
| ದುಗ್ಧ | ೫-೮೪ ಗದ್ಯ | ಹಾಲು |
| ದುರಾರೋಹ | ೧-೪೯ ಗದ್ಯ | ಹತ್ತುವುದಕ್ಕೆ ಕಷ್ಟವಾದ |
| ದುರೋದರ | ೫-೩೧ ಗದ್ಯ | ಪಗಡೆ |
| ದುರ್ವಾರ | ೮-೩೯ | ತಡೆಯಲಾಗದ |
| ದೂವೆ | ೧-೬೪ | ಸಂ..ಧೂಮ, ಹೊಗೆ |
| ದೂಸಱ್ | ೭-೩೦, ೭-೪೩ | ಕಾರಣ |
| ದೇಗುಲ | ೬-೧೬ ಗದ್ಯ | ದೇವಾಲಯ |
| ದೇಶ | ೧-೪೦ | ಪ್ರದೇಶ, ಸ್ಥಳ |
| ದೊರೆ | ೬-೨೮ | ಸಮಾನ |
| ದೊರೆಕೊಳ್ | ೧-೩೬ | ಸಿಕ್ಕು |
| ದೌವಾರಿಕೆ | ೧-೨೮ಗದ್ಯ, ೨-೩೫ ಗ. | ಬಾಗಿಲು ಕಾಯುವವಳು |
| ದಂತುರ | ೮-೨೪ | ಉಬ್ಬುತಗ್ಗಾದ |
| ದಂಶ | ೪-೭೯ | ಕಡಿಯುವಿಕೆ |
| ದಾಂಗುಡಿ | ೨-೫೮ | ಉದ್ದವಾದ ಕುಡಿ |

## ಧ

| | | |
|---|---|---|
| ಧಾರಾ | ೧-೭ | ಕತ್ತಿಯ ಬಾಯಿ |
| ಧೃತಿ | ೪-೫೫ | ಧೈರ್ಯ |
| ಧೌತ | ೧-೭೧ | ಶುಭ್ರವಾದ, ಬೆಳ್ಳಗಿರುವ |
| ಧ್ವಾನ | ೧-೪೬ | ಧ್ವನಿ |

## ನ

| | | |
|---|---|---|
| ನಚ್ಚು | ೭-೨ | ಪ್ರೀತಿ, ನಂಬಿಕೆ |
| ನಟ | ೧-೩೮ | ಶಿವ, ನಟರಾಜ |
| ನಡಪಾಡು | ೬-೧೬ | ತಿರುಗಾಡು |
| ನಡಪು | ೧-೬೨ | ಸಾಕು, ಸಲಹು |
| ನಣ್ಪು | ೫-೮೦ | ಪ್ರೀತಿ |
| ನದಿಪು | ೭-೪ | ನಂದಿಸು, ಆರಿಸು |
| ನನ್ನಿ | ೪-೩೪ | ಸತ್ಯ |
| ನಲವು | ೪-೭ | ಸಂತೋಷ |
| ನಸು | ೫.೭೭ | ಸ್ವಲ್ಪ |
| ನಾಗ | ೨-೧೭ | ಆನೆ |
| ನಾಡಾಡಿ | ೫-೯ | ಸಾಮಾನ್ಯ |
| ನಾಡೆ | ೨-೨೬ | ಚೆನ್ನಾಗಿ |
| ನಾಣ್ | ೪-೧೨ | ನಾಚಿಕೆ |
| ನಾನ್ | ೪-೯೮ | ಒದ್ದೆಯಾಗು |
| ನಿಕಾಯ | ೧-೫೦ | ಸಮೂಹ |

| | | |
|---|---|---|
| ನಿಕೇತನ | ೨-೨೮ ಗದ್ಯ | ಮನೆ |
| ನಿಕ್ಕುವ | ೬-೬ | ನಿಶ್ಚಯ |
| ನಿಚ್ಚ | ೨-೩೦ | ನಿತ್ಯ |
| ನಿಚ್ಚಯ್ದೆ | ೭-೬೯ | ದೀರ್ಘಸುಮಂಗಲಿ |
| ನಿತಂಬಿನಿ | ೧-೯ | ಹೆಂಗಸು |
| ನಿತಾಂತ | ೧-೨ | ಹೆಚ್ಚು |
| ನಿಸ್ತರಿಸು | ೬-೯ | ಸಹಿಸು, ದಾಟು |
| ನಿಧಾನ | ೪-೨೯ | ನಿಧಿ |
| ನಿಬದ್ಧ | ೭-೫೪ ಗದ್ಯ | ಕಟ್ಟಲ್ಪಟ್ಟ |
| ನಿಭ | ೪-೦ ಗದ್ಯ | ಸಮಾನ |
| ನಿಮಿತ್ತ | ೪-೮೨ | ಶಕುನ |
| ನಿಮಿರ್ | ೨-೫೭ | ಪ್ರಸರಿಸು, ಹರಡು |
| ನಿಮಿರ್ಕೆ | ೫-೫೩ ಗದ್ಯ | ಪ್ರಸರಣ |
| ನಿಮಿರ್ಚು | ೪-೩೬ ಗದ್ಯ | ಪ್ರಸಾರಮಾಡು |
| ನಿಮೀಲಿತ | ೬-೧೭ ಗದ್ಯ | ಮುಚ್ಚಿದ |
| ನಿಮೇಷ | ೪-೫೬ ಗದ್ಯ | ರೆಪ್ಪೆ ಬಡಿಯುವುದು |
| ನಿಯಮಿಸು | ೩-೧೫ | ಕಟ್ಟು |
| ನಿಯೋಗ | ೬-೧೧ ಗದ್ಯ | ಕೆಲಸ |
| ನಿರವಿಸು | ೬-೧೭ | ಸಂ.—ನಿರೂಪಿಸು, ತಿಳಿಸು |
| ನಿರಾಕುಳಂ | ೮-೪೨ | ತೊಂದರೆಯಿಲ್ಲದೆ |
| ನಿರ್ಘೃಣ | ೧-೫೫ | ಕರುಣೆಯಿಲ್ಲದವನು |
| ನಿರ್ಝರ | ೩-೩೮ | ಬೆಟ್ಟದ ಝರಿ, ಅಬ್ಬಿ |
| ನಿರ್ಧೌತ | ೧-೬೮ ಗದ್ಯ | ತೊಳೆಯಲ್ಪಟ್ಟ |
| ನಿರ್ಭರ | ೭-೫೪ ಗದ್ಯ | ಹಿಡಿಸಲಾರದ |
| ನಿರ್ವರ್ತಿತ | ೧-೬೮ ಗದ್ಯ | ಮಾಡಿದ, ನೆರವೇರಿಸಿದ |
| ನಿರ್ವರ್ತಿಸು | ೨-೪೯ ಗದ್ಯ | ಮಾಡು, ನೆರವೇರಿಸು |
| ನಿರ್ವೃತ | ೮-೩೭ ಗದ್ಯ | ಸಮಾಧಾನಹೊಂದಿದ |
| ನಿರ್ವೃತಿ | ೭-೧೦ ಗದ್ಯ | ಸಂತೋಷ |
| ನಿರ್ವ್ಯಾಕುಳಂ | ೮-೧೨ | ವ್ಯಥೆಯಿಲ್ಲದೆ, ಸಂತೋಷವಾಗಿ |
| ನಿಱಿಸು | ೨-೩ | ನಿಲ್ಲಿಸು, ಸ್ಥಾಪಿಸು |
| ನಿವಹ | ೫-೭೮ | ಸಮೂಹ |
| ನಿಶಿತ | ೨-೫ | ಹರಿತವಾದ, ಚುರುಕಾದ |
| ನಿಸದಂ | ೪-೧೧೦ | ನಿಶ್ಚಯವಾಗಿ |
| ನಿಸರ್ಗ | ೬-೨೮ | ಸ್ವಾಭಾವಿಕ, ನೈಜ |
| ನಿಸ್ತ್ರಪ | ೪-೧೦೧ | ನಾಚಿಕೆಯಿಲ್ಲದ |
| ನಿಸ್ತ್ರಿಂಶ | ೪-೮೫, ೪-೧೧೬ | ಕ್ರೂರ |
| ನಿಹಿತ | ೨-೩೫ ಗದ್ಯ | ಇಡಲ್ಪಟ್ಟ |
| ನಿಳಿಂಪ | ೩-೪೫ ಗದ್ಯ | ದೇವತೆ (ಭೂಪನಿಳಿಂಪ=ರಾಜಶ್ರೇಷ್ಠ) |
| ನಿಳ್ಕು | ೧-೪೮ ಗದ್ಯ | ನಿಲುಕು, ಮೆಟ್ಟುಂಗಾಲಿಕ್ಕು |

| | | |
|---|---|---|
| ನೀಡ | ೧-೫೦ | ಗೂಡು |
| ನೀಡುಂ | ೭-೬೨ ಗದ್ಯ | ವಿಶೇಷವಾಗಿ |
| ನೀಹಾರ | ೫-೯೫ | ಮಂಜು |
| ನುಣ್ಣಿಸು | ೩-೨೩ | ನುಣ್ಣಗೆಮಾಡು, ನಯಗೊಳಿಸು |
| ನುಱುವೋಗು | ೫-೩೩ | ನುರಿತಿರು, ಕಷ್ಟಾನುಭವಮಾಡು |
| ನುಸುಳ್ | ೫-೧೫ ಗದ್ಯ | ತೂರಿಕೊಂಡುಹೋಗು |
| ನೃಶಂಸ | ೧-೫೬ | ಕ್ರೂರ |
| ನೆಗೞ್ | ೫-೨೪ | ಮಾಡು |
| ,, | ೧-೬೫, ೨-೫೫ | ಪ್ರಖ್ಯಾತಿಪಡೆ |
| ನೆಗೞ್ಚು | ೨-೫೫, ೮-೬೭ | ಮಾಡು |
| ನೆನಪು | ೨-೧೩ | ಜಾಗ್ರದವಸ್ಥೆ, ಸತ್ಯ |
| ನೆಮ್ಮು | ೩-೩೪ ಗದ್ಯ, ೬-೪ ಗ. | ಒರಗು |
| ನೆರಪು | ೪-೯೧ | ಕೂಡಿಡು |
| ನೆರವಿ | ೪-೭೨ ಗದ್ಯ | ಜನರ ಗುಂಪು |
| ನೇಱುದಾದು | ೩-೩೯ | ತೂಗುಹಾಕಿರುವುದು |
| ನೇಸಱು | ೩-೨೫ | ಸೂರ್ಯ |
| ನೇಹ | ೪-೧೧೯ | ಸಂ. ಸ್ನೇಹ |
| ನೊಸಲ್ | ೪-೯೬ ಗದ್ಯ | ಹಣೆ |
| ನೋನ್ | ೪-೩೪, ೫-೧೯ | ವ್ರತಮಾಡು |
| ನೋಂಪಿ | ೫-೧೯ | ವ್ರತ |

## ಪ

| | | |
|---|---|---|
| ಪಕ್ಕಗೂಡಾಗು | ೧-೬೦ | ಮಗ್ಗಲು ಮೇಲಾಗು |
| ಪಕ್ಕಣ | ೮-೪೧ | ಕೀಳುಜನರು ವಾಸಿಸುವ ಹಳ್ಳಿ |
| ಪಕ್ಷ | ೧-೪೬ | ರೆಕ್ಕೆ |
| ಪಗಿರ್ | ೪-೯೬ | ಅಂಟಿಕೊಳ್ಳು |
| ಪಚ್ಚುಗೊಳ್ | ೪-೪೪ | ಹಂಚಿಕೊಳ್ಳು |
| ಪಟಲ | ೫-೯೪ | ಸಮೂಹ |
| ಪಟ್ಟಿರು | ೩-೧೭ | ಮಲಗಿರು |
| ಪಡಕೆ | ೮-೩೭ ಗದ್ಯ, ೮-೩೯ | ಹಾಸಿಗೆ |
| ಪಡಿ | ೮-೩೭ ಗದ್ಯ | ಬಾಗಿಲು |
| ಪಡಿಯಱ | ೫-೭೫ ಗದ್ಯ | ಸಂ.—ಪ್ರತೀಹಾರ, ಬಾಗಿಲು ಕಾಯುವವನು |
| ಪಡಿಯಱತಿ | ೧-೨೯ | ಬಾಗಿಲು ಕಾಯುವವಳು |
| ಪಡು | ೪-೭೩ | ಬೀಳು, ಮುಳುಗು |
| ಪಡುಶಿಲೆ | ೫-೫೮ | ಮಲಗುವ ಕಲ್ಲು |
| ಪತ್ತುವಿಡು | ೨-೧೧ಗದ್ಯ, ೨-೨೮ ಗ. ೮-೧೮ | ಬಿಡು |
| ಪದ | ೧-೫೩ | ಸಮಯ, ಹದ |

| | | |
|---|---|---|
| ಪವಷ | ೧-೧೬, ೫-೧೭ | ಉತ್ಸಾಹ, ಸಂರಂಭ |
| ,, | ೨-೩೩ | ಪ್ರೀತಿ |
| ಪದೆ | ೪-೨೯. ೭-೬೪ | ಅಪೇಕ್ಷಿಸು, ಪ್ರೀತಿಸು |
| ಪರಭೃತ | ೪-೫೬ ಗದ್ಯ | ಕೋಗಿಲೆ |
| ಪರಾಸು | ೭-೨೦ | ಜೀವ ಹೋದವನು |
| ಪರಿ | ೩-೨ ಗದ್ಯ | ಓಡು |
| ,, | ೮-೧೩ | ಪಾಡು, ಸ್ಥಿತಿ |
| ಪರಿಗ್ರಹ | ೩-೩ | ಪರಿವಾರ |
| ಪರಿಜು | ೮-೨೪ ಗದ್ಯ | ಆಕಾರ |
| ಪರಿಭವ | ೬-೭ | ಅಪಮಾನ |
| ಪರಿಭೂತೆ | ೪-೯೩ | ತಿರಸ್ಕಾರವನ್ನು ಹೊಂದಿದವಳು |
| ಪರಿಲಂಬ | ೭-೦ ಗದ್ಯ | ಸಲಕರಣೆ |
| ಪರಿವರ್ಧಕ | ೭.೩೯ ಗದ್ಯ | ಸಾಕುವವನು, ಚಾಕರ |
| ಪರಿವ್ರಾಜಿಕಾ | ೫-೬೫ ಗದ್ಯ | ಸಂನ್ಯಾಸಿನಿ |
| ಪರಿಷ್ವಂಗ | ೨-೯ | ಆಲಿಂಗನ |
| ಪರೆ | ೪-೪೧ | ಹರಡು, ಚೆದರು |
| ಪರ್ಯಂಕ | ೫-೧೮ | ಮಂಚ |
| ಪರ್ವ | ೨-೩೬ | ಹಬ್ಬ |
| ಪರ್ವು | ೮-೭೨ | ಹಬ್ಬು |
| ಪಱಿ | ೭-೧೦ ಗದ್ಯ | ಕತ್ತರಿಸು, ಹರಿ |
| ಪಱಿಪಡು | ೬-೩೧ ಗದ್ಯ | ಕತ್ತರಿಸಿಹೋಗು, ಛಿನ್ನವಾಗು |
| ಪಲುಂಬು | ೪-೮೭ | ಹಲುಬಿಕೊಳ್ಳು |
| ಪವಣ್ | ೩-೨೯ | ಸಂ.—ಪ್ರಮಾಣ, ಅಳತೆ |
| ಪಸದನ | ೪-೨೯ | ಸಂ..ಪ್ರಸಾಧನ, ಅಲಂಕಾರ |
| ಪಸರೆ | ೫-೮೬ | ಗರುಕೆ ಹುಲ್ಲು |
| ಪಸಾದ | ೫. ೧೦೨ | ಪ್ರಸಾದ |
| ಪಸಾಯಿತೆ | ೬-೨೬ | ವಸ್ತ್ರಗಳ ಮೇಲ್ವಿಚಾರಕಳು |
| ಪಸಿಯ | ೧-೧೩ | ಹಚ್ಚನೆಯ |
| ಪಳುಕು | ೫-೭೮ ಗದ್ಯ | ಹಳುಕು |
| ಪಳಂಚಲೆ | ೩-೧೯ | (ಪಳಂಚು+ಅಲೆ), ತಾಗು, ಬಡಿ |
| ಪೞವಿಸು | ೪-೮೯ | ಪ್ರಲಾಪಿಸು, ಅಳು |
| ಪಱ್ಕೆ | ೫-೬೪ | ಹಾಸಿಗೆ |
| ಪಾಟಳ | ೧-೩೧ | ಎಳಗೆಂಪುಬಣ್ಣ |
| ಪಾಡಿವ | ೨-೨೮ ಗದ್ಯ | ಪಾದ್ಯ |
| ಪಾದಪ | ೪-೩೫ | ಮರ |
| ಪಾದಯುಗ್ಮ | ೩-೨೬ | ಎರಡು ಪಾದಗಳು |
| ಪಾಪೆ | ೫-೨೫ | ಹಾಹೆ, ಗೊಂಬೆ |
| ಪಾರ್ | ೩-೩೪ ಗದ್ಯ | ನಿರೀಕ್ಷಿಸು |
| ಪಾರದ | ೩-೨೪ | ಪಾದರಸ |

| | | |
|---|---|---|
| ಪಾವುಡ | ೫-೬೨ | ಸಂ.-ಪ್ರಾಭೃತ, ಕಾಣಿಕೆ |
| ಪಾಸು | ೫-೩೭ | ಹಾಸಿಗೆ |
| ಪಾಲ್ಪಸಗು | ೪-೮೬ | ಹಾಲಾದಂತೆ ಕಾಣು, ಹಾಳುಹೊಡೆ |
| ಪಿಡಿ | ೪-೧೯ | ಹೆಣ್ಣಾನೆ |
| ಪಿಪಾಸಾ | ೧-೫೯ | ದಾಹ |
| ಪಿಷ್ಟಚರ್ಚೆ | ೧-೭೩ | ರಂಗವಲ್ಲಿ |
| ಪಿಹಿತ | ೬-೧೯ | ಮುಚ್ಚಿದ, ಮರೆಯಾದ |
| ಪಿಟಿ | ೪-೩೫ | ಹಿಂಡು |
| ಪೀಯೂಷ | ೪-೨೯ | ಅಮೃತ |
| ಪುಗುಳ್ | ೪-೭೯ | ಗುಳ್ಳೆ, ಬೊಬ್ಬೆ |
| ಪುಟ | ೧-೬೮ | ದೊನ್ನೆ |
| ಪುತ್ರಿಕೆ | ೧-೧೩ | ಬೊಂಬೆ |
| ಪುದಿ | ೧-೪೬, ೩-೧೯ | ತುಂಬು, ವ್ಯಾಪಿಸು |
| ಪುಯ್ಯಲ್ಚು | ೪-೮೯ | ಕೂಗಿಕೊಳ್ಳು |
| ಪುಲಕ | ೫-೨೨ | ರೋಮಾಂಚ |
| ಪುಳಿನ | ೫-೫೮ | ಮರಳುದಿಣ್ಣೆ |
| ಪುಳಿಂದ | ೧-೪೯ | ಬೇಡರವನು |
| ಪುಟಿರ್ | ೬-೧೬ | ತೋಪು (?) |
| ಪೂರ | ೩-೨೩, ೪-೨೯ | ಪ್ರವಾಹ |
| ಪೂರ್ಣಪಾತ್ರ | ೨-೨೫ | ಒಳ್ಳೆಯ ಸುದ್ದಿಯನ್ನು ತಂದವನಿಗೆ ಸಲ್ಲುವ ಬಹುಮಾನ |
| ಪೆರ್ಬಂದಿ | ೧-೩೭ | ದೊಡ್ಡ ಹಂದಿ (ವರಾಹಾವತಾರ) |
| ಪೆಱಗೆ | ೧-೧೪ ಗದ್ಯ | ಹಿಂದೆ |
| ಪೆಱತು | ೫-೬೦ | ಬೇರೊಂದು |
| ಪೆಱೆ | ೩-೨೮ | ಚಂದ್ರ |
| ಪೆಳಱು | ೭-೧೨ | ಭಯ |
| ಪೆಳ್ಪಳಿಸು | ೧-೪೮ ಗದ್ಯ | ಪಿಳಿಪಿಳಿ ನೋಡುವುದು |
| ಪೊಡರ್ | ೧-೬೪, ೪-೪೯ | ನಡುಗು, ಅದಿರು |
| ಪೊಡಮಡು | ೧-೧೭ ಗದ್ಯ | ನಮಸ್ಕಾರ ಮಾಡು |
| ಪೊಡವಡಿಕೆ | ೬-೩ ಗದ್ಯ | ನಮಸ್ಕಾರ |
| ಪೊಣರ್ | ೨-೨೨ | ಜೊತೆ, ಜೋಡಿ |
| ಪೊಣ್ಮು | ೧-೨೭, ೧-೪೯ | ಹೊಮ್ಮು, ಪ್ರಕಟವಾಗು |
| ಪೊದಳ್ | ೧-೪೧, ೧-೬೭ | ವ್ಯಾಪಿಸು |
| ಪೊನಲ್ | ೪-೬೪ ಗದ್ಯ, ೫-೧೭ | ಪ್ರವಾಹ |
| ಪೊರಜೆ | ೮-೨೪ ಗದ್ಯ | ಹಗ್ಗ, ಹೊರಜಿ |
| ಪೊರೆ | ೪-೬೦ | ಸಮೀಪ |
| ,, | ೩-೧೧, ೪-೬೪ ಗದ್ಯ | ಕೂಡು, ವ್ಯಾಪಿಸು |
| ,, | ೧-೪೦ | ಪೊರೆ (ಹಾವಿನ ಪೊರೆಯಂತೆ ತೆಳುವಾದ ಚೀಲ) |

| | | |
|---|---|---|
| ಪೊರ್ದು | ೭-೧೭, ೭-೬೮ | ಸೇರು |
| ಪೊಱೆ | ೫-೫೨ | ಹೊರೆ, ಭಾರ |
| ಪೊಲ್ | ೧-೭೧ | ಹೊಲ |
| ಪೊಲೆವಟ್ಟು | ೮-೩೬ | ಹೊಲೆಯರ ಹಟ್ಟಿ |
| ಪೊಲ್ಲದು | ೪-೨೮ | ಕೆಟ್ಟದ್ದು |
| ಪೊಟರ್ | ೧-೪೮ ಗದ್ಯ | ಪೊಟ್ಟರೆ |
| ಪೊೞ್ತಱೆ | ೮-೨೧ ಗದ್ಯ | ಹೊತ್ತಾರೆ, ಮುಂಜಾನೆ |
| ಪೊೞರ್ | ೧-೪೦ | ಬಿರುಕು, ಸಂದು |
| ಪಾಂಗು | ೪-೯೮ | ರೀತಿ |
| ಪಾಂಡುರ | ೨-೫೯ | ಬಿಳುಪು |
| ಪಾಂಸು | ೨-೩೨ | ದೂಳು |
| ಪಿಂಗು | ೧-೪೮ | ನಿಂತುಹೋಗುವುದು |
| ಪಿಂಬದು | ೭-೨೮ | ಹಿಂಭಾಗ |
| ಪೆಂಪು | ೧-೮ | ಆಧಿಕ್ಯ |
| ಪೊಂದು | ೭-೨೪ | ಸಾಯು, ಮರಣಹೊಂದು |
| ಪ್ರಕರ | ೧-೨೫ | ಸಮೂಹ |
| ಪ್ರಗಲ್ಭ | ೧-೧೮ | ಪ್ರೌಢ |
| ಪ್ರಚ್ಛದ | ೧-೨೨ | ಹೊದಿಕೆ |
| ಪ್ರಣಾಳ | ೪-೮೩ | ಕಾಲುವೆ |
| ಪ್ರತಾನ | ೪-೩೧ | ಸಮೂಹ |
| ಪ್ರತಿಪತ್ತಿ | ೭-೬೯ | ಸತ್ಕಾರ, ಗೌರವ |
| ಪ್ರತಿಮ | ೩-೨೩ | ಸಮಾನ |
| ಪ್ರತಿಲಂಭನ | ೭-೬೭ | ಮರಳಿ ಪಡೆಯುವುದು |
| ಪ್ರತೀಹಾರಿ | ೧-೧೧ ಗದ್ಯ | ಬಾಗಿಲುಕಾಯುವವಳು |
| ಪ್ರತ್ಯಯ | ೭-೫೪ | ನಂಬಿಕೆ, ವಿಶ್ವಾಸ |
| ಪ್ರತ್ಯಾಶೆ | ೭-೫೨ ಗದ್ಯ | ಭರವಸೆ |
| ಪ್ರತ್ಯಾಸನ್ನ | ೧-೬೫ | ಸಮೀಪ |
| ಪ್ರತ್ಯುದ್ಗಮನ | ೬-೨೯ ಗದ್ಯ | ಎದುರುಗೊಳ್ಳುವುದು |
| ಪ್ರದ್ಯೋತ | ೨-೪೯ | ಕಾಂತಿ |
| ಪ್ರವಾಳ | ೮-೫೦ | ಚಿಗುರು |
| ಪ್ರಸರ | ೫-೧೭ | ಹರಡುವಿಕೆ |
| ಪ್ರಸೂನ | ೨-೩೪ | ಹೂವು |
| ಪ್ರಾಗ್ಭಾಗ | ೨-೧೬ | ಮೊದಲ ಭಾಗ |
| ಪ್ರಾಣನ | ೧-೪೩ ಗದ್ಯ | ಬದುಕಿಸುವುದು ಕಾಪಾಡುವುದು |
| ಪ್ರಾಭಾತಿಕ | ೫-೮ ಗದ್ಯ, ೮-೮ ಗದ್ಯ | ಪ್ರಾತಃಕಾಲದ |
| ಪ್ರಾಸಾದ | ೧-೩೯; ೫-೩೧ ಗದ್ಯ | ಉಪ್ಪರಿಗೆ ಮನೆ |
| ಪ್ರೋದ್ಗತ | ೧-೧ | ಮೇಲಕ್ಕೆ ಏಳುವ |

## ಫ

| | | |
|---|---|---|
| ಫೇನ | ೫.೪೧ | ನೊರೆ |

## ಬ

| | | |
|---|---|---|
| ಬಗೆ | ೮-೩೮ | ಯೋಚಿಸು |
| ಬಟ್ಟೆ | ೧-೪೯ | ಹಾದಿ |
| ಬದ್ಧಾಂಜಲ | ೬-೨೭ ಗದ್ಯ | ಮುಗಿದ ಕೈ |
| ಬಯ್ | ೧-೫೩ | ಬಚ್ಚಿಟ್ಟುಕೊಳ್ಳು |
| ಬಯ್ಗುಂಪೊೞ್ತು | ೬-೦ ಗದ್ಯ | ಸಾಯಂಕಾಲ |
| ಬರ | ೩-೩೬ | ವರ |
| ಬರೆತೆಗೆದು | ೭-೫ | ಎಳಕೊಂಡು, ಗಾಢವಾಗಿ |
| ಬಲವರ್ | ೨.೬೦ | ಪ್ರದಕ್ಷಿಣೆ ಮಾಡು |
| ಬವಸೆ | ೬-೨೩ ಗದ್ಯ | ಸಂ.-ವ್ಯವಸಾಯ, ಪ್ರಯತ್ನ |
| ಬಸ | ೪-೬೧, ೫-೨೦ | ವಶ, ಸ್ವಾಧೀನ |
| ಬಸವಟಿ | ೧-೫೨, ೮-೨೬ ಗದ್ಯ | ಶಕ್ತಿಗುಂದು |
| ಬೞಿಗ್ | ೭-೧೨ | ಜೋಲು |
| ಬೞಿಸಲ್ | ೧-೬೭, ೬-೨೦ | ಹಿಂಬಾಲಿಸು |
| ಬೞಿಯಟ್ಟು | ೨-೩೬ | ದೂತನನ್ನು ಕಳುಹಿಸು |
| ಬಾಚಿಸು | ೫-೯೯ | ಓದು |
| ಬಾಜಿಸು | ೩-೨೧ | ಬಾರಿಸು, ಧ್ವನಿಮಾಡು |
| ಬಾಣಿ | ೧-೩ | ವಾಣಿ, ಸರಸ್ವತಿ |
| ಬಾಯುಟಿ | ೭-೨೫ ಗದ್ಯ, ೭-೪೨ ಗ. | ಬಾಯಿಸೋಲು |
| ಬಾರ್ತೆ | ೮-೩೮ | ಪ್ರಯೋಜನ |
| ಬಾಸಣಿಗೆ | ೫-೭೮ ಗದ್ಯ | ಹೊದಿಕೆ |
| ಬಾಸಣಿಸು | ೫-೪೩ ಗದ್ಯ | ಮುಚ್ಚು |
| ಬಾಸೆ | ೬-೨೨ | ಸಂ.-ಭಾಷೆ |
| ಬಾಡ್ಜೊಂಪ | ೫-೪೧ | ಹಸುರು ಗೊಂಚಲು |
| ಬಿಚ್ಚನೆ | ೭-೪೫ ಗದ್ಯ | ಅಗಲವಾಗಿ |
| ಬಿಜ್ಜಣಿಗೆ | ೫-೫೮ | ಬೀಸಣಿಗೆ |
| ಬಿಟ್ಟಿರ್ | ೫-೭೪ ಗದ್ಯ | ಬೀಡುಬಿಡು, ತಂಗು |
| ಬಿಡೆ ನುಡಿ | ೪-೫೨ | ನಿಷ್ಠುರವಾಗಿ ಮಾತನಾಡು |
| ಬಿಡೆ ನೋಡು | ೪-೬ | ದೃಷ್ಟಿಯಿಟ್ಟು ನೋಡು |
| ಬಿತ್ತರಿಸು | ೩-೪೧, ೪-೭ | ವಿಸ್ತರಿಸು |
| ಬಿದಿ | ೪-೮೨ | ವಿಧಿ |
| ಬಿರಯಿ | ೮-೫೧ | ವಿರಹ |
| ಬಿಸ | ೪-೩೮ | ಕಮಲದ ದಂಟು |
| ಬಿಸರುಹ | ೫-೮೬ | ಕಮಲ |
| ಬಿಸು | ೪-೬೦ ಗದ್ಯ | ಬೆಸಗೆ ಹಾಕು |

| | | |
|---|---|---|
| ಬಿಕ್ಕೆ | ೪-೪೯ | ಬಿಕ್ಕೆ ಕಾಯಿ |
| ಬೀಯಾ‌ಜೊಂಪ | ೬-೩೩ | ಇಳಿಬಿದ್ದಿರುವ ಗೊಂಚಲು |
| ಬೃಂದ | ೬-೨೯ | ಸಮೂಹ |
| ಬೆಟ್ಟವೆಟ್ಟನಾಗಿ | ೬-೩೧ಗದ್ಯ,೮-೩೪ ಗ. | ಕಠಿನವಾಗಿ |
| ಬೆಟ್ಟಿತು | ೧-೬೨, ೮-೨೪ ಗದ್ಯ | ಕಠಿನ, ಕರ್ಕಶ |
| ಬೆನ್ನನೆ | ೪-೬ | ಹಿಂದೆಯೇ |
| ಬೆರಂಟು | ೨-೪೨ | ಗೊರಸಿನಿಂದ ಕೆರೆ |
| ಬೆಱು | ೧-೫೬ | ಸೆಡೆ, ಭಯಪಡು |
| ಬೆಸ | ೬-೨೦ | ಕೆಲಸ |
| ಬೆಸಕಯ್ | ೫-೬೧ | ಕೆಲಸಮಾಡು, ಸೇವಿಸು |
| ಬೆಸೆ | ೪-೨೪ | ಗರ್ವಿಸು |
| ಬೆಳರ್ | ೮-೫೫ | ಕಾಂತಿ, ಪ್ರಕಾಶ |
| ಬೆಳ್ಕುಱು | ೫-೩೨ | ಭಯಪಡು |
| ಬೆಳ್ಕುಱಿಸು | ೪-೯೬ ಗದ್ಯ | ಬಿಳುಪಾಗು |
| ಬೇಗ | ೩-೪೩ ಗದ್ಯ, ೪-೪೨ | ಹೊತ್ತು, ಕಾಲ |
| ಬೇಟ | ೪-೧೦ | (ಧಾ.-ಬೇಡು), ಕಾಮಪರವಶತೆ |
| ಬೇಡವಟ್ಟ | ೮-೩೫ ಗದ್ಯ | ಬೇಡರ ಹಟ್ಟಿ |
| ಬಂಚ | ೫-೬೬ | ಸಂ.-ವಂಶ, ಬಿದಿರಿನ ಕೊಳಲು |
| ಬಂದ | ೭-೧೪ | ಫಲಕ್ಕೆ ಬಂದ |
| ಬಂಧಕೀ | ೬.೧೧ | ಪತಿವ್ರತೆಯಲ್ಲದವಳು |
| ಬಂಭ್ರಮಿತ್ | ೩-೧೧ | ಸುತ್ತುತ್ತಿರುವ |
| ಬಿಂಜ | ೧-೪೬ | ವಿಂಧ್ಯ |
| ಬ್ರಹ್ಮಸೂತ್ರ | ೩-೨೮ | ಯಜ್ಞೋಪವೀತ, ಹಾರ |

ಭ

| | | |
|---|---|---|
| ಭವ | ೩-೨೬ | ಶಿವ |
| ,, | ೧-೩೫, ೭-೪೯ | ಜನ್ಮ |
| ಭಾಜನ | ೧-೨೦ | ಪಾತ್ರ |
| ಭೂರುಹ | ೧-೭೩ | ಮರ |
| ಭೋಗ | ೧.೧ | ಹೆಡೆ |
| ಭೋರನೆ | ೭-೨೫ ಗ. | ಬೇಗ |
| ಭಂಗಿ | ೫-೫೯, ೫-೬೬ | ರೀತಿ |
| ಭಾಂಡ | ೮-೩೯ ಗ. | ಪಾತ್ರೆ |
| ಭೋಂಕನೆ | ೪-೨೦ | ಬೇಗ |

ಮ

| | | |
|---|---|---|
| ಮಗುಳ್ಚು | ೩-೯ ಗದ್ಯ, ೫-೭೪ ಗ. | ಹಿಂದಿರುಗಿಸು |
| ಮಗುಳ್ದು | ೪-೪೩, ೭-೪೯ | ಮತ್ತೆ |
| ಮನ್ನಣೆ | ೬-೩ ಗದ್ಯ, ೨-೨೫ ಗ. | ಬಹುಮಾನ |

| | | |
|---|---|---|
| ಮಡಲ್ | ೧-೪೧, ೩-೨೫ | ವೃದ್ಧಿಹೊಂದು |
| ಮಡಿ | ೧-೨೭ | ಮಡಿಸು, ಮುದುರು |
| ಮದಿರೇಕ್ಷಣೆ | ೫-೧ | (ಮದಿರ+ಈಕ್ಷಣ) ಮೋಹಜನಕವಾದ ದೃಷ್ಟಿಯುಳ್ಳವಳು |
| ಮನುಮತ | ೮-೫೧ | ಮನ್ಮಥ |
| ಮನ್ಯು | ೭-೮, ೭-೨೭ | ದುಃಖ |
| ಮಯೂಖ | ೭-೪೫ ಗದ್ಯ | ಕಿರಣ |
| ಮರವಡು | ೪-೫೬ ಗದ್ಯ | ನಿಶ್ಚೇಷ್ಟಿತವಾಗು |
| ಮರೀಚಿ | ೨-೫೧ | ಕಿರಣ |
| ಮರುತ್ | ೮-೫೫ | ವಾಯು, ಗಾಳಿ |
| ಮರುಳ್ಗೊಳ್ | ೭-೩೯ ಗದ್ಯ | ಮರುಳಾಗು |
| ಮರ್ವು | ೪-೩೯ | ಮಬ್ಬು |
| ಮಱುಮಾತು | ೫-೪೪, ೫-೫೩ | ಪ್ರತ್ಯುತ್ತರ |
| ಮಱುವುಟ್ಟು | ೬-೯, ೭-೨೫ | ಮತ್ತೊಂದು ಜನ್ಮ |
| ಮಲರ್ | ೧-೬೦ | ಹೂವು |
| ಮಹಾಪ್ರಾಣತೆ | ೨-೪೦ | ಹೆಚ್ಚಾದ ಶಕ್ತಿ |
| ಮಟ್ಗಿಸು | ೩-೪೪, ೪-೧೨೦ | ಅಡಗಿಸು, ಅರಿಸು |
| ಮಾಗಧಿ | ೫-೨೫ ಗದ್ಯ | ಸ್ತುತಿಪಾಠಕಿ |
| ಮಾಟ | ೫-೧೦೨ | ಕಾರ್ಯ |
| ಮಾಡ | ೪-೪೩ | ಮಹಡಿ |
| ಮಾಣ್ | ೫-೬೯ | ಬಿಡು |
| ಮಾತಂಗ | ೧-೧೪ | ಚಂಡಾಲ |
| ಮಾಯ್ದ | ೧-೫೧, ೮-೧೦, ೫-೧೫ | ಕೆಟ್ಟ (ಧಾ.—ಮಾಯ್—ಕೆಡು) |
| ಮಾರ್ಪೊಳೆ | ೫-೪೪ | ಪ್ರತಿಬಿಂಬಿಸು |
| ಮಾಜುವೋಗು | ೫-೫೫, ೫-೧೦೪ | ಜತೆಯಾಗಿಹೋಗು |
| ಮಿಡಿ | ೪-೧೦೦ ಗದ್ಯ | ಬೆರಳಿನಿಂದ ಮೀಟು |
| ಮಿಥುನ | ೩-೪, ೭-೪೮ ಗದ್ಯ | ಜೊತೆ |
| ಮಿಸುಗು | ೨-೫೧, ೪-೪ | ಹೊಳೆ, ಪ್ರಕಾಶಿಸು |
| ಮಿಳಿರ್ | ೩-೪೪ | ಅಲ್ಲಾಡು |
| ಮುಕುರ | ೩-೧೨ | ಕನ್ನಡಿ |
| ಮುಕುಳಿತ | ೪-೬೦ | ಮುಚ್ಚಿದ |
| ಮುಗಿ | ೪-೪೫ | ಮುಚ್ಚು |
| ಮುಗುಳ್ | ೪-೬೪ | ಮೊಗ್ಗು |
| ಮುಯ್ವು | ೧-೪೪, ೮-೧೫ | ಹೆಗಲು |
| ಮುರಿ | ೧-೪೯ | ತಿರುಗಿಸು |
| ಮುಱಿ | ೧-೫೧ | ತುಂಡುಮಾಡು |
| ,, | ೫-೪೪ | ತುಂಡು |
| ಮುೞ್ಕಾಡು | ೨-೬ ಗದ್ಯ | ಮುಳುಗಾಡು |
| ಮೂಗುವಡು | ೧-೪೮ | ನಿಶ್ಶಬ್ದವಾಗು |

ಮೂಡು ೨-೬ ಗದ್ಯ ಹುಟ್ಟು
ಮೂರ್ಧಘ್ರಾಣ ೭-೬೪ ತಲೆಯನ್ನು ಮೂಸುವುದು
ಮೃಗಯಾ ೧-೧೦ ಬೇಟೆ
ಮೃಣಾಳ ೩-೧೫ ಗದ್ಯ ತಾವರೆದಂಟು
ಮೆಯ್ಗರೆ ೪-೫೩ ಅವಿತುಕೊಳ್ಳು, ಅದೃಶ್ಯವಾಗು
ಮೆಯ್ಯರಿ ೪-೬೮ ಗದ್ಯ ಸ್ಮೃತಿಯನ್ನು ಹೊಂದು, ಎಚ್ಚರವಾಗು
ಮೆಯ್ಯಟಿ ೪-೧೧೨ ಅನುಸರಣೆ
ಮೇಖಲಾ, ಮೇಖಲೆ ೧-೬, ೧-೭೧ ಒಡ್ಯಾಣ, ಡಾಬು
ಮೇಲುದು ೪-೮೮, ೫-೮೯ ಮೇಲುಮುಸುಕು, ಉತ್ತರೀಯ
ಮೇಳಿಸು ೮-೨೨ ಸೇರು
ಮೊಬ್ಗು ೬-೦ ಗದ್ಯ ನಮಸ್ಕಾರಮಾಡು
ಮೌಕ್ತಿಕ ೫-೫೭ ಮುತ್ತು
ಮೌಹೂರ್ತಿಕ ೨-೨೦ ಜೋಯಿಸ
ಮಂಜರಿ ೪-೧೬ ಗದ್ಯ ಗೊಂಚಲು
ಮಂಜೀರಕ ೨-೪೯ ಕಾಲ ರುಳಿ, ಕಾಲಂದಿಗೆ
ಮಂಥರೆ ೭-೨೭ ಆಲಸ್ಯವನ್ನು ಹೊಂದಿದವಳು
ಮಂದೈಸು ೪-೯೬ ಗದ್ಯ ಗುಂಪುಕೂಡು
ಮಾಂಕರಿಸು ೫-೪೧ ತಿರಸ್ಕರಿಸು

## ಯ

ಯಾಮಿನೀ ೭-೧೭ ಗದ್ಯ ರಾತ್ರಿ
ಯೂಥ ೨-೫೯ ಸಮೂಹ
ಯೋಷಿತ್ ೫-೪೧ ಹೆಂಗಸು

## ರ

ರಜ ೪-೬೪ ಗದ್ಯ ದೂಳು
ರಣರಣಕ ೫-೭೫ ಪ್ರೇಮಕಾತರತೆ
ರಥಾಂಗ ೬-೧೬ ಚಕ್ರವಾಕಪಕ್ಷಿ
ರಶನ ೩-೧೦ ಒಡ್ಯಾಣ
ರಸಭಾವ ೧-೨ ೧. ನೀರು ಇರುವಿಕೆ ೨. ನವರಸಗಳೂ ಭಾವಗಳೂ
ರಸೆ ೩-೪೫ ಭೂಮಿ
ರಾಗ ೫-೬೫, ೫-೧೦೩ ೧. ಪ್ರೀತಿ. ೨. ಕೆಂಪುಬಣ್ಣ
ರಾಜತ್ ೮-೪೬ ಪ್ರಕಾಶಮಾನವಾದ
ರಾಜಿ ೧-೩೨ ಸಮೂಹ
ರುಚಿ ೪-೪೪, ೫-೪೫ ಕಾಂತಿ
ರುಚಿರ ೧-೨೪ ಮನೋಹರವಾದ
ರುಜೆ ೪-೨೮ ರೋಗ

| | | |
|---|---|---|
| ರೋದೋಂತ | ೫-೪೨ | ಭೂಮ್ಯಾಕಾಶಗಳ ಕೊನೆ |
| ರೋಮೋದ್ಗಮ | ೨-೪೩ | ರೋಮಾಂಚ |
| ರೋಮಾಂಥ | ೫-೪೧ | ಮೆಲುಕು |

## ಲ

| | | |
|---|---|---|
| ಲಘುವಾಗು | ೪-೧೧ | ಹಗುರವಾಗು, ಅಲ್ಪವಾಗು |
| ಲತಾಂತ | ೧-೨೮ | ಹೂವು |
| ಲಹರೀ | ೪-೨೯ | ಅಲೆ, ತರಂಗ |
| ಲಾಜ | ೨-೪೨ | ಅರಳು |
| ಲಾಸ್ಯ | ೭-೧೮ | ಲಲಿತನರ್ತನ |
| ಲುಬ್ಧಕ | ೧-೫೦ | ಬೇಡ |
| ಲುಳಿತ | ೪-೯೬ ಗದ್ಯ, ೫-೮೪ ಗ. | ಮಿಶ್ರಿತವಾದ |
| ,, | ೫-೮೪ ಗದ್ಯ | ಕದರಿದ |
| ಲೆಪ್ಪ | ೭-೬೨ ಗದ್ಯ | ಸಂ.–ಲೇಪ್ಯ, ಗೊಂಬೆ |
| ಲಾಂಛನ | ೫-೭ ಗದ್ಯ | ಗುರುತು |

## ವ

| | | |
|---|---|---|
| ವಕ್ತ್ರ | ೭-೫೫ | ಮುಖ |
| ವಯಸ್ಯ | ೪-೫೪ ಗದ್ಯ | ಸ್ನೇಹಿತ |
| ವರ್ಷವರ | ೫-೮೪ ಗದ್ಯ | ಅಂತಃಪುರವನ್ನು ಕಾಯುವವನು, ಖೋಜ |
| ವಲಂ | ೧-೩ | ನಿಶ್ಚಯವಾಗಿ |
| ವಲ್ಕ | ೮-೧೩ | ನಾರುಬಟ್ಟೆ |
| ವಲ್ಕಲ | ೧-೭೧, ೭-೪೦ | ,, |
| ವಲ್ಲಕೀ | ೩-೩೫ | ವೀಣೆ |
| ವಲ್ಲಭ | ೮-೩೦ | ಪ್ರಿಯ |
| ವಸನ | ೪-೩೫ | ಬಟ್ಟೆ |
| ವಾರುಣೀ | ೨-೪೯ | ೧. ಪಶ್ಚಿಮದಿಕ್ಕು. ೨. ಹೆಂಡ |
| ವಾರುವ | ೬-೧೬ ಗದ್ಯ | ಕುದುರೆ |
| ವಾರ್ತಾಹರ | ೭-೫೪ ಗದ್ಯ | ಬೇಹುಗಾರ, ಸುದ್ದಿ ತರುವವನು |
| ವಾಸ | ೧-೧೪ | ಬಟ್ಟೆ |
| ವಾಹ | ೭-೪೬ | ಕುದುರೆ |
| ವಾಃಕಣ | ೩-೧೧ | ನೀರಿನ ಹನಿ |
| ವಿಗಳತ್ | ೭-೩೬ ಗದ್ಯ | ಸುರಿಯುವ |
| ವಿಜೃಂಭಿತ | ೪-೧೨೪ ಗದ್ಯ | ಆಟ, ಕಾರ್ಯ |
| ವಿಡಂಬಿಸು | ೫-೭ ಗದ್ಯ, ೫-೩೬ | ಹಾಸ್ಯಮಾಡು |
| ವಿತತ | ೧-೧೮ | ತಂತಿಯ ವಾದ್ಯ |
| ವಿದಗ್ಧ | ೧-೧೧ | ಕಲಾಕೋವಿದ |
| ವಿದೀರ್ಣ | ೭-೧೦ ಗದ್ಯ | ಒಡೆದ, ಸೀಳಿದ |

| | | |
|---|---|---|
| ವಿಪಂಚಿಕಾ | ೧-೧೦ | ವೀಣೆ |
| ವಿಪಂಚೀ | ೩-೧೯ | ,, |
| ವಿಪ್ರಲಂಭ | ೫-೩೫ | ವಿರಹ, ಅಗಲುವಿಕೆ |
| ವಿಭೂತಿ | ೮-೬೫ | ಐಶ್ವರ್ಯ |
| ವಿಭ್ರಮ | ೫-೩೨ | ತಪ್ಪು ತಿಳಿವಳಿಕೆ, ಭ್ರಾಂತಿ |
| ವಿಲುಳಿತ | ೫-೧೨ | ಚಲಿಸುವ, ಅಲ್ಲಾಡುವ |
| ವಿವರ | ೪-೮೯ ಗದ್ಯ | ಬಿಲ |
| ವಿಶ್ವಂಭರಾ | ೨-೮ | ಭೂಮಿ |
| ವಿಷಯ | ೨-೧, ೫-೬೩ ಗದ್ಯ | ದೇಶ |
| ವಿಸ್ರಂಭ | ೨-೩೨ | ವಿಶ್ವಾಸ, ನಂಬಿಕೆ |
| ವಿಹಗ | ೧-೨೫ | ಪಕ್ಷಿ |
| ವಿಹಂಗ | ೧-೧೭ ಗದ್ಯ | ,, |
| ವಿಹಂಗಮ | ೧-೩೫ | ,, |
| ವಿಹ್ವಲ | ೭-೬೫ ಗದ್ಯ | ಕಳವಳ |
| ವೀಥಿ | ೪-೫೬ | ಬೀದಿ |
| ವೃತ್ತಕ | ೭-೫೫ | ಚರಿತ್ರೆ, ನಡೆವಳಿ |
| ವೃಂದಾರಕ | ೧-೭೪ | ಶ್ರೇಷ್ಠ, (ದೇವತೆ) |
| ವೇತ್ರ | ೧-೮೪ ಗದ್ಯ | ಬೆತ್ತ |
| ವೇದಿಕೆ | ೫-೬೫ ಗದ್ಯ | ಜಗಲಿ |
| ವೇಲಾ | ೫-೬೪ | ಮೇರೆ |
| ವೇಷ್ಟಿಸು | ೧-೭೪ | ಸುತ್ತುಗಟ್ಟು |
| ವೇಟ್ಟುಂ | ೧-೯ | (ಧಾ..ಬೇಡು) ಬೇಕು |
| ವೈಮಾನಿಕ | ೭-೪೨ ಗದ್ಯ | ವಿಮಾನ ಸಂಚಾರಿ |
| ವ್ಯಗ್ರ | ೩-೪೫, ೪-೫೨ | ಕಳವಳ ಹೊಂದಿದ |
| ,, | ೮-೨೫ ಗದ್ಯ, ೮-೫೬ ಗ. | ಆಸಕ್ತ |
| ವ್ಯತಿಕರ | ೪-೧೮ ಗದ್ಯ, ೫-೬ | ಸಂದರ್ಭ |
| ವ್ಯಸನ | ೧-೩, ೨-೨೮ ಗದ್ಯ | ಅತ್ಯಾಸಕ್ತಿ |
| ವ್ಯಾಬದ್ಧ | ೭-೪೦ ಗದ್ಯ | ನಟ್ಟ, ಕಟ್ಟಿದ |
| ವ್ರಾತ | ೨-೫೭ | ಸಮೂಹ |

## ಶ

| | | |
|---|---|---|
| ಶಕ್ರ | ೧-೧೨ | ಇಂದ್ರ |
| ಶಕ್ರಧನು | ೨-೩೪ | ಕಾಮನ ಬಿಲ್ಲು |
| ಶಾದ್ವಲ | ೩-೧೫ | ಹಸುರು ಹುಲ್ಲು |
| ಶಾಬ | ೧-೭೩ | ಮರಿ |
| ಶಾಬಕ | ೧-೫೦ | ,, |
| ಶಾರದ | ೫-೪೪ | ಬಿಳಿಯ ಕಮಲ |
| ಶಾರಿಕಾ | ೧-೨೫ | ಕೊರವಂಕೆ ಹಕ್ಕಿ |

ಶಾಲೀನತೆ ೫-೯೩ ಗದ್ಯ ಲಜ್ಜೆ
ಶಾಲ್ಮಲೀ ೧-೩೮ ಬೂರಗ
ಶಿಖರಿ ೨-೪೯ ಬೆಟ್ಟ
ಶಿಖಂಡ ೫-೯೯ ಗದ್ಯ ಮುಡಿ
ಶಿಶಿರೋಪಚಾರ ೪-೭೯ ಗದ್ಯ ಶೈತ್ಯೋಪಚಾರ
ಶೀಕರ ೧-೧ ತುಂತುರು ಹನಿ
ಶೀತೋಷ್ಣಭವನ ೫-೭೯ ಗದ್ಯ ಧಾರಾಗೃಹ, ಹಿಮಗೃಹ (೬-೪ ಗದ್ಯ)
ಶೀರ್ಯಮಾಣ ೪-೬೨ ಒಡೆದ
ಶುದ್ಧಾಂತ ೧-೯ ಅಂತಃಪುರ
ಶೃಂಖಲೆ ೩-೧೫ ಸಂಕೋಲೆ, ಸರಪಳಿ
ಶ್ರಾಂತಿ ೩-೧೦ ದಣಿವು

## ಷ

ಷಂಡ ೧-೩೭ ಗದ್ಯ ಸಮೂಹ

## ಸ

ಸಕ್ಕಿ ೪-೯೪ ಸಾಕ್ಷಿ
ಸದ್ಭಾವ ೧-೨೦, ೪-೧೧೮ ಒಳ್ಳೆಯ ಮನಸ್ಸು, ಒಳ್ಳೆಯತನ
ಸನ್ನಿಧ ೬-೧೨, ೭-೫೪ ಗದ್ಯ ಸಮೀಪಸ್ಥ
ಸನ್ನಿಹಿತ ೭-೬೦ ,,
ಸಪ್ತತಂತು ೨-೨ ಗದ್ಯ ಯಜ್ಞ
ಸಮನಿಸು ೨-೨೫ ಉಂಟಾಗು
ಸಮಂಚಿತ ೮-೫೪ ಕೂಡಿದ
ಸಮಾಗಮ ೭-೬ ಗದ್ಯ ಸೇರುವಿಕೆ
ಸಮಾಶ್ವಾಸಿಸು ೭-೫೧ ಗದ್ಯ ಸಮಾಧಾನಪಡಿಸು
ಸಮಾಸಾದಿತೆ ೭-೨೫ ಗದ್ಯ ಹತ್ತಿರಕ್ಕೆ ಬಂದವಳು
ಸಮಿತಿ ೧-೨೭ ಸಮೂಹ
ಸಮೀರ ೫-೯೬ ವಾಯು
ಸಮೀಹಿತ ೭-೧೦ ಗದ್ಯ ಅಪೇಕ್ಷೆ
ಸಮುಪಜಾತ ೭-೬೦ ಗದ್ಯ ಹುಟ್ಟಿದ
ಸಮೆ ೧-೭೧, ೫-೫೭ ಮಾಡು
ಸಯ್ಪು ೧-೭೫ ಪುಣ್ಯ
ಸರ್ಗ ೫-೧೬ ಸೃಷ್ಟಿ
ಸಸಿ ೪-೧೧೭ ಸಂ.—ಶಶಿ, ಚಂದ್ರ
ಸಾಧ್ವಸ ೮-೫೪ ಭಯ
ಸಾರಿಕೆ ೭-೩೩ ಹೆಣ್ಣು ಗಿಳಿ, ಗೊರವಂಕದ ಹಕ್ಕಿ
ಸಾರೆ ೫-೧೩, ೫-೬೩ ಗದ್ಯ ಸಮೀಪದಲ್ಲಿ
ಸಾರ್ಚು ೩-೧೫, ೫-೭೩ ಗದ್ಯ ಸೇರಿಸು

| | | |
|---|---|---|
| ಸಾಷಾಢ | ೧.೮೩ | ೧. ಪೂರ್ವಾಷಾಢ ಉತ್ತರಾಷಾಢ ನಕ್ಷತ್ರಗಳಿಂದ ಕೂಡಿದ್ದು ೨. ಋಷಿಗಳು ಹಿಡಿಯತಕ್ಕ ಮುತ್ತುಗದ ದಂಡ |
| ಸಿಕ್ತ | ೧.೩೨ | ಒದ್ದೆಯಾದ |
| ಸಿಗ್ಗು | ೪.೫೫ | ನಾಚಿಕೆ |
| ಸಿತ | ೧.೨೮ | ಬೆಳ್ಳಗಿರುವ |
| ಸಿಪ್ಪು | ೫.೪೩ ಗದ್ಯ | ಚಿಪ್ಪು |
| ಸಿರಿಕಂಡ | ೫.೭೮ ಗದ್ಯ | ಶ್ರೀಗಂಧ |
| ಸೀರೆ | ೪.೫೦ | ಸಂ.-ಚೀರ, ಬಟ್ಟೆ |
| ಸೀರ್ಪುರ್ಲ್ | ೭.೧೧ | ಸಣ್ಣ ಹುಲ್ಲು ಕಡ್ಡಿ |
| ಸುಟ್ಟುರೆ | ೧.೫೬ ಗದ್ಯ | ಸುಂಟರಗಾಳಿ |
| ಸುಧಾ | ೮.೫೫ | ಅಮೃತ |
| ಸುಧಾಸೂತಿ | ೫.೫೧ | ಚಂದ್ರ |
| ಸುಪ್ತ | ೮.೬ | ಮಲಗಿದ |
| ಸುರಭಿ | ೮.೩೯ ಗದ್ಯ | ಸುಗಂಧ |
| ಸುಲಿಪಲ್ | ೫.೬೭ | ಶುಭ್ರವಾದ ಹಲ್ಲು |
| ಸುಹೃತ್ | ೪.೬೯ | ಸ್ನೇಹಿತ |
| ಸೂಟ್ | ೫.೨೨ | ಬಾರಿ, ಸಲ |
| ಸೃಕ್ವ | ೨.೧೩ | ಕಟವಾಯಿ |
| ಸೆಜ್ಜೆವನೆ | ೫.೮೫ ಗದ್ಯ, ೭.೩೨ | ಮಲಗುವ ಮನೆ (ಶಯ್ಯಾ—ಸೆಜ್ಜೆ) |
| ಸೆಡೆ | ೮.೧೯ | ಭಯಪಡು |
| ಸೆರೆ | ೧.೪೯ | ರಕ್ತನಾಳ |
| ಸೇದೆ | ೧.೫೯ | ಆಯಾಸ |
| ಸೋರ್ | ೪.೯ | ಮೋಹ |
| ಸೌಧ | ೮.೨೫ | ಮಹಡಿಯ ಮನೆ |
| ಸೌವಿದಲ್ಲ | ೫.೭ | ಅಂತಃಪುರವನ್ನು ಕಾಯುವವನು |
| ಸಂಗತಿ | ೧.೩೬ | ಸಹವಾಸ |
| ಸಂಗಳಿಸು | ೮.೫೩ | ಉಂಟಾಗು |
| ಸಂಘಾತ | ೭.೨ | ಸಮೂಹ |
| ಸಂಛನ್ನ | ೧.೭೦ | ಮುಚ್ಚಿದ |
| ಸಂತಾನ | ೮.೪೪ | ಸಮೂಹ |
| ಸಂತ್ರಾಸ | ೧.೪೬ | ಭಯ |
| ಸಂದೆಗ | ೧.೧೦೮ | ಸಂದೇಹ |
| ಸಂಪುಟ | ೧.೪೮ ಗದ್ಯ | ಭರಣಿ |
| ಸಂವರಿಸು | ೫.೧೦೪ ಗದ್ಯ | ಒಟ್ಟುಗೂಡಿಸು |
| ಸಾಂತ್ವ | ೪.೧೨೩ | ಸಮಾಧಾನ |
| ಸಿಂಧು | ೫.೪೪ | ನದಿ |
| ಸಿಂಧುವಾರ | ೫.೫೮ | ನಿರ್ಗುಂಡಿ, ಒಂದು ಜಾತಿಯ ಮರ |

| | | |
|---|---|---|
| ಸಿಂಪಿಸು | ೫.೪೩ | ಚಿಮುಕಿಸು, ಸೂಸು |
| ಸ್ಕಂಧ | ೧.೩೮, ೮.೨೭ | ಮರ ಕವಲೊಡೆಯುವ ಸ್ಥಳ |
| ಸ್ಕಂಧಾವಾರ | ೫.೭೪ ಗದ್ಯ | ಸೈನ್ಯ |
| ,, | ೫.೯೬ ಗದ್ಯ | ಬೀಡು, ಪಾಳೆಯ |
| ಸ್ತಬ್ಧ | ೬.೧೮ ಗದ್ಯ | ನೆಟ್ಟ, ಸ್ಥಿರವಾದ |
| ಸ್ನಿಗ್ಧ | ೭.೧೧ | ನಯವಾದ, ನುಣುಪಾದ |
| ಸ್ನೇಹ | ೫.೩೯ | ೧. ಮೈತ್ರಿ. ೨. ಜಿಡ್ಡು |
| ಸ್ಫುಟಿತ | ೮.೪ ಗದ್ಯ | ಒಡೆದ, ಬಿರಿದ |
| ಸ್ವನ | ೧.೪೬ | ಧ್ವನಿ |
| ಸ್ವಾಂತ | ೧.೪೬ | ಮನಸ್ಸು, ಹೃದಯ |
| ಸ್ವೇದ | ೭.೩೬ ಗದ್ಯ | ಬೆವರು |

## ಹ

| | | |
|---|---|---|
| ಹನನ | ೪.೧೧೬ | ಕೊಲೆ |
| ಹರಿ | ೩.೭ | ಕುದುರೆ |
| ,, | ೧.೩೨ | ಸಿಂಹ |
| ಹರಿಚಂದನ | ೮.೫೨ | ಹಳದಿ ಬಣ್ಣದ ಗಂಧ |
| ಹರಿತ | ೮.೨೬ ಗದ್ಯ | ಹಸುರು |
| ಹರಿತಶಿಲಾ | ೫.೪೧ | ಪಚ್ಚೆಯ ಬಂಡೆ |
| ಹಸ್ತ | ೭.೩೬ | ಸಮೂಹ |
| ಹಾರೀತಕ | ೫.೪೧ | ಒಂದು ಜಾತಿಯ ಪಾರಿವಾಳ |
| ಹಾಸ | ೩.೨೨ | ನಗು |
| ಹುತವಹ | ೧.೭೪ | ಅಗ್ನಿ |
| ಹೃದಯಭವ | ೫.೮೪ | ಮನ್ಮಥ |
| ಹೇತು | ೮.೪ | ಕಾರಣ |
| ಹೇಷಾ | ೭.೦ ಗದ್ಯ | ಕೆನೆಯುವ ಶಬ್ದ |

WD 381—GPB—2000—11-9-44